ಸಂ. 4–1

# ಅನಿಕೇತನ

(ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ)

---

**ಈ ಸಂಚಿಕೆಯಲ್ಲಿ :**

- ಏಷಿಯಾ ಖಂಡದ ಕತೆಗಳು
- ಏಷಿಯಾ ಖಂಡದ ಕವಿತೆಗಳು
- ಸ್ಕ್ಯಾಂಡಿನೇವಿಯಾ ಕವಿತೆಗಳು

---



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು

ಸಂ. 4–1
ಏಪ್ರಿಲ್ 1991–ಜೂನ್ 1991

# ಅನಿಕೇತನ

(ಅನುವಾದ ಸಾಹಿತ್ಯಕ್ಕೆ ಮೀಸಲಾದ ತ್ರೈಮಾಸಿಕ)

ಸಂಪಾದಕರು :
ಬಿ. ವೈ. ಲಲಿತಾಂಬ
ಡಾ. ಆರ್ವಿಯೆಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ



ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು – 560 002

ಅನಿಕೇತನ
ಕರ್ನಾಟಕ ಸಾಹಿತ್ಯ ಅಕಾಡೆಮಿಯ ತ್ರೈಮಾಸಿಕ
ಸಂ. 4-1, ಏಪ್ರಿಲ್ 1991 - ಜೂನ್ 1991

ನಿರ್ವಾಹಕರು :
ರಿಜಿಸ್ಟ್ರಾರ್
ಕರ್ನಾಟಕ ಸಾಹಿತ್ಯ ಅಕಾಡೆಮಿ
ನಂ. 14/7-ಅ, ನೃಪತುಂಗ ರಸ್ತೆ
ಬೆಂಗಳೂರು - 560 002

ವಾರ್ಷಿಕ ಚಂದಾ : ರೂ. 10
ಆಜೀವ ಚಂದಾ : ರೂ. 100

ಮುದ್ರಕರು :
ರಶ್ಮಿ ಮುದ್ರಣ
ಸುಧಾಮನಗರ, ಬೆಂಗಳೂರು - 560 027



## ಪರಿವಿಡಿ

ಚಿಂತನ



ಸೃಷ್ಟಿ – ೧

ಸೃಷ್ಟಿ – ೨



ಸ್ಕಾಂಡಿನೇವಿಯಾ ಕವಿತೆಗಳು

# ಟಾಲ್‌ಸ್ಟಾಯ್ ಗಾಂಧೀಜಿಯವರಿಗೆ ಬರೆದ ಪತ್ರ

ಅನು : ಬಿ. ಎಸ್. ಪದ್ಮಾವತಿ

ಕೋಟ್‌ಶೆಟೆ, 7 ಸೆಪ್ಟೆಂಬರ್ 1910

ನಿಮ್ಮ 'ಇಂಡಿಯನ್ ಒಪೀನಿಯನ್' ಎಂಬ ಪತ್ರಿಕೆ ನನ್ನ ಕೈ ಮುಟ್ಟಿದೆ. ಆದರಲ್ಲಿ ಸತ್ಯಾಗ್ರಹವನ್ನು ಕುರಿತು ಬರೆದಿರುವುದನ್ನು ಓದಿ ನನಗೆ ಸಂತೋಷ ವಾಯಿತು. ಇದರಲ್ಲಿನ ಲೇಖನಗಳನ್ನು ಓದಿ ನನಗನಿಸಿದ್ದನ್ನು ತಿಳಿಸಬಯಸು ತ್ತೇನೆ.

ನನಗೆ ಕೊನೆಗಾಲ ಸಮೀಪಿಸುತ್ತಲಿದೆ. ಇತ್ತೀಚೆಗೆ ನನ್ನ ಮನಸ್ಸಿನ ತುಮುಲ ವನ್ನು ಅತಿ ಮಹತ್ವದ್ದೆಂದು ಭಾವಿಸಿ ನಾನು ಬೇರೆಯವರ ಮುಂದೆ ಅವುಗಳನ್ನು ತೋಡಿಕೊಳ್ಳಬೇಕೆಂದು ಒದ್ದಾಡುತ್ತೇನೆ. ಕೆಟ್ಟದ್ದಕ್ಕೆ ಪ್ರತೀಕಾರ ಭಾವನೆ ಬರಬಾರ ದೆಂದು ಹೇಳುವೆನು. ಪ್ರೇಮದ ಅಧಿಕಾರ ಶಾಸನವೇ ಹೊರತು ಮತ್ತೇನೂ ಅಲ್ಲ. ಸುಳ್ಳಿನ ವಿವರಣೆಯ ವಿಚಾರ ಇದಕ್ಕೆ ಅಂಟುವುದಿಲ್ಲ. ಬೇರೆಯವರೊಡನೆ ತಾದಾತ್ಮ್ಯ ಹೊಂದಿ ಏಕಾಗ್ರಗೊಳ್ಳುವ ಅಭಿಲಾಷೆಯೇ ಪ್ರೇಮ. ಅಂತಹ ಅಭಿಲಾಷೆ ಯಾವಾ ಗಲೂ ಸತ್ಕರ್ಮಗಳ ಕಡೆಗೆ ಪ್ರೇರೇಪಿಸುತ್ತದೆ.

ಪ್ರೇಮವಿದ್ದಲ್ಲಿ ಪ್ರತೀಕಾರ ಮೂಡುತ್ತದೆ ಎಂದು ನಾವು ಒಪ್ಪಿಕೊಂಡರೆ ಪ್ರೇಮದ ಅಸ್ತಿತ್ವ ಕೊನೆಗೊಳ್ಳುತ್ತದೆ ಹಾಗೂ ಪ್ರೇಮ ಜೀವನದ ಧರ್ಮವಾಗಿ ಉಳಿ ಯುವುದಿಲ್ಲ. ಪ್ರೇಮ ನಾಶಗೊಂಡರೆ ಹಿಂಸೆ, ಬಲವಿದ್ದವನಿಗೆ ಜಯ ಎಂಬ ತತ್ವ ಉಳಿದುಕೊಂಡು ಮಿಕ್ಕೆಲ್ಲಾ ತತ್ವಗಳೂ ಹೇಳ ಹೆಸರಿಲ್ಲದಂತಾಗುತ್ತವೆ. ಕಳೆದ 19 ಶತಮಾನಗಳಿಂದಲೂ ಕ್ರಿಶ್ಚಿಯನ್ ಸಮಾಜ ಹೀಗೆಯೇ ಉಳಿದುಕೊಂಡು ಬಂದಿದೆ. ಹಿಂದಿನ ಈ ಅವಧಿಯಲ್ಲಿ ಸಮಾಜವನ್ನು ಸಂಘಟಿಸಲು ಬರಿಯ ಹಿಂಸಾತ್ಮಕ ಸಾಧನ ಗಳನ್ನು ಬಳಸುತ್ತಾ ಬಂದಿದ್ದಾರೆ. ಕ್ರಿಶ್ಚಿಯನ್ ಹಾಗೂ ಇತರೆ ಧರ್ಮಗಳ ನಡು ವಿನ ವ್ಯತ್ಯಾಸವೆಂದರೆ, ಇಷ್ಟೆಂದು ಹೇಳಬಹುದು, ಕ್ರಿಶ್ಚಿಯನ್ನರು ಪ್ರೇಮದ ಧರ್ಮಕ್ಕೆ ಸ್ಪಷ್ಟವಾದ ಅಭಿವ್ಯಕ್ತಿ ನೀಡಿರುವ ಹಾಗೆ ಬೇರೆ ಯಾವ ಧಾರ್ಮಿಕ ಸಿದ್ಧಾಂತದಲ್ಲೂ ಅವಕಾಶ ನೀಡಿಲ್ಲ ಎಂಬ ಅಂಶವನ್ನು ನಾವು ಗಮನಿಸಬಹುದು.

ಮಾಸ್ಕೋದಲ್ಲಿ ಈ ವರ್ಷದ ವಸಂತ ಋತುವಿನಲ್ಲಿ ಒಂದು ಹೆಣ್ಣು ಮಕ್ಕಳ ಮಾಧ್ಯಮಿಕ ಪಾಠಶಾಲೆಯಲ್ಲಿ ಧಾರ್ಮಿಕ ಪರೀಕ್ಷೆಗಳನ್ನು ನಡೆಸುತ್ತಿದ್ದರು. ಆಗ

ಪರೀಕ್ಷಕರು ಹಾಗೂ ಪಾದರಿ ಇಬ್ಬರೂ ಆ ಹೆಣ್ಣು ಮಕ್ಕಳನ್ನು ಧರ್ಮದ ಅಪ್ಪಣೆಗಳಲ್ಲಿ ಆರನೆಯ ಅಪ್ಪಣೆಯಾದ 'ಕೊಲ್ಲಬೇಡ' ಎಂಬುದನ್ನು ಕುರಿತು ಪ್ರಶ್ನೆ ಕೇಳಿದ್ದರು.

ಈ ದುರ್ದೈವಿ ಹೆಣ್ಣು ಮಕ್ಕಳಲ್ಲಿ ಒಬ್ಬಳನ್ನು, 'ಹತ್ಯೆ ಯಾವ ಪರಿಸ್ಥಿತಿಯಲ್ಲೂ ಅಪರಾಧವಾಗುತ್ತದೆಯೇ' ಎಂಬ ಪ್ರಶ್ನೆ ಕೇಳಿದರು. ಆದರೆ ಆ ಹುಡುಗಿ ಸ್ವಲ್ಪ ನಾಚಿ ಕೊನೆಗೆ ಖಚಿತವಾಗಿ ಉತ್ತರ ನೀಡಿದಳು, 'ಹೌದು ಯಾವಾಗಲೂ ಅಪರಾಧ' ಎಂದಳು. (ಈಗ ನಾನು ಹೇಳುತ್ತಿರುವುದು ನಡೆದಿರುವ ವಾಸ್ತವ ಘಟನೆ, ಕಲ್ಪನೆಯಲ್ಲ, ಇದನ್ನು ಅಲ್ಲಿಯೇ ಇದ್ದು ನೋಡಿದವರೊಬ್ಬರು ನನಗೆ ತಿಳಿಸಿದರು.) ಪಾದರಿಗೆ ಸಾಮಾನ್ಯವಾಗಿ ಔಪಚಾರಿಕವಾದ ಉತ್ತರಗಳನ್ನು ಕೇಳಿ ಅಭ್ಯಾಸವಾಗಿತ್ತು. ಎಲ್ಲರ ಪ್ರಶ್ನೆಗೂ ದೃಢತೆಯಿಂದ ಆ ಹುಡುಗಿ ಉತ್ತರಿಸಿ ಹೇಳಿದಳು. 'ಓಲ್ಡ್ ಟೆಸ್ಟಮೆಂಟ್‌ನಲ್ಲಿ ಎಲ್ಲ ವಿಧವಾದ ಹತ್ಯೆಯನ್ನೂ ನಿಷೇಧಿಸಲಾಗಿದೆ, ಏಸುವೇ ಇದನ್ನು ನಿಷೇಧಗೊಳಿಸಿದ್ದಾನೆ'. ಪಾದರಿ ತನ್ನ ಎಲ್ಲ ಬಣ್ಣಕಟ್ಟಿದ ಮಾತುಕತೆಯಲ್ಲಿ ಅವಳನ್ನು ಸಿಲುಕಿಸಲು ಪ್ರಯತ್ನಿಸಿದರೂ ಕೊನೆಗೆ ತನ್ನ ಮಾತಿನ ಜಾಣ್ಮೆಯಿಂದ ಆ ಹುಡುಗಿಯೇ ಗೆದ್ದಳು.

ರಷ್ಯಾದಲ್ಲೂ ಇದೇ ವಿಧವಾದ ಚಳುವಳಿ ರೂಪುಗೊಳ್ಳುತ್ತಿದೆ ಎಂದು ನಾನು ಹೇಳಿದರೆ ನಿಮಗೆ ಆಶ್ಚರ್ಯವೆನಿಸಬಹುದು. ಆದರಿಂದಲೇ ಜನ ಈಗ ಸೇನಾಸೇವೆಗೆ ಭರ್ತಿಯಾಗಲು ನಿರಾಕರಿಸುತ್ತಿದ್ದಾರೆ. ಹೀಗೆ ಅಸಹಯೋಗ ಆಂದೋಳನದಲ್ಲಿ ಭಾಗವಹಿಸುವವರು ಮತ್ತು ಸೇನಾಸೇವೆಗೆ ಭರ್ತಿಯಾಗಲು ನಿರಾಕರಿಸುವವರು ಕಡಿಮೆ ಸಂಖ್ಯೆಯಲ್ಲಿದ್ದರೂ ನಾವು 'ದೇವರು ನಮ್ಮ ಜೊತೆಗಿದ್ದಾನೆ', 'ದೇವರು ಮನುಷ್ಯನಿಗಿಂತ ಶಕ್ತಿಶಾಲಿಯಾದುದರಿಂದ ನಮಗೆ ಚಿಂತೆಯಿಲ್ಲ' ಎಂದು ಧೈರ್ಯವಾಗಿ ಹೇಳಬಹುದು.

ನಮ್ಮ ಕ್ರಿಶ್ಚಿಯನ್ ಸಮಾಜ ಒಪ್ಪಿಕೊಂಡಿರುವ ಸತ್ಯ ವಿಕೃತ ರೂಪದಲ್ಲಿ ಸಿಕ್ಕರೂ, ಈ ಒಪ್ಪಿಕೊಂಡಿರುವ ಆದರ್ಶಗಳ ವಿಕಾರ ರೂಪಗಳು ಮತ್ತು ಹತ್ಯೆ ಮಾಡುವ ಸಿದ್ಧತೆಗಳು ಹೆಚ್ಚಾಗುತ್ತಿರುವ ಈ ಸಂದರ್ಭದಲ್ಲಿ ಸೈನಿಕ ಸೇವೆಯನ್ನು ಸಜ್ಜುಗೊಳಿಸುವುದು ಅನಿವಾರ್ಯವಾಗಿದ್ದರೂ, ಅದನ್ನು ವಿರೋಧಿಸುತ್ತಿರುವವರೂ ಇಂದಲ್ಲ ನಾಳೆ ಬೆಳಕಿಗೆ ಬಂದೇ ಬರುತ್ತಾರೆ. ಆ ಪರಿಸ್ಥಿತಿಯಲ್ಲಿ ನಾವು ಕ್ರಿಶ್ಚಿಯನ್ ಧರ್ಮಕ್ಕೆ ತಿಲತರ್ಪಣ ಕೊಟ್ಟು ರಾಜ್ಯದ ಶಾಸನವನ್ನು ಒಪ್ಪಿಕೊಂಡು ರಾಜ್ಯದಿಂದ ನಿಯಮಿತವಾದ ಸೈನ್ಯ ಅಥವಾ ಯಾವುದೇ ತೆರವಾದ ಹಿಂಸೆಯನ್ನು ಪರಿತ್ಯಾಗ ಮಾಡಬೇಕಾಗುತ್ತದೆ. ಎಲ್ಲ ಸರಕಾರಗಳೂ ಈ ಒಳತೋಟಿಯನ್ನು ಗಮನಿಸುತ್ತಲಿವೆ. ಆದುದರಿಂದಲೇ ತಮ್ಮ ಶಾಸನವನ್ನು ಯಥಾವತ್ತಾಗಿ ಉಳಿಸಿಕೊಳ್ಳುವುದಕ್ಕಾಗಿ ವಿರೋಧ ಪಕ್ಷಗಳಿಗೆ ಕಿರುಕುಳ ಕೊಡುತ್ತಲಿದ್ದಾರೆ. ನಮ್ಮ ರಷ್ಯಾದಲ್ಲಿ ಹಾಗೂ

ನಿಮ್ಮ ಪತ್ರಿಕೆಯ ದಾಖಲೆಗಳನ್ನು ನೋಡಿದಾಗಲೂ, ಎಲ್ಲೂ ಸರ್ಕಾರಗಳು ಯಾವುದೇ ಶಾಸನ ವಿರುದ್ಧ ಕಾರ್ಯಕ್ರಮಗಳಿಗೆ ಬೆಲೆ ಕೊಡುವುದಿಲ್ಲವೆಂದು ತಿಳಿಯುತ್ತದೆ. ವಿಪತ್ತು ಯಾವ ದಿಕ್ಕಿನಲ್ಲಿದೆ ಎಂದು ಸರಕಾರಗಳಿಗೆ ತಿಳಿದಿದೆ. ಆದರಿಂದ ತಮ್ಮನ್ನು ಉಳಿಸಿಕೊಳ್ಳಲು ಅವು ತಮ್ಮ ಸಾಧನಗಳನ್ನು ಉಳಿಸಿಕೊಳ್ಳಲು ಹೋರಾಟ ನಡೆಸಲು ಸಾಧ್ಯವಾಗುವಂತೆ ಪ್ರಯತ್ನಿಸುತ್ತಲಿವೆ.

# ಪಾಶ್ಚಾತ್ಯ ಸಭ್ಯತೆಯ ವಿದ್ರೋಹಿ ಯೆಹೂದೀ ಕವಿ ಜಿನ್ಸ್‌ಬರ್ಗ್

ಮೂಲ ಹಿಂದಿ : ನೇಮಿಶರಣ ಮಿತ್ತಲ್

ಕನ್ನಡಕ್ಕೆ : ಎಚ್. ಎಸ್. ದ್ವಾರಕಾನಾಥ

ಆದು ಪ್ರಪಂಚದ ಪಶ್ಚಿಮದಲ್ಲಿರಬಹುದು ; ಪೂರ್ವದಲ್ಲಿರಬಹುದು. ಎಲ್ಲಿದ್ದರೂ ವ್ಯಕ್ತಿ ಮತ್ತು ಸಮಾಜವನ್ನು ಅಧ್ಯಾತ್ಮಿಕ ಸತ್ಯದಿಂದ ದೂರವಾದ ಒಂದು ಇಂದ್ರಿಯ ಕೇಂದ್ರಿತ ನೆಲೆಗಟ್ಟಿನ ಮೇಲೆ ಸಹಜವಾಗಿ ತಂದಿಳಿಸುತ್ತದೆ. ಆ ನೆಲೆಗಟ್ಟು ನಿಶ್ಚಿತವಾಗಿ ವಾಸನಾ–ಸಾಮ್ರಾಜ್ಯವಾಗಿರುತ್ತದೆ. ಈ ಘಟ್ಟದಲ್ಲಿ ಶರೀರ ಭೋಗಕ್ಕೆ ಸಂಬಂಧಿಸಿದ ವಿಚಾರಗಳಾದರೆ ಮಾತ್ರ ಅರ್ಥವತ್ತಾಗಿದ್ದು, ಮಿಕ್ಕುಳಿದುದೆಲ್ಲ ವ್ಯರ್ಥವೆಂದೇ ಗೋಚರಿಸುತ್ತದೆ. ಮನುಷ್ಯ ಈ ಹಂತದಲ್ಲಿ ಬಂದು ನಿಂತು ಆತ್ಮದರ್ಶನದ ಒಲಸೆಯನ್ನು ತೊರೆಯುತ್ತಾನೆ. ಅರ್ಥಾತ್ ಅವನಲ್ಲಿ ಆತ್ಮದರ್ಶನ ಮಾಡಿಕೊಳ್ಳಬೇಕೆಂಬ ಆಸೆಯೇ ಉದ್ಭವವಾಗುವುದಿಲ್ಲ. ಈ ಆಕಾಂಕ್ಷೆಗಳೇನಿದ್ದರೂ ಅವು ಇಂದ್ರಿಯ ವಲಸೆ ಮತ್ತು ಭೋಗಚಿಂತನೆಯ ಮುಂದೆ ತಲೆ ಎತ್ತದೆಯೇ ಭೂಗತವಾಗಿ ಹೋಗುತ್ತವೆ. ಇವೆಲ್ಲ ನಡೆದೇ ನಡೆಯುತ್ತವೆ, ನಿಜ. ಆದರೆ ಎಲ್ಲಕ್ಕಿಂತ ಹೆಚ್ಚಿನ ವಿಡಂಬನೆಯೆಂದರೆ ಸಮಾಜ ಹೀನತರವಾದ ವಾಸನಾಮಯ ಹೊಲಸಿನಲ್ಲಿ ಸಂಪೂರ್ಣ ಮುಳುಗಿ ಹೋಗಿರುವಾಗ ಸರಿಯಾಗಿ ಅದೇ ಸಮಯಕ್ಕೆ, ಆ ನಗ್ನನೃತ್ಯದ ಮೇಲೆ ಸಭ್ಯತೆ ತನ್ನ ಔಪಚಾರಿಕತೆಯ ಚಾದರವನ್ನು ಹೊದಿಸುತ್ತದೆ. ಅದರಡಿಯಲ್ಲಿ ಇಡೀ ವಿಶ್ವ, ಹೊಲಸು ಜೋತುಬಿದ್ದಿರುತ್ತದೆ.

ಈ ಚಾದರದ ಒಂದು ಮೂಲೆಯನ್ನು ಮೇಲೆತ್ತಿ, ಅದರ ಕೆಳಗೆ ಬಚ್ಚಿಟ್ಟಿರುವ ಸತ್ಯವನ್ನು ಹೊರಕ್ಕೆ ಸೆಳೆಯುವಂತಹ ಕೆಲವು ವ್ಯಕ್ತಿಗಳಿದ್ದಾರೆ. ಆದರೆ ಸಭ್ಯತೆಯ ಗುತ್ತಿಗೆದಾರಿಕೆ ಪಡೆದುಕೊಂಡಿರುವ ಪ್ರಪಂಚ, ಈ ತೋರ್ಪಡಿಕೆಯ ಚಾದರದ ಕಾವಲುಗಾರರೂ ಹೌದು. ಜೊತೆಗೆ ಸೊಫಿಸ್ಟಿಕೇಟ್ ನೈತಿಕತೆಯ ಧುರಂಧರರೂ ಕೂಡ. ಈ ಮಂದಿಗೆ ಚಾದರವನ್ನು ಮೇಲೆತ್ತಿ ಸತ್ಯವನ್ನು ಬಹಿರಂಗಗೊಳಿಸುವ ವ್ಯಕ್ತಿಗಳು 'ಫಿಲ್ಥೀ ಇನ್ಬ್ರೋವರ್ಟ್ಸ್' (Filthy Inbroverts). ಎಂದರೆ 'ಹೊಲಸು

ಅಂತರ್ಮುಖಿ'ಗಳಾಗಿರುವವರು. ಇಂತಹ ಭೀಭತ್ಸ ಅಂತರ್ಮುಖಿ ಕಲಾವಿದ ಮತ್ತು ಕವಿಗಳಲ್ಲಿ ಒಬ್ಬ–ಅಲೆನ್ ಜಿನ್ಸ್‌ಬರ್ಗ್.

ಜಿನ್ಸ್‌ಬರ್ಗ್ ಹುಟ್ಟಿದ್ದು ನ್ಯೂಜೆರ್ಸಿಯ ಪಿಟರ್‌ಸನ್ ಪಟ್ಟಣದ ಒಂದು ಯೆಹೂದಿ ವಾಮಪಕ್ಷೀಯ ನಾಸ್ತಿಕ ರಷಿಯಾ ಕುಟುಂಬವೊಂದರಲ್ಲಿ. ಆತನ ತಂದೆ ಒಬ್ಬ ಉಪಾಧ್ಯಾಯ ಮತ್ತು ಕವಿ ಕೂಡ. 1945ರಲ್ಲಿ ಜಿನ್ಸ್‌ಬರ್ಗ್‌ಗೆ 18 ವರ್ಷವಾಗಿದ್ದಾಗ ಕೊಲಂಬಿಯಾ ವಿಶ್ವವಿದ್ಯಾಲಯ ಸೇರಿದ. ಇದೇ ಸಂದರ್ಭದಲ್ಲಿ ಶೋಷಿತ ಮಾನವ ಸಂಕುಲದ ಅದುಮಿಟ್ಟ ಭಾವನೆಗಳಿಗೆ ಧ್ವನಿ ಕೊಡುವ ಕವಿ ತಾನು ಎಂಬ ಭಾವನೆ ಆತನಲ್ಲಿ ಖಚಿತವಾಗಿ ಮನೆ ಮಾಡಿತು. ತಾನು ಹುಟ್ಟಿದ್ದೇ ಪ್ರೇಮ ಮತ್ತು ಮುಕ್ತ–ಹಿತ ಪಕ್ಷ ವಹಿಸಲೆಂದೇ ಎಂಬ ಚಿಂತನೆ ಆತನ ಬದುಕನ್ನೆಲ್ಲ ವ್ಯಾಪಿಸಿತು. ಅವನು ಹುಟ್ಟಿನಿಂದಲೇ ಸೌಂದರ್ಯಾನುರಾಗಿ. ಹಣದ ಮುಗ್ಗಟ್ಟಿನಿಂದಾಗಿ ಅವನು ಹೋಟೆಲ್‌ನಲ್ಲಿ ಪಾತ್ರೆ ತೊಳೆಯುತ್ತಿದ್ದಾಗ, ಕಾರ್ಖಾನೆಗಳಲ್ಲಿ ವೆಲ್ಡಿಂಗ್ ಕೆಲಸ ಮಾಡುವಾಗ, ಅಥವಾ ರಾತ್ರಿ ವೇಳೆ ಕೂಲಿ ಮಾಡುವಾಗ—ಆಗ ಕೂಡ ಆತನ ಮನಸ್ಸಿನಲ್ಲಿ ತನ್ನ ಬಗ್ಗೆ ಖಚಿತ ಭಾವನೆಗಳಿದ್ದವು. ಮಾತ್ರವಲ್ಲ; ತನ್ನ ಜೀವನ ನಗ್ನಸತ್ಯವನ್ನು ಬಹಿರಂಗ ಪಡಿಸಲೆಂದೇ ಎಂಬ ಅಂಶವನ್ನು ತಾನು ಎಂದಿಗೂ ಮರೆಯುವಂತಿಲ್ಲ. ಪರಿಚಿತರಿಂದ ದೂರವಾಗಿದ್ದು ಬಡವಠಾರಗಳ ಆರನೆಯ ಅಂತಸ್ತಿನ ಕತ್ತಲ ಕೋಣೆಯಲ್ಲಿ, ಕುಳಿತು ಜಿನ್ಸ್‌ಬರ್ಗ್ ಬರಹದಲ್ಲಿ ತೊಡಗಿದ್ದ. ಅದೇ ಸಮಯದಲ್ಲಿ ಆತ ಪ್ರಾಯಶಃ ರೊಟ್ಟಿ ಪಲ್ಲೆ ತಿನ್ನುವ ತಾನೊಬ್ಬನೇ ಕುಳಿತು ಸೈಂಟ್ ಜಾನ್ ಆಫ್ ದಿ ಕ್ರಾಸ್, ಪ್ಲೇಟೋ, ಬ್ಲೇಕ್ ಹಾಗೂ ಪ್ಲೋಟಿನಸ್‌ರ ಸಾಹಿತ್ಯ ಅಧ್ಯಯನ ನಡೆಸುತ್ತಿದ್ದ ಎಂದು ತೋರುತ್ತದೆ. ಕಿಟಕಿಯ ಬಾಗಿಲುಗಳನ್ನು ತೆರೆದಿಟ್ಟು ಆತ ಒಂದು ದಿನ ಹಾಸಿಗೆಯ ಮೇಲೆ ಒರಗಿಕೊಂಡು ಬ್ಲೇಕ್ ಮಹಾಶಯನ ಕೃತಿಗಳ ಅಧ್ಯಯನ ನಡೆಸಿದ್ದ. ಓದುತ್ತ ಓದುತ್ತ ಕುಳಿತಂತೆ ಆತನ ಕಿವಿಯಲ್ಲಿ ಒಂದು ಧ್ವನಿ ಮೊಳಗಿತು—ಬ್ಲೇಕ್‌ನ ಸೂರ್ಯಮುಖಿಯ ಧ್ವನಿ ಅದು.

ಜಿನ್ಸ್‌ಬರ್ಗ್ ಈ ಬಗ್ಗೆ ಬರೆಯುತ್ತಾನೆ—ಆ ಧ್ವನಿ ಆಳವಾದ ಸ್ಪಂದನ ಹೊಂದಿತ್ತು. ತಂದೆಯ ಧ್ವನಿ ಇದ್ದ ಹಾಗೆ ಎಂದುಕೊಳ್ಳಿ. ಬಹಳಷ್ಟು ಸುಕೋಮಲ, ತೀರ ವಾಸ್ತವಿಕ, ಗಂಭೀರ, ಗಹನ. ಆ ಧ್ವನಿ ಹೀಗೆ ಹೇಳಿತೆಂದು ತೋರುತ್ತದೆ: "ಓಹ್, ಕಾಲದ ಆಘಾತವನ್ನು ಸಹಿಸಿಕೊಳ್ಳಬಲ್ಲ ಸೂರ್ಯಮುಖಿ, ನೀನು ಸೂರ್ಯನ ಚರಣಗಳನ್ನು ಗಳಿಸುತ್ತ ಹೋಗುತ್ತೀಯೆ, ಆ ಅಪೂರ್ಣ ಸೂರ್ಯ ಉತ್ಕರ್ಷವನ್ನು ಅರಸುತ್ತ ನಡೆಯುತ್ತೀಯೆ, ಪಥಿಕನ ಯಾತ್ರೆ ಅಲ್ಲೆಲ್ಲೋ ನಿಂತು ಹೋಗಬಹುದು, ಆದರೆ ಅಭೀಪ್ಸ ಪೀಡಿತ, ತರುಣ, ಹಿಮಾವೃತ ಪೀತ ಕುಮಾರಿ, ನೆಲದಳಲುಗಳಿಂದ ಕಟ್ಟಿ ಹಿಡಿದಿಟ್ಟಿದ್ದರೂ ನಿನ್ನ ಆಕಾಂಕ್ಷೆಯ ಭಾವನೆ ಎದ್ದು ಮೇಲೆದ್ದು ಹೊರಟಿಹುದು. ಓ ನನ್ನ ಸೂರ್ಯಮುಖಿಯ ಲಕ್ಷ್ಯವೇ!" ಆ ಧ್ವನಿಯು ಇಚ್ಛೆ

ಮತ್ತು ಅಭೀಪ್ಸೆಗಳ ಬಗ್ಗೆ ಏನನ್ನೋ ಹೇಳಿತೆಂದೆನಿಸಿತು ಎಂದಿದ್ದಾನೆ ಜಿನ್ಸ್‌ಬರ್ಗ್. ಆ ಇಚ್ಛೆಗೆ ಪ್ರತ್ಯುತ್ತರ ಬರುತ್ತಿದೆಯೇನೋ ಎನಿಸಿತು. ಅದೇ ಸಮಯದಲ್ಲಿ ಆತನ ಮನೋ ಮಂಡಲದಲ್ಲಿ ಒಂದು ಜ್ಯೋತಿಕಿರಣ ಪ್ರಜ್ವಲಿಸಿದಂತಾಯಿತು.

ಹಸ್ತಪ್ರತಿಗಳನ್ನು ಒಂದು ಕಾರಿನಲ್ಲಿ ತುಂಬಿಕೊಂಡು ಅಲ್ಲಿಂದ ತನ್ನ ಸೋದರನ ಮನೆಗೆ ಹೊರಟ. ಹಸ್ತಪ್ರತಿಗಳನ್ನೆಲ್ಲ ಸೋದರನ ಮನೆಯಲ್ಲಿಟ್ಟು ತಾನು ಬಹು ದೂರ ಹೊರಟು ಹೋಗಬೇಕೆಂದು ಆತ ಯೋಚಿಸಿದ್ದ. ಆದರೆ ಮಾರ್ಗಮಧ್ಯದಲ್ಲಿ ಕಾರ್ ಆಕಸ್ಮಿಕ ದುರ್ಘಟನೆಗೊಳಗಾಗಿ, ಜಿನ್ಸ್‌ಬರ್ಗ್ ಮಾತ್ರ ಅದರಿಂದ ಹೇಗೋ ಬಚಾವಾದ. ಆತನ ಎಲ್ಲ ಹಸ್ತಪ್ರತಿಗಳೂ ಕಾರ್‌ನಲ್ಲಿಯೇ ಉಳಿದಿತ್ತು. ಮನೆಯನ್ನು ತಲುಪಿದ ಮರುಕ್ಷಣವೇ ಕೆಲವು ಪೋಲೀಸರು ಬಂದು ಜಿನ್ಸ್‌ಬರ್ಗ್‌ನನ್ನು ಸೆರೆಯಾಳಾಗಿಸಿ ಕೊಂಡೊಯ್ದರು. ಮಾರನೆಯ ದಿನ ವೃತ್ತ ಪತ್ರಿಕೆಗಳಲ್ಲಿ ಇವನ ದಸ್ತಗಿರಿಯ ಬಗ್ಗೆ ಪ್ರಕಟವಾಗಿ ಅದರಲ್ಲಿ ಈತನ ಹೆಸರು ಕೊಲಂಬಿಯಾ ಕಾಲೇಜಿನ ಅಪರಾಧಿಗಳ ಹೆಸರೊಡನೆ ಸೇರಲ್ಪಟ್ಟಿತ್ತು. ತಕ್ಷಣವೇ ಪೋಲೀಸರು ಜಿನ್ಸ್‌ಬರ್ಗ್‌ನನ್ನು ಒಂದು ಮಾನಸಿಕ ಚಿಕಿತ್ಸಾಲಯಕ್ಕೆ ಕೊಂಡೊಯ್ದರು. ಜಿನ್ಸ್‌ಬರ್ಗ್ ಮಾನಸಿಕ ರೋಗಿಯಿರಬಹುದೆಂಬ ಅನುಮಾನ ಅವರಿಗೆ ಬಂತು. ಮುಂದಿನ ಎಂಟು ತಿಂಗಳು ಜಿನ್‌ಬರ್ಗ್ ಆ ಚಿಕಿತ್ಸಾಲಯದಲ್ಲಿಯೇ ಕಳೆಯಬೇಕಾಗಿ ಬಂತು. ಹಾವೆಲ್‌ನ ಹುಚ್ಚನ ಪಾತ್ರದಲ್ಲಿನ ಕಾರ್ಲ್ ಸುಲೇಮಾನ್ ಜೊತೆ ಭೇಟಿ ಇಲ್ಲಿಯೇ ಆದದ್ದು. ಕಾರ್ಲ್‌ನನ್ನು ಗಮನದಲ್ಲಿರಿಸಿಕೊಂಡು ಹಾವೆಲ್‌ನಲ್ಲಿ ಹೀಗೆ ಹೇಳಿದ್ದಾನೆ ಜಿನ್ಸ್‌ಬರ್ಗ್ 'ನಾನು ನನ್ನ ತಲೆಮಾರಿನ ಶ್ರೇಷ್ಠ ಬುದ್ಧಿಜೀವಿಗಳು ಹುಚ್ಚು ಹಿಡಿದು, ಹಸಿವಿನಿಂದ ನರಳಿದ್ದನ್ನು ಕಣ್ಣಾರೆ ಕಂಡಿದ್ದೇನೆ' ಎಂದು. ಜಿನ್ಸ್‌ಬರ್ಗ್ ಮತ್ತು ಕಾರ್ಲ್‌ರ ಈ ಭೇಟಿ ಬಹಳ ತಮಾಷೆಯಾಗಿತ್ತು. ಜಿನ್ಸ್‌ಬರ್ಗ್‌ನನ್ನು ಕಾರ್ಲ್ ಕೇಳಿದ : ಯಾರು ನೀನು ? ಜಿನ್ಸ್‌ಬರ್ಗ್ ಉತ್ತರಿಸಿದ ಮಿಶ್ಕಿನ್. ಇದಕ್ಕೆ ಕಾರ್ಲ್ ಮರು ಉತ್ತರಿಸಿದ : ಹಾಗಿದ್ದರೆ ನಾನು ಕಿರಿಲೋವ್.

ಮಾನಸಿಕ ಚಿಕಿತ್ಸಾಲಯದಿಂದ ಹೊರಬಂದ ನಂತರ ಜಿನ್ಸ್‌ಬರ್ಗ್ ವಿಮರ್ಶನಾ ಕಾರ್ಯದ ಪ್ರತಿಷ್ಠಿತ ವೃತ್ತಿಯಲ್ಲಿ ತೊಡಗಿದ. ಪ್ರವಾಸದ ಅವಕಾಶ ದೊರಕಿತು. ಒಂದಿಷ್ಟು ಕವಿತೆಗಳನ್ನೂ ಬರೆದ. ಆದರೆ ಇವಿಷ್ಟೆ ಆತನನ್ನು ಸಂತುಷ್ಟನನ್ನಾಗಿರಿಸಲು ಸಾಧ್ಯವಾಗಲಿಲ್ಲ. ಸೋಗಿನ ಸಭ್ಯ ಸಮಾಜ ಆತನನ್ನು ಕಾಡುತ್ತಿರಲಿಲ್ಲ, ನಿಜ. ಆದರೆ ಇದರಿಂದ ಸಮಾಧಾನ ದೊರಕುವುದಿಲ್ಲ. 1955ರಲ್ಲಿ ಈತ ಸಾನ್‌ಫ್ರಾನ್ಸಿಸ್ಕೋವಿನ ಒಬ್ಬ ಮಾನಸಿಕ ಚಿಕಿತ್ಸಕನ ಬಳಿ ಹೋಗಿ ಅಲ್ಲಿಯೇ ಒಂದು ವರ್ಷ ಕಳೆದ. ಚಿಕಿತ್ಸಕ ಇವನನ್ನು ಕೇಳಿದ– "ಕಡೆಗೆ ನೀನು ಏನು ಮಾಡಬೇಕೆಂದಿದ್ದೀಯೆ ?" ಎಂದು. ಜಿನ್ಸ್‌ಬರ್ಗ್ ಒಂದೇ ಉತ್ತರ ಕೊಟ್ಟಿದ್ದು– "ನಾನು ಈ ಉದ್ಯೋಗ, ಟೈ, ಸೂಟ್, ಮನೆ, ಎಲ್ಲವನ್ನೂ ಬಿಟ್ಟು ಬಿಡಲು ಇಚ್ಛಿಸಿದ್ದೇನೆ. ಆದರೆ ನನಗೆ ಒಂದೇ ಒಂದು

ಆಸೆ – ನಾನು ಒಂದಿಷ್ಟು ಬರೆಯಬೇಕೆಂದಿದ್ದೇನೆ, ಒಂದಿಷ್ಟು ವಿಚಾರ ಮಾಡಬೇಕೆಂದಿದ್ದೇನೆ, ಬ್ಲೇಕ್ ಸಾಹಿತ್ಯವನ್ನು ಅನುಶೀಲನೆ ಮಾಡಬೇಕೆಂದಿದ್ದೇನೆ, ಬೇಕು ಬೇಕೆನಿಸಿದಷ್ಟು ಸಿಗರೇಟ್ ಸೇದಬೇಕೆಂದಿದ್ದೇನೆ – ಮತ್ತು ಮನಸ್ಸಿಗೆ ಬಂದದ್ದನ್ನು ಮಾಡಬೇಕೆಂದಿದ್ದೇನೆ." ಚಿಕಿತ್ಸಕರು ತಕ್ಷಣ ಜಿನ್ಸ್‌ಬರ್ಗ್‌ಗೆ ಹೇಳಿದರು– "ಹಾಗಿದ್ದರೆ ನೀನಿನ್ನು ಹೋಗಬಹುದು, ನಿನ್ನ ಮನಸ್ಸಿಗೆ ಬಂದುದೆಲ್ಲವನ್ನೂ ಮಾಡಬಹುದು."

ಇದನ್ನು ಕೇಳಿ ಜಿನ್ಸ್‌ಬರ್ಗ್‌ಗೆ ಗಾಬರಿಯಾಯಿತು.

ಅವನು ಕೇಳಿದ– "ಆದರೆ ನಾನು ಮುದುಕನಾದಾಗ ನನ್ನ ಗತಿ ಏನು ? ಸುಸಜ್ಜಿತ ಕೋಣೆಯಲ್ಲಿ ನಾನು. ನನ್ನ ಶರೀರದ ಮೇಲೆ ಕೊಳಕು ಸಮಸ್ಯೆಗಳು. ನನ್ನನ್ನು ಯಾರೂ ಪ್ರೀತಿಸುವವರಿಲ್ಲ. ನನ್ನ ತಲೆಕೂದಲು ಬೆಳ್ಳಗಾಗಿ ಬಿಡುತ್ತದೆ, ಕೊನೆಗೆ ಸುತ್ತಮುತ್ತಲ ಜನ ನನ್ನ ಮೇಲೆ ಕರುಣೆದೋರಿ ಕೋಣೆಯೊಳಗೆ ರೊಟ್ಟಿಯ ತುಂಡುಗಳನ್ನು ಎಸೆಯುತ್ತಾರೆ..."

ಚಿಕಿತ್ಸಕ ಡಾಕ್ಟರು ನಕ್ಕು ಹೇಳಿದರು– "ಓ ನನ್ನ ಪ್ರಿಯಮಿತ್ರ. ಅವೆಲ್ಲದರ ಬಗ್ಗೆ ತಲೆ ಕೆಡಿಸಿಕೊಳ್ಳಬೇಡ... ನೀನು ಬಹಳ ಆಕರ್ಷಕ ವ್ಯಕ್ತಿ... ಹೀಗಾಗಿ ಜನ ಯಾವಾಗಲೂ ನಿನ್ನನ್ನು ಪ್ರೀತಿಸುತ್ತಾರೆ."

ಈ ಡಾಕ್ಟರು ಒಬ್ಬ ದೇವದೂತನೇನೋ ಎನಿಸಿತು ಜಿನ್ಸ್‌ಬರ್ಗ್‌ಗೆ. ಇವರು ನಿಜ ಹೇಳುತ್ತಾರೆ. ಇವರೂ ನನ್ನನ್ನು ಇಷ್ಟ ಪಡುತ್ತಾರೆ...

ಕೇವಲ ಇದಿಷ್ಟರಿಂದಲೇ ಜಿನ್ಸ್‌ಬರ್ಗ್‌ಗೆ ಹೊಸ ಚೈತನ್ಯ ಮೂಡಿ ಬಂದಿತು. ತನ್ನ ಸುತ್ತಮುತ್ತ ಇರುವುದೆಲ್ಲ ತನಗೆ ಅಪ್ಯಾಯಮಾನ ಎನಿಸಿತು. ಮಧ್ಯರಾತ್ರಿಯ ವರೆಗೂ ಹಾಸಿಗೆಯ ಮೇಲೆ ಕುಳಿತು ಪದ್ಯಗಳನ್ನು ಬರೆದದ್ದೇ ಬರೆದದ್ದು. ಮಾರನೆಯ ಮುಂಜಾವಿನ ಪರಿವೆಯಿಲ್ಲ.

ಇದೇ ಸಂದರ್ಭದಲ್ಲಿ ಜಿನ್ಸ್‌ಬರ್ಗ್ ತನ್ನ ಮೊದಲ ಕೃತಿ 'ಹಾವೆಲ್ ರಚಿಸಿದ್ದು. ಹಾವೆಲ್‌ನ ಸಂಪೂರ್ಣ ಪ್ರಥಮ ಖಂಡದ ರಚನೆ ಒಂದೇ ಮಧ್ಯಾಹ್ನದಿಂದ ಅದೇ ಸಂಜೆಯವರೆಗೆ ಒಂದೇ ಸ್ಥಳದಲ್ಲಿ ಕುಳಿತು ಮುಗಿಸಿದ್ದು. ಹಾವೆಲ್‌ನ ರಚನೆಯ ಸಮಯದಲ್ಲಿ ಜಿನ್ಸ್‌ಬರ್ಗ್‌ಗೆ ತನ್ನ ಲೇಖನ ಶಕ್ತಿಯ ಮೂಲಾಧಾರ ಪ್ರಾಪ್ತ ವಾಯಿತು. ತನ್ನ ವಾಸ್ತವಿಕ ಅನುಭವಗಳ ದಟ್ಟ ಹಿನ್ನೆಲೆಯಲ್ಲಿ ಬರಹ, ಕೇವಲ ತನ್ನ ಆತ್ಮಶ್ರವಣಕ್ಕಾಗಿ ತನ್ನ ಬದುಕಿನ ಸಾರ – ಸಂಗ್ರಹ, ತನ್ನ ಅಂತರಾಳದ ಅಂತ ಸ್ಸತ್ವವನ್ನು ಪರಿಕಿಸಿ, ಅದರಿಂದ ಪ್ರೇರಿತಗೊಂಡ ಸ್ಪಷ್ಟ ಅಭಿವ್ಯಕ್ತಿ, ಸಾಹಿತ್ಯದ ಸಮಕಾಲೀನ ಪರಿಧಿಯನ್ನು ದಾಟಿ, ಸಾಮಾಜಿಕ ಸೆಳೆತಗಳನ್ನು ಅದುಮಿಡುವ ಕಟ್ಟು ಪಾಡುಗಳ ಸಂಪೂರ್ಣ ಉಪೇಕ್ಷೆ - ಈ ಎಲ್ಲದರ ಕಾರಣ ಹುಟ್ಟು ತಳೆದ ಉನ್ಮುಕ್ತ ಅಭಿವ್ಯಕ್ತಿ. ಕೈರೋವಾಕ್‌ನ ಶಬ್ದಗಳಲ್ಲಿ ಹೇಳುವುದಾದರೆ ಜಿನ್ಸ್‌ಬರ್ಗ್ ತನ್ನ ಅಂತರ್ನಿಹಿತ ಚೈತನ್ಯದ ಗಡಿ ದಾಟಿ ಅವುಗಳಿಗೆ ಧ್ವನಿ ನೀಡಿದ. ಮ್ಯೂಜ್‌ನ ಹೇಳಿಕೆ

ಜಿನ್ಸ್‌ಬರ್ಗ್‌ಗೆ ಪ್ರೇರಣೆಆಗಿತ್ತು - ಅದೆಂದರೆ "ಮೂರ್ಖ, ನಿನ್ನ ಅಂತರಾಳವನ್ನು ಕೆದಕು, ಆಮೇಲೆ ಬರಿ". ಜೊತೆಗೆ ಕೈರೋವಾಕ್‌ನ ಎಚ್ಚರಿಕೆ ಕೂಡ ಜಿನ್ಸ್‌ಬರ್ಗ್‌ನ ಮನಸ್ಸಿನ ಮೇಲೆ ಸಾಕಷ್ಟು ಪ್ರಭಾವ ಬೀರಿತ್ತು. ಆ ಎಚ್ಚರಿಕೆ ಹೀಗಿತ್ತು - "ನೀನೇನು ಹೇಳಬೇಕೆಂದಿದ್ದೀಯೋ, ಅದನು ಈಗಲೇ ಹೇಳಿಬಿಡು... ಇಲ್ಲದಿದ್ದರೆ ಎಂದೆಂದಿಗೂ ಮೌನವಾಗಿರು."

ಜಿನ್ಸ್‌ಬರ್ಗ್ ತನ್ನ ಅನುಭವಗಳನ್ನು ಅಭಿವ್ಯಕ್ತಗೊಳಿಸಲು ಸಮಕಾಲೀನ ಮಾಧ್ಯಮಗಳಲ್ಲಿ ವಿಶ್ವಾಸವಿಟ್ಟವನು. ತನ್ನ ಗುಪ್ತ ಪ್ರತೀತಿಗಳ ಅನುಭವಗಳನ್ನು ಅಭಿವ್ಯಕ್ತಗೊಳಿಸುವುದೇ ಶಾಸ್ತ್ರೀಯ ಕಲೆಯೆಂದು ಅವನ ಅಭಿಪ್ರಾಯ. ಕಲೆಯನ್ನು ಅರಸುತ್ತ ಕಲಾವಿದ ತನ್ನ ವಾಸ್ತವಿಕ ಪ್ರಕೃತಿಯೊಳಗಿಂದಲೇ, ನಿರಾವರಣನಾಗಿ, ನಿರ್ಭಯನಾಗಿ, ಸಮಾಜ ತನ್ನ ಚಿಂತನೆಯನ್ನು ಸ್ವೀಕರಿಸುತ್ತದೋ ಅಥವ ಇಲ್ಲವೋ ಎಂಬ ಬಗ್ಗೆ ಕಣ್ಣಾಡಿಸದೆ – ಪ್ರಕಟನಾಗುತ್ತಾನೆ. ಕಲಾವಿದ ಹೊಗಳು ಭಟ್ಟನೂ ಅಲ್ಲ, ಪರಂಪರೆಯ ಆರಾಧಕನೂ ಅಲ್ಲ. ತನ್ನ ಮನದಾಳದಲ್ಲಿರುವ ಚಿಂತನೆಯು ಸಮಾಜದ ಪ್ರಚಲಿತ ರೀತಿನೀತಿಗಳಿಗೆ ಅಥವ ಸಂಪ್ರದಾಯಗಳಿಗೆ ತದ್ವಿರುದ್ಧವಾಗಿದ್ದರೂ ಸಹ, ಕಲಾವಿದ ನಿರ್ಭಿಡೆಯಿಂದ ಅವನ್ನು ಅಭಿವ್ಯಕ್ತಿ ಮಾಡಿಯೇ ಮಾಡುತ್ತಾನೆ. ಈ ಅಭಿವ್ಯಕ್ತಿಯೇ, ಈ ಶಕ್ತಿಯೇ ಕಲೆ. ಸಾಂಪ್ರದಾಯಿಕ ದೃಷ್ಟಿಯಲ್ಲಿ ಈ ಕಲೆಯು ನಗ್ನಸತ್ಯದ ಅನಾವರಣ ಸುಂದರ ಎನಿಸದಿರಬಹುದು ಆದರೆ ಕಾಲಾಂತರದಲ್ಲಿ ಈ ಅನಾವರಣ ಸೌಂದರ್ಯ–ಪ್ರಕಟಣೆಯ ಪ್ರತೀಕವಾಗಿ ಉಳಿಯುತ್ತದೆ. ಜಿನ್ಸ್‌ಬರ್ಗ್ ಕೂಡ ಇದನ್ನೇ ಹೇಳುತ್ತಾನೆ, ಪ್ರಾಯಶಃ.

ಒಂದು ಕೈಯಲ್ಲಿ ಉಳಿ, ಮತ್ತೊಂದರಲ್ಲಿ ಸುತ್ತಿಗೆ ಹಿಡಿದು ಶಿಲ್ಪಿಯೊಬ್ಬ ಅಟ್ಟಣಿಗೆಯ ಮೇಲೆ ಕುಳಿತು ತನ್ನ ಹೃದಯ ಮತ್ತು ಬುದ್ಧಿಗಳನ್ನು ಒಂದುಗೂಡಿಸಿ ಸ್ಪಂದಿಸುವ ಭಾವನೆಗಳನ್ನು ಶಿಲೆಯ ಮೇಲೆ ಕೆತ್ತಲು ಆರಂಭಿಸುತ್ತಾನೋ, ಆ ದಿನ ಆತನ ಅಭಿವ್ಯಕ್ತಿಯ ಕಲಾಕೃತಿ ಅಂದಿನ ನೈತಿಕ ಮೌಲ್ಯಗಳಿಗೆ ಅಸಹ್ಯ ಎಂದೆನಿಸಬಹುದಾದರೂ, ಕಾಲಾಂತರದಲ್ಲಿ ಆ ಕೃತಿ ಮಾನವ ಸಂಕುಲದ ಅಮೂಲ್ಯ ನಿಧಿಯಾಗಿ ಪರಿಗಣಿಸಲ್ಪಡುತ್ತದೆ. ಅಜಂತಾ ಮತ್ತು ಎಲ್ಲೋರಾಗಳ ಗುಹೆಗಳಲ್ಲಿ ಜೀವ ತಳೆದು ನಿಂತಿರುವ ಕಲಾಕೃತಿಗಳು ಕಲಾವಿದರ ಆತ್ಮಾಭಿವ್ಯಕ್ತಿ ಮಾತ್ರವೇ ಹೌದಲ್ಲದೆ, ಬೇರೆ ಅಲ್ಲ. ಕಲೆ ಕಳೇಬರವಲ್ಲ, ಆದರೆ ಅದು ತತ್ವವೊಂದರ ಸಾಧನೆ. ಕಲಾವಿದ ಬಾಹ್ಯ ಚಿಂತನೆಯ ತಳವಾರನಲ್ಲ ; ಆದರೆ ಆತ ಅಂತರಾತ್ಮ ತತ್ವದ ದಾರ್ಶನಿಕ. ಹೃದಯದ ಬಡಿತ ಹೇಗೆ ಕಾರ್ಡಿಯೋಗ್ರಾಫ್ ಮೇಲೆ ರೇಖೆಗಳ ಮೂಲಕ ಚಿತ್ರಿತಗೊಳ್ಳುತ್ತದೆಯೋ ಹಾಗೆ ಲೇಖಕ, ಚಿತ್ರಕಾರ, ಶಿಲ್ಪಿ, ಇವರುಗಳ ಅಂತರ್ಯದ ಅನುಭೂತಿ ಅವರ ಲೇಖನಿ, ಕುಂಚ, ಉಳಿಗಳ ಮೂಲಕ ಜೀವ ತಳೆಯುತ್ತದೆ. ಗಾಯಕನ ಮನಸ್ಸು ಸ್ವರಗಳಲ್ಲಿ, ಸ್ವರ ಶಬ್ದಗಳಲ್ಲಿ ಅಲೆಅಲೆಯಾಗಿ ಹೊಮ್ಮುವ ತರಂಗಗಳಲ್ಲಿ

ಶಬ್ದಗಳು, ಈ ಅಲೆಗಳು ಸ್ಪಂದನ ಕಂಪನಗಳಲ್ಲಿ ವಿಲೀನವಾಗುತ್ತವೆ. ಈ ಸಂಗಮವೇ ಅನುಭೂತಿಯ ಅಭಿವ್ಯಕ್ತಿ. ಅಂತರಾಳದಲ್ಲಿರುವುದನ್ನು ಹೊರಗಡೆ ಪ್ರಕಟಗೊಳಿಸುವುದು, ಮನಸ್ಸಿನ ಆಂತರ್ಯವನ್ನು ಹೇಗೆ ಹೃದಯದೊಳಗಡೆ ಇದೆಯೋ, ಅದನ್ನು ಹಾಗೆಯೇ ಹೊರತರುವುದು, ಎಚ್ಚರಿಕೆಯಿಂದ, ಆ ಭಾವನೆಗಳಿಗೆ ಯಾವುದೇ ಪೆಟ್ಟಾಗದಂತೆ, ಅದರ ರೂಪ ಒಂದಿಷ್ಟೂ ಕಂಗೆಡದಂತೆ, ಸೌಂದರ್ಯ ಬದಲಾಗದಂತೆ ಹೊರ ತರುವುದು – ಅನುಭವಗಳ ಯಥಾರ್ಥ ಚಿತ್ರಣವೇ ಕಲೆ. ಕಲೆಯಲ್ಲಿ ಕೃತ್ರಿಮತೆ ಇಲ್ಲ, ಹೊದಿಕೆಗಳಿಂದ ಮುಚ್ಚಲ್ಪಟ್ಟಿರುವುದಿಲ್ಲ, ಆದರೆ ಅದರಲ್ಲಿ ಸಹಜತೆ ಇದೆ, ವಾಸ್ತವಿಕತೆ ಇದೆ. ಬೆತ್ತಲಾಗುವ ಕ್ರಿಯೆ ಕಲೆಯಲ್ಲಿ ಸೇರಿಕೊಂಡೇ ಇದೆ. ಕಲಾವಿದನಿಗೆ ಜನರು ಆನಂತರ ಫಿಲ್ಮಿ ಇಂಟ್ರೋವರ್ಟ್ ಎನ್ನುತ್ತಾರೋ ಅಥವ ಹೆಲ್ಮಿ ಎಕ್ಸ್ಟ್ರೋವರ್ಟ್ ಎಂದು ಕರೆಯುತ್ತಾರೋ ಆ ಬಗ್ಗೆ ಕಾಳಜಿ ಇಲ್ಲ. ಬಹಿರ್ಮುಖಿಯಾಗಿರುವುದಕ್ಕಿಂತ ಅಂತರ್ಮುಖಿಯಾಗಿರುವುದೇ ಚೆನ್ನ. ಏಕೆಂದರೆ ಈ ಸ್ಥಿತಿಯಲ್ಲಿ ಸತ್ಯ ತನ್ನ ನಗ್ನರೂಪದಲ್ಲಿ ಪ್ರಕಟಗೊಂಡರೆ ಹಾಗೆ ಸಹಜವಾಗಿ ಇರುವುದೇ ಒಳಿತು. ಸಮಾಜದ ಪ್ರತಿಬಿಂಬ ತೋರುವ ಕನ್ನಡಿ ಕಲಾವಿದ. ಕನ್ನಡಿಯಲ್ಲಿ ಯಾವ ದೋಷವೂ ಇಲ್ಲ. ಎಂದರೆ ಕಲಾವಿದನಿಗೆ ಯಾವ ಗುಣಗಳೂ ಬೇಕಿಲ್ಲ. ಯಾವ ಆಕಾರ ಕನ್ನಡಿಯಲ್ಲಿ ಪ್ರತಿಬಿಂಬಗೊಳ್ಳುತ್ತದೋ, ಆ ವಸ್ತುವಿನಲ್ಲಿ ಗುಣ, ದೋಷ ಎರಡೂ ಇರುತ್ತವೆ. ಇನ್ಟ್ರೋವರ್ಟ್ ಎಂದರೆ ಅಂತರ್ಮುಖೀ ವ್ಯಕ್ತಿಯು ಫಿಲ್ಮಿ ಅಥವ ಕೊಳಕಾಗಿ ಇರುವುದಿಲ್ಲ. ಈ ಕೊಳಕು ಅಂತರ್ಮುಖಿ ವ್ಯಕ್ತಿಯ ಮೂಲಕ ಪ್ರಕಟಗೊಳ್ಳುವ ಆ ಸಮಾಜದಲ್ಲಿ ಹಾಸುಹೊಕ್ಕಾಗಿರುತ್ತದೆ. ಜಿನ್ಸ್‌ಬರ್ಗ್ ಅಂತಹ ಅಂತರ್ಮುಖಿ ಕಲಾವಿದರಲ್ಲಿ ಒಬ್ಬ.

ಜಿನ್ಸ್‌ಬರ್ಗ್ ಒಬ್ಬ ಮುಕ್ತ ಚಿಂತಕ ಮತ್ತು ಕವಿ. ಆತ ಪಾಶ್ಚಾತ್ಯ ಸಂಸ್ಕೃತಿಯನ್ನು ಅದು ಹೇಗೆ ಇತ್ತೋ ಹಾಗೆಯೇ ಸ್ವೀಕರಿಸಲಿಲ್ಲ. 1960ರ ವರೆಗೆ ಆತ ಅಮೇರಿಕೆಯ ಶೂನ್ಯ ಮತ್ತು ಪ್ರೇಮ ತತ್ವಗಳ ವಿಮೋಚನೆ ಮತ್ತು ಕಾವ್ಯಾಧ್ಯಯನ ಮಾಡುವುದರಲ್ಲಿ ತನ್ಮಯನಾಗಿದ್ದ. ಆತನ ಸಂಶೋಧನೆಯ ವಸ್ತು ಅತೀಂದ್ರಿಯ ಸೌಂದರ್ಯ ಮತ್ತು ಶಾಶ್ವತ ಪ್ರೇಮವಾಗಿತ್ತು. ತನ್ನ ಈ ಸಂಶೋಧನಾಗತಿಯಲ್ಲಿ ಶೂನ್ಯದವರೆಗೆ ಆತ ತಲುಪಿ ಅಲ್ಲಿಂದಾಚೆ ಪಾಶ್ಚಾತ್ಯ ಸಂಸ್ಕೃತಿ ಹೇಗೋ ಇಂದ್ರಿಯ ಲೋಲುಪತೆಯನ್ನು ಬದುಕಿನಲ್ಲಿ ಕಂಡೂ ಕಾಣದಂತೆ ಅಳವಡಿಸಿಕೊಂಡಿರುವ ಪದ್ಧತಿಯನ್ನು ಒಪ್ಪುವುದಿಲ್ಲ. ಇಂದ್ರಿಯ ಶಕ್ತಿಗಳನ್ನು ಅಧ್ಯಾತ್ಮಿಕ ಶಕ್ತಿಯಂತೆಯೇ ಪರಿಗಣಿಸಿ, ನೈತಿಕತೆಯನ್ನು ಕೇವಲ ಲೈಂಗಿಕತೆಗೆ ಅಥವಾ ಲೈಂಗಿಕ ಮರ್ಯಾದೆಗಷ್ಟೇ ಸೀಮಿತಗೊಳಿಸುವುದು ಸರಿಯಲ್ಲವೆಂದು ಆತನ ಭಾವನೆ. ಆತನ ದೃಷ್ಟಿಯಲ್ಲಿ ಮೂಲ ಪ್ರಶ್ನೆ ಇದಲ್ಲ. ಪ್ರಪಂಚದ ಜನತೆ ನೈತಿಕತೆಯನ್ನು ಸಾಮಾಜಿಕ ಅಳಿವು ಉಳಿವುಗಳ ದೃಷ್ಟಿಯಿಂದ ನೋಡಬೇಕೆಂದು ಆತನ ಇಚ್ಛೆ.

ಅಮೆರಿಕೆಯಲ್ಲಿ ಜಿನ್ಸ್‌ಬರ್ಗ್‌ನ ಉದಯ ಒಬ್ಬ ಪರಾಸ್ಪೃಷ್ಟಿವಾದೀ ಕವಿಯ ರೂಪಿನಲ್ಲಿ ಆಯಿತು. ಆತ ಭಾರತದಲ್ಲಿ ಪ್ರಚಲಿತ-ಉದ್ಯಮ ತತ್ವವಾಗಿರುವ ನಿರಾಕಾರ ಚೈತನ್ಯದ ಗುಣಗಾನ ಮಾಡುತ್ತಿದ್ದ. 1961ರಲ್ಲಿ ಆತ ವಿಶ್ವಯಾತ್ರೆ ಯನ್ನು ಕೈಗೊಂಡಾಗ ಪೆರು, ಗ್ವಾಟೆಮಾಲ, ಟೆಲಿಜಿಯಟ್, ಪ್ಯಾರಿಸ್, ಹವಾನಾ, ಪ್ರೇಗ್ ಮೊದಲಾದ ಆರ್ಕುಟಿಕ್ ದೇಶಗಳ ನಂತರ ಭಾರತಕ್ಕೂ ಭೇಟಿ ನೀಡಿದ. ಇಷ್ಟೊಂದು ದೀರ್ಘವಾಗಿ, ಸ್ವಚ್ಛಂದವಾಗಿ ಯಾತ್ರೆ ಮಾಡಿದ ಕವಿಗಳಲ್ಲಿ ಲಾರ್ಡ್ ಬೈರನ್‌ನಂತರ ಜಿನ್ಸ್‌ಬರ್ಗ್ ಮಾತ್ರ ಪ್ರಾಯಶಃ ಮೊದಲ ಕವಿ. ಗ್ಯಾಟೆ ಮಾಲಾದಲ್ಲಿ ಆತ ಕೋಕೋ ಸುಗ್ಗಿಯಲ್ಲಿ ಪಾಲ್ಗೊಂಡ ಹಾಗೂ ಅಲ್ಲಿನ ಜನರ ಹುಲ್ಲಿನ ಗುಡಿಸಲಿನಲ್ಲಿ ವಾಸವಾಗಿದ್ದ.

ಆತನ ಕಾವ್ಯದ ಮೂಲಾಧಾರವಾಗಿದ್ದ ಆ ಪರಮಾತ್ಮ ತತ್ವವನ್ನು ಅರಸುತ್ತಾ ಭಾರತಕ್ಕೆ ಬಂದ. ತನ್ನ ಒಂದು ಪತ್ರವನ್ನು ಮಿತ್ರನೊಬ್ಬನಿಗೆ ಬರೆಯುತ್ತಾ ಜಿನ್ಸ್‌ಬರ್ಗ್ ಹೀಗೆ ಹೇಳುತ್ತಾನೆ: 'ಇಡೀ ಮಂಗಳವಾರ ರಾತ್ರಿ ಗಂಜಭೂಮ ಸಾಧುಗಳೊಂದಿಗೆ ನಾನು ಸ್ಮಶಾನದಲ್ಲಿ ಕಾಲ ಕಳೆದೆ. ನನ್ನ ಪಾದರಕ್ಷೆ ಎಲ್ಲೋ ಕಳೆದು ಹೋಯಿತು. ಸರಿ. ನಾನು ಸಾಧುಗಳೊಂದಿಗೆ ಒಂದು ಚಿತೆಯಿಂದ ಮತ್ತೊಂದು ಚಿತೆಯ ಕಡೆಗೆ ಬರಿಗಾಲಿನಲ್ಲಿ, ಬಿಚ್ಚು ಕೂದಲನ್ನು ತೋರುತ್ತಾ ಅಲೆಯುತ್ತ ನಡೆದೆ. ಅದೊಂದು ತೀವ್ರ ಉನ್ಮಾದಾವಸ್ಥೆ. ಒಂದು ಮಹಾರಾತ್ರಿ'.

ಭಾರತದ ಪೋಲೀಸರಿಗೆ ಜಿನ್ಸ್‌ಬರ್ಗ್‌ನ ಯಾತ್ರೆಯ ಪ್ರಯೋಜನ ಅರ್ಥವಾಗಲಿಲ್ಲ, ನಿಜ. ಆ ಪೋಲೀಸರಿಗೆ ಆ ಪರಾಸ್ಪೃಷ್ಟವಾದೀ ಪರಬ್ರಹ್ಮನ ಶೋಧನೆಯ ಆಳದ ಬೇರುಗಳ ಬಗ್ಗೆ ಎಲ್ಲಿಂದ ತಿಳುವಳಿಕೆ ಬರಬೇಕು. ಆದರಿಂದಲೇ ಅವರು ಇವನ ವಿರುದ್ಧ ಕಟುವಾಗಿ ವರ್ತಿಸಿದರು. ಆದರೆ ಇಷ್ಟರಿಂದಲೇ ಅಲೆನ್ ಜಿನ್ಸ್‌ಬರ್ಗ್ ಒಬ್ಬ ಭ್ರಷ್ಟ ಅಥವ ದುರಾಚಾರಿ ಎಂದು ಸಿದ್ಧವಾಗದು. ಆಧ್ಯಾತ್ಮಿಕ ತತ್ವಗಳ ಅಂತಸ್ಸತ್ವ ಈ ಪೋಲೀಸರಿಗೆ ತಿಳಿಸಿ ಹೇಳಿದರೆ ಏನೂ ಪ್ರಯೋಜನವಾಗದು ಎಂದು ಆತ ತಿಳಿದಿದ್ದರಿಂದಲೇ ಎಲ್ಲ ವಿಚಾರಗಳನ್ನೂ ಗೃಹ ಮಂತ್ರಾಲಯದವರ ಮುಂದೆ ಸಾದರಪಡಿಸಿದ. ಕೊನೆಯಲ್ಲಿ ಜಿನ್ಸ್‌ಬರ್ಗ್‌ನ ಬೌದ್ಧಿಕ ಉಪಯೋಗಗಳನ್ನು ಗುರುತಿಸಿ ಅವರು ಅವನಿಗೆ ಬಹು ದೀರ್ಘಕಾಲ ಭಾರತದಲ್ಲಿ ನೆಲಸಿರಲು ಅನುಮತಿ ನೀಡಿದರು. ಆತ ಭಾರತವನ್ನು ತನ್ನ ಅಧ್ಯಾತ್ಮಿಕ ಮನೆಯೆಂದು ಗೌರವಿಸುತ್ತಾನೆ. ಈ ದೇಶಕ್ಕೆ ಬಂದು ಆತ ಗುರುವಿಗಾಗಿ ಶೋಧನೆ ನಡೆಸಿದ. ಬಹಳ ದಿನಗಳ ಕಾಲ ಗುರು ಮತ್ತು ಗುರು–ಮಂತ್ರ ಜಪಿಸುತ್ತ ಅಲೆದಾಡಿದ. ಕಟ್ಟಕಡೆಗೆ ಆತನಿಗೆ ಒಬ್ಬ ಮಹಿಳಾ–ಗುರು ದೊರಕಿದಳು. ಆಕೆ ಆತನಿಗೆ ನೀಡಿದ ಉಪದೇಶವೆಂದರೆ ಜಿನ್ಸ್‌ಬರ್ಗ್ ತನ್ನ ಪ್ರಥಮ ಗುರು ಬ್ಲೇಕ್ ಮಹಾಶಯನ ಉಪಾಸನೆ ಮಾಡಲೆಂದು. ಜಿನ್ಸ್‌ಬರ್ಗ್‌ನ ಸಂಪೂರ್ಣ ಕಥೆಯನ್ನು ಲಾಲಿಸಿದ ಗುರುವಿಗೆ ಆತನ ಮೇಲೆ ಕರುಣೆ ಬಂದಿತು. ಓಹ್ ಎಂತಹ ನೋವು. ಎಂತಹ ನೋವು ಎಂದು ಗುರು ಉದ್ಗರಿಸಿದರು.

ಜಿನ್ಸ್‌ಬರ್ಗ್‌ನ ಹೃದಯದಲ್ಲಿ ಈ ಕರುಣಾಪೂರ್ಣ ವಾಕ್ಯದ ಮರ್ಮ ತೀರ ಆಳಕ್ಕಿಳಿದು ಆತ ಗುರುವಿನ ಅಂತರಾತ್ಮವನ್ನು ಕಂಡುಹಿಡಿದುಕೊಂಡ. ಆತ ಹಿಮಾಲಯದ ಗಿರಿ ಕಂದರಗಳಲ್ಲಿ ದಿಗಂಬರನಾಗಿ ಅಲೆದಾಡಿದ. ಅಲ್ಲಿಂದ ಟಿಬೆಟ್‌ಗೆ ತೆರಳಿ ಸಾಧು ಮಹಾತ್ಮರ ಭೇಟಿ ಮಾಡಿ ಅಧ್ಯಾತ್ಮಿಕ ಸತ್ಯ ಜ್ಞಾನದ ತಿಳುವಳಿಕೆ ಪಡೆದುಕೊಂಡ. ತನ್ನ ಈ ಪ್ರವಾಸ ಕಾಲದಲ್ಲಿ ಆತ ಪ್ರಾಣಾಯಾಮ ಮತ್ತು ಯೋಗಾಭ್ಯಾಸ ಮಾಡಿದ. ಅವನು ಸಾಧುಗಳೊಂದಿಗೆ ಕುಳಿತು ಗಾಂಜಾ ಕುಡಿದ, ಮಂತ್ರಗಳ ಸ್ವರಪಾಠ ಮಾಡಿದ, ಓಂಕಾರದ ಜಪ ಮಾಡುತ್ತ ಕುಳಿತರೆ ಆ ಸ್ವರ ಆತನಿಗೆ ಇಡೀ ಬ್ರಹ್ಮಾಂಡದ ಶಾಶ್ವತ ಸ್ವರವಾಗಿ ಪ್ರತಿಧ್ವನಿಸಲಾರಂಭಿಸಿತು. ಆತ ಭಾರತದಲ್ಲಿ ಯುವ ನಾದಬ್ರಹ್ಮನ ಉಪಾಸನೆ ಮಾಡಿದನೋ, ಯಾವ ಅಕ್ಷರ ಸ್ವರೂಪವನ್ನು ಗುರುತಿಸಿದನೋ ಅದು ಇಂದಿಗೂ ಆತನ ಬದುಕಿನ ಅವಿಭಾಜ್ಯ ಅಂಗವಾಗಿ ಉಳಿದಿದೆ. ಇಂದಿಗೂ ಜಿನ್ಸ್ ಬರ್ಗ್ ಅಮೆರಿಕೆಯ ವಿಶ್ವವಿದ್ಯಾಲಯಗಳಲ್ಲಿ ಕವಿತಾ ಪಾಠ ಮಾಡುವಾಗ, ಅಥವ ಭಾಷಣ ಮಾಡುವಾಗ ಆತ ಅಲ್ಲಿ ನಿಂತು ವೇದಗಳ ಶ್ಲೋಕವನ್ನು, ಟಿಬೆಟ್‌ನ ಬೌದ್ಧ ಮಂತ್ರಗಳನ್ನು ಹೇಗೆ ಪಠಣ ಮಾಡುತ್ತಾನೆಂದರೆ, ಆ ನಾದದ ಪ್ರತಿಧ್ವನಿಯಲ್ಲಿ ಆತನ ಕೇಳುಗರು ಮಂತ್ರಮುಗ್ಧರಾಗುತ್ತಾರೆ ಮಾತ್ರವಲ್ಲ, ಆತನ ಸುತ್ತಲೂ ಅತೀಂದ್ರಿಯ ವಾತಾವರಣ ಮನೆ ಮಾಡುತ್ತದೆ.

ಭಾರತದಿಂದ ಜಿನ್ಸ್‌ಬರ್ಗ್ ಜಪಾನಿಗೆ ಹೋದ. ಅಲ್ಲಿ ಆತನಿಗೆ ಜಪಾನೀ ಪದ್ಧತಿಯಲ್ಲಿ ಬೌದ್ಧ ಧರ್ಮದ ದರ್ಶನ ದೊರಕಿತು. 1963ರ ವಸಂತ ಕಾಲ. ಅಮೇರಿಕೆಗೆ ಬರುವ ಒಂದು ದಿನ ಮೊದಲು ಆತ ಕ್ಯೋತೋ–ತ್ಯೋಕೋ ಎಕ್ಸ್ ಪ್ರೆಸ್‌ನಲ್ಲಿ ಯಾತ್ರೆ ಮಾಡುತ್ತಿದ್ದ. ಅದೇ ಸಂದರ್ಭದಲ್ಲಿ ಆತನಿಗೆ ಇದ್ದಕ್ಕಿದ್ದಂತೆ ಒಂದು ಹೊಸ ಅನುಭೂತಿ ದೊರಕಿತು. ಇದನ್ನು ಆತ ತನ್ನ ದ್ವಿತೀಯ ಸಾಕ್ಷಾತ್ಕಾರ ಎನ್ನುತ್ತಾನೆ. ಈ ಅನುಭವದ ಬಗ್ಗೆ ಆತ ಬರೆಯುತ್ತಾ—"ಅನಾಯಾಸವಾಗಿ ನನಗೆ ಅಳು ಬರಲಾರಂಭಿಸಿತು. ಆಗ ನನಗೆನ್ನಿಸಿತು. ನಾನು ನನ್ನ ಅಸ್ತಿತ್ವ ಅಥವ ಮನೋಕ್ಷೇತ್ರದ ವಿಸ್ತಾರ ಮಾಡಿಕೊಳ್ಳಬೇಕೆಂಬುವುದು ನನ್ನ ಸಮಸ್ತ ನೈತಿಕ ಪ್ರಯಾಸದ ಗುರಿಯಲ್ಲ. ಬದಲಿಗೆ ನಾನು ಹೇಗಿದ್ದೇನೋ ಹಾಗೆಯೇ ಇರುವುದರಲ್ಲಿ ಯಾವ ಹಾನಿಯೂ ಇಲ್ಲ. ಸಮಗ್ರ ಆದರ್ಶವಾದೀ ದೃಷ್ಟಿಕೋಣ ಲುಪ್ತವಾಗಿ ಹೋಯಿತು. ನಾನಿರುವ ಶರೀರಕ್ಕೆ ಮರಥ-ಧರ್ಮ, ಬೇರೇನಿಲ್ಲ. ನನ್ನ ಸುತ್ತ ಮುತ್ತಲೆಲ್ಲ ನಾನು ಸಂಚರಿಸುತ್ತಿದ್ದ ಗಾಡಿಯಲ್ಲಿ ನೋಡಿದೆ. ನಾಲ್ಕೂ ದಿಕ್ಕಿನಲ್ಲಿ ಇರುವವರೆಲ್ಲ ಮರಣ ಧರ್ಮಿಗಳೇ. ಸುತ್ತಲಿರುವುದೆಲ್ಲ ನಿರ್ಬಲತೆ, ನೋವು. ಆದರೂ ಅವರು ಪ್ರಿಯವಾಗಿ ನನಗೆ ಕಾಣುತ್ತಾರೆ. ಪ್ರತಿಯೊಬ್ಬ ವ್ಯಕ್ತಿಯೂ ತಂತಾನೇ ವಿಲಕ್ಷಣ. ಅವನಲ್ಲಿ ದೌರ್ಬಲ್ಯ ತುಂಬಿದೆ. ಹೆಚ್ಚೇನು. ಆತ ಒಂದಲ್ಲ ಒಂದು ದಿನ ಸಾಯುತ್ತಾನೆ. ಆಗ್ಗಿಂದಾಗ್ಗೆ ನಾನು ಅಳುತ್ತಳುತ್ತಲೇ ನನ್ನ ನೋಟ್ ಬುಕ್ ಹೊರತೆಗೆದೆ, ನನ್ನ ಸಮಸ್ತ ಚಿಂತನ ಧಾರೆಯನ್ನು ಬೇಗಬೇಗನೆ ಲಿಪಿಬದ್ಧ

ಗೊಳಿಸತೊಡಗಿದೆ. ಆಮೇಲೆ ಆ ಎಲ್ಲವೂ ಒಂದು ಕವಿತೆಯಾಗಿ ಮೈದಾಳಿತು. ಅದಕ್ಕೆ ನಾನಿಟ್ಟ ಹೆಸರು—ಪರಿವರ್ತನೆ. ಅದರ ಒಂದು ಭಾಗ ಹೀಗಿದೆ :

ನನ್ನ ರೈಲ—ಸೀಟ ಮೇಲೆ
ಪರಿತ್ಯಾಗ ಮಾಡಿದೆ
ಸಮಸ್ತ ಶಕ್ತಿಯ
ಸಮಗ್ರ ಸತ್ವದ
ತ್ಯಾಗ ಮಾಡಿದೆ
ಅವುಗಳಿಂದ ಬದುಕಿದ್ದೆ ನಾನು
ಆದರೇನು, ಕೊನೆಯದೇನು
ಸಾಯಬೇಕು ನಾನು.

ಹದಿನೈದು ವರ್ಷಗಳಿಂದ ಆತ ಯಾವ ಬ್ಲೇಕ್‌ನ ಉಪಾಸನೆ ಮಾಡಿದ್ದನೋ, ಯಾವ ಪರಾಸೃಷ್ಟಿವಾದದ ಸಾಧನೆಯಲ್ಲಿ ಮಗ್ನನಾಗಿ ಹೋಗಿದ್ದನೋ, ಅವೆಲ್ಲವೂ ಒಂದೇ ಕ್ಷಣದಲ್ಲಿ ಲುಪ್ತವಾಗಿ ಹೋಯಿತು. ಜಿನ್ಸ್‌ಬರ್ಗ್ ತನ್ನ ಪೌರ್ವಾತ್ಯ ಯಾತ್ರೆಯಿಂದ ದಿವಾಳಿಯಾಗಿ ಹಿಂದಿರುಗಿದ. ಕವಿಗಳ ಸೃಷ್ಟಿಕಾರ್ಯ ಪರಾಸೃಷ್ಟಿಯಲ್ಲ, ಅದೊಂದು ಭೌತಿಕ ಸೃಷ್ಟಿ. ಪ್ರತ್ಯಕ್ಷ ದರ್ಶನವಾಗುವ ಸೃಷ್ಟಿ. ಜೀವನದ ವರ್ತಮಾನದೊಂದಿಗೆ ಲೈಂಗಿಕ ಪ್ರತೀತಿಗಳ ಮೂಲಕ ನೇರ ಸಂಪರ್ಕ ಸಾಧ್ಯವಾಗುವ ಕಾರ್ಯ. ಈಗ ಆತ ತನಗೆ ತಾನೇ ತನ್ನ ಕಾವ್ಯದ ಸಮಸ್ತ ರಹಸ್ಯವಾದೀ ಹಾಗೂ ಅಧ್ಯಾತ್ಮಿಕ ಪ್ರಭಾವಗಳಿಂದ ಮುಕ್ತನಾಗಿದ್ದೇನೆನ್ನುವ ಅನುಭವ ಪಡೆದ.

ರೈಲು–ಸೀಟು ಸಿದ್ಧಾಂತದ ನಂತರವೂ, ಇಂದಿಗೂ ಜಿನ್ಸ್‌ಬರ್ಗ್ ಪರಾಸೃಷ್ಟಿವಾದ ತತ್ವ ಪ್ರಭಾವದಿಂದ ಸಂಪೂರ್ಣವಾಗಿ ಮುಕ್ತನಾಗಿರಲು ಸಾಧ್ಯವಾಗಿಲ್ಲ. ಆ ಘಟನೆಯಾಗಿ ಮೂರು ವರ್ಷಗಳೇ ಕಳೆದಿವೆ. ಆದರೂ ಆತನನ್ನು ನೋಡಿದಾಗ ಆತ ಪ್ರಾಯಶಃ ಕಾಶಿಯಲ್ಲಿ ಹುಟ್ಟಿ ಬೆಳೆದವನಿರಬೇಕೆನಿಸುತ್ತದೆ. ಇಂದಿಗೂ ಕೂಡ ಆತ ಶಿವ–ವಿಷ್ಣು ಸ್ತೋತ್ರ ಪಠಣ ಮಾಡಿ ತನ್ನ ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿಸುತ್ತಾನೆ. ಕರ್ಮ ಸಿದ್ಧಾಂತದಲ್ಲಿ ಆತನ ಅನನ್ಯ ವಿಶ್ವಾಸವಿದೆ ಹಾಗೂ ಪಾಶ್ಚಾತ್ಯ ಜನರಿಗೆ ನಾನು ನನ್ನ ಹಾಗೇ–ಬರಹವನ್ನು ಅದೇ ಪ್ರಕಾರ ಅನುಭವಿಸಬೇಕಿದೆ ಯೆಂಬುದನ್ನು ಮನದಟ್ಟು ಮಾಡಿಕೊಟ್ಟಿದ್ದಾನೆ.

ಜಿನ್ಸ್‌ಬರ್ಗ್ ಮಾನುಷ ಸಂಸ್ಪರ್ಷಕ್ಕಾಗಿ ಹಸಿದಿದ್ದಾನೆ, ಆತ ಕೇವಲ ಭಾವನಾತ್ಮಕ ಸಂಸರ್ಗ, ಸಂಪರ್ಕ, ಸಂವೇದನೆ, ಸಹಾನುಭೂತಿಗಳಿಂದ ತೃಪ್ತನಾಗುವುದಿಲ್ಲ. ಕೋಮಲತೆಯೆನ್ನುವುದು ಮಾನವ ದೇಹದ ಆಹಾರ ಎಂದು ಅವನ ಅಭಿಪ್ರಾಯ, ಮಕ್ಕಳಿಗೆ ಮನುಷ್ಯ ದೇಹದ ಸ್ಪರ್ಶ ಆಗದಿದ್ದರೆ ಅವುಗಳ ವಿಕಾಸ

ಆಗದು ಹಾಗೂ ಅದರಿಂದಾಗಿ ಅವು ಪ್ರಾಣ ಬಿಡುತ್ತವೆ. ಜನಸಂಖ್ಯೆಯಲ್ಲಿ ಅತ್ಯಧಿಕ ವೃದ್ಧಿಯಾಗಲು, ಪ್ರವಾಸ ಸಾಧನಗಳಲ್ಲಿ ಕೃತ್ರಿಮಿತೆ ಮತ್ತು ಅವುಗಳ ಕೇಂದ್ರೀಕರಣದ ಕಾರಣ ಮನುಷ್ಯರ ನಡುವೆ ಪ್ರತ್ಯಕ್ಷ ಸಂಬಂಧ ಅತ್ಯಂತ ಅವಶ್ಯಕವಾಗಿದೆ ಮತ್ತು ಅದಿಲ್ಲದೆ ಮನುಷ್ಯರ ಮಾನಸಿಕ ಬಾಧೆಗಳು ಉತ್ಪನ್ನಗೊಳ್ಳುವುದು ಸ್ವಾಭಾವಿಕ.

**ಆಧಾರ, ಶೂನ್ಯ ಮತ್ತು ಅಸ್ತಿತ್ವ :**

ಜಿನ್ಸ್‌ಬರ್ಗ್ ಪ್ರಾಯಶಃ ತನ್ನ ಕೇಳುಗರಿಗೆ ಜಪಾನೀ ಭಾಷೆಯಲ್ಲಿ ಹೇಳುತ್ತಾನೆ —ಹೀಗೆ :

"ಶಿಕೀ ಫೂ ಆಯಿ ಕೂಕೂ ಫೂ ಶಿಕೀ ಶಿಕೀ ಸೋಕೂ ಜೇ
ಕೂ ಕೂ ಸೋಕೀ ಜೇ ಷೀಕೀ"

ಎಂದರೆ—

"ಆಕಾರ ಶೂನ್ಯದಿಂದ ಬೇರೆಯಾಗುವುದಿಲ್ಲ. ಶೂನ್ಯವೂ ಆಕಾರದಿಂದ ಬೇರೆಯಾಗುವುದಿಲ್ಲ. ಅಕಾರ ಶೂನ್ಯವಾಗುತ್ತದೆ. ಶೂನ್ಯ ಆಕಾರ."

ಆಕಾರ ಮತ್ತು ಶೂನ್ಯ, ಜೀವನ ಮತ್ತು ಮರಣ ಇವೆರಡೇ ಅವನಿಗೆ ಸತ್ಯವಾಗಿಬಿಟ್ಟಿದೆ. ಆತ ಆಕಾರಕ್ಕೆ ಹೆದರುತ್ತಾನೆಂದಾಗಲೀ ಅಥವ ಅವನು ಪಲಾಯನವಾದಿಯಾಗಿದ್ದಾನೆಂದಾಗಲಿ ಇದರಿಂದ ಅರ್ಥ ಮಾಡಬಾರದು. ಆದರೆ ಆತನಿಗೆ ಅಸ್ತಿತ್ವದಲ್ಲಿ ವಿಶ್ವಾಸವಿರುವುದರಿಂದಲೇ ಆತನ ಈ ಚಿಂತನೆ. ಭಾರತೀಯ ದಾರ್ಶನಿಕರಂತೆ ಆತ ಜೀವನ–ಮರಣದಲ್ಲಿ, ಆಕಾರ–ಶೂನ್ಯದಲ್ಲಿ ಇವೆರಡರಲ್ಲಿಯೂ ಒಂದು ಅದೃಶ್ಯ ಅಸ್ತಿತ್ವ, ಎಂದೆಂದಿಗೂ ನಾಶವಾಗದ ಅಸ್ತಿತ್ವ ವಿದ್ಯಮಾನವಾಗಿರುತ್ತದೆಂಬ ಸತ್ಯವನ್ನು ನಂಬುತ್ತಾನಾದ ಕಾರಣದಿಂದ—ಈ ಸಿದ್ಧಾಂತ. ಜಿನ್ಸ್‌ಬರ್ಗ್ ಆ ಅಸ್ತಿತ್ವವನ್ನು ಗುರುತಿಸಿದ್ದಾನೆ, ಅವರಲ್ಲಿ ಬದುಕಿನ, ಬದುಕುವ ಸಂದೇಶ ಕಂಡಿದ್ದಾನೆ. ನಗ್ನ ಮಾನವತೆಯ, ಲೈಂಗಿಕ ಸ್ವೇಚ್ಛಾಚಾರದ, ಗಾಂಜಾದ ಸಮರ್ಥನೆ ಮಾಡಬಹುದು, ಬರ್ಕ್ಲೆ ಅಥವ ಕಾನ್ಸಾಸ್‌ನಲ್ಲಿ ಕಾವ್ಯ–ಪಾಠ ಮಾಡುತ್ತಿರಬಹುದು, ಆತನ ಮನಸ್ಸಿನಲ್ಲಿ ಒಂದೇ ಆಕಾಂಕ್ಷೆ ಬಲವತ್ತರವಾಗಿರುತ್ತದೆ—ಅದೆಂದರೆ ಮನುಷ್ಯ ತನ್ನ ಅಸ್ತಿತ್ವದ ಶಾಶ್ವತ ರೂಪವನ್ನು ಗುರುತಿಸಲಿ, ಸಭ್ಯತೆಯ ಕೃತ್ರಿಮ ಆವರಣವನ್ನು ಹರಿದೊಗೆದು ಮಾನಸಿಕ ಅಡೆತಡೆಗಳನ್ನು ನಿರಾಕರಣದ ದಿಶೆಯಲ್ಲಿ ಮುಂದೆ ಕೊಂಡೊಯ್ಯಲಿ ಎಂಬುದು. ವಿಲಾಸ ಆಡಂಬರ, ಮೋಜಿನ ಜೀವನವನ್ನು ಆತ ಒಂದಿಷ್ಟೂ ನಂಬುವುದಿಲ್ಲ. 'ಹಾವಲ್'ನ 16 ಸಂಸ್ಕರಣಗಳು ಪ್ರಕಾಶನಗೊಂಡಿವೆ. ಅಲ್ಲದೆ ಜಿನ್ಸ್‌ಬರ್ಗ್ ತನ್ನ ಪ್ರವಾಸಗಳಿಂದಲೂ ಸಾಕಷ್ಟು ಹಣ ಗಳಿಸುತ್ತಾನೆ. ಆದರೆ ಆತ ತನ್ನ ಮೇಲೆ ವರ್ಷಕ್ಕೆ ಮೂರು ಸಾವಿರ ಡಾಲರ್‌ಗಳಿಗಿಂತ ಹೆಚ್ಚು ಹಣ ಖರ್ಚು ಮಾಡುವುದಿಲ್ಲ. ಅಸ್ತಿತ್ವದಲ್ಲಿ ಆತನ ಆಸ್ಥೆ ಬಹಳ ದೃಢವಾಗಿದೆ. ಹಾಗೆಯೇ ಮಾನವ ಸಂಕುಲದ ಐಕ್ಯತೆಯಲ್ಲಿ, ಸ್ವಾತಂತ್ರ್ಯದಲ್ಲಿ ಪೂರ್ಣ ನಂಬಿಕೆ ಇಟ್ಟಿದ್ದಾನೆ. ಆತ ಸಾಮ್ಯವಾದಿಯಲ್ಲ ಆದರೂ ಸಮಪಾಲಿನ ಸಮರ್ಥಕ. ಜಗತ್ತಿನ ಅಶಾಂತಿಯ ಮುಖ್ಯ ಕಾರಣ

ಎಣೆಯಿಲ್ಲದ ಪ್ರಾಪಂಚಿಕ ಲೋಲುಪತೆಯ ಬದುಕು ಹಾಗೂ ವಿಭಿನ್ನ ಪ್ರಕಾರದ ವಾದವಿವಾದ ಎನ್ನುತ್ತಾನೆ. ಇತ್ತೀಚಿನ ದಿನಗಳಲ್ಲಿ ಆತ ಕಾನ್ಸಾಸ್ ಪ್ರವಾಸದ ಸಮಯದಲ್ಲಿ ಒಂದು ಹೊಸ ಕವಿತೆ ಬರೆದ. ಅದರಲ್ಲಿ ಈ ವಾದಗಳ ಸಂಘರ್ಷ ಕುರಿತು ಒಂದು ಮೊನಚಾದ ವ್ಯಂಗ್ಯ ಮಾಡಿದ್ದಾನೆ— ಹೀಗೆ :

ಅಹಂಕಾರದ ಮನಸು
ದುರಭಿಮಾನದ ಮನಸು
ಮೊದಲ ಕಲ್ಲು ಎಸೆಯಿತು—
ಅದರಿಂದ ನನ್ನ ತಾಯಿಯ ಪ್ರಾಣವೇ ಹೋಯಿತು.
ಸಾಮ್ಯವಾದಿ–ಅಸಾಮ್ಯವಾದೀ ಸಂಘರ್ಷಗಳನ್ನು
ಮನೋಗ್ರಂಥಿಯಿಂದ ಪೀಡಿತಳಾಗಿ
ಸತ್ತುಹೋದಳು ಅವಳು
ಹುಚ್ಚರಾಸ್ಪತ್ರೆಯಲಿ
ಇದೆಲ್ಲ ಸುದೀರ್ಘ ಹತ್ತು ವರ್ಷಗಳ ಹಿಂದೆ
ಸಾಯುವ ಮುನ್ನ
ಅವಳದೊಂದು ಕೊರಗು
ಅವಳ ತಲೆಯ ಮೇಲೆ
ಲೋಕ ಸಂಚಾರದ ನಕ್ಷತ್ರಗಳು
ಕಾಡುತ್ತವೆ ; ಪೀಡಿಸುತ್ತವೆ
ಜೊತೆಗೆ
ರಾಜಕೀಯದ ಧ್ವನಿಗಳು
ವಾಯು ಮಂಡಲವನ್ನೆಲ್ಲ ವ್ಯಾಪಿಸಿ
ಅವಳ
ಕೋಮಲ ನಾರಿತ್ವವನ್ನು
ಹಾಳು ಮಾಡುತ್ತವೆ.
ಇತರ ಅನೇಕರು ಏನೆನ್ನುತ್ತಾರೆ ಗೊತ್ತೇ—
ಸಾವು ಅಥವ ಆ ವಿಕ್ಷಿಪ್ತತೆಯ
ಹೈಡ್ರಾಲಿಕ್ ಸಂಕ್ರಮಣದಿಂದ
—ಮುಗಿಯಿತು ಎಲ್ಲ ಈಗ.
ಈಗ ಯುದ್ಧ ಮುಕ್ತಾಯಗೊಳ್ಳುತ್ತದೆ,
ನಿಗ್ರೋನಗರಗಳಲ್ಲಿ ಬಂದಿಯಾಗಿದ್ದಿ
ನಿನ್ನ ಸುಂದರಶ್ವೇತಕಾಯದ

ನಿರ್ಮಲ ಪ್ರೇಮ ಮುಕ್ತವಾಯಿತು ಈಗ
ಆತ್ಮವನ್ನುಳಿದು ಮಿಕ್ಕೆಲ್ಲ ಈಗ
ಮುಕ್ತಾಯಗೊಂಡಿತು—ಕೇಳಿರೋ
ಮನಸ್ಸಿನ ಮಕ್ಕಳೇ !

ಆವರಣಗಳನ್ನು ಕಡಿದೊಗೆಯುವ ಈ ನಗ್ನತೆಯ ಪೂಜಾರಿ ಜಿನ್ಸ್‌ಬರ್ಗ್‌ನಿಗೆ ಹೇಗೆ ಕಾನ್ಸಾಸ್ ವಿಶ್ವವಿದ್ಯಾಲಯದಲಿ ಗಗೇನ್‌ಹಾಯಿಮ್ ಫೆಲೋ ಆಗಿ ಆಯ್ಕೆಯಾಯಿತೋ ತಿಳಿಯದು. ಆದರೆ ಇದರಿಂದ ಆತನಿಗೆ ಯಾವುದೇ ರೀತಿಯ ಬಂಧನ ಇರುವಂತೆ ಕಾಣದು. ವಿಶ್ವವಿದ್ಯಾಲಯದ ಸಭಾಭವನದಲ್ಲಿ ಆತ ಶುದ್ಧ, ನಿರಾಕಾರ, ನಿರಾವೃತ ಮನುಷ್ಯತ್ವದ ಪ್ರತಿಪಾದನೆ ಮಾಡುವ ಕವಿತೆಗಳನ್ನು ಓದುತ್ತ ಓದುತ್ತ ತನ್ನ ಪ್ಯಾಂಟನ್ನು ಬಿಚ್ಚಿ ಪುಟ್ಟ ಹುಡುಗರ ಹಾಗೆ ಸರಳವಾಗಿ ನಗುತ್ತಲೇ ನಗ್ನನಾಗುತ್ತಾನೆ. ಅವನ ಈ ರೀತಿ ನೀತಿಯನ್ನು ನೋಡಿ ಯಾರಾದರೂ ಇವನನ್ನು ಅಸಹ್ಯ ವ್ಯಕ್ತಿ ಅಥವ ದುರಾಚಾರಿ ಎಂದು ಕರೆದರೆ ಪ್ರಾಯಶಃ ಅವರಿಗೆ ಜಿನ್ಸ್‌ಬರ್ಗ್ ಇಂತಹ ಆವರಣಗಳಿಂದ ಮುಚ್ಚಲ್ಪಟ್ಟಿರುವ ಪಾಶ್ಚಾತ್ಯ ಸಭ್ಯತೆಯ ಸೋಗಿನತ್ತ ಛೀಮಾರಿ ಹಾಕುತ್ತಿದ್ದಾನೆಂಬುದು ತಿಳಿದಿಲ್ಲ. ಬೆತ್ತಲಾಗುವುದು ಅಸಹ್ಯವಲ್ಲ; ಅರೆ ಬೆತ್ತಲಾಗುವುದು ಅಸಹ್ಯ. ಸಮಾಜಕ್ಕೆ ಈ ನಗ್ನ ಸತ್ಯದ ಪರಿಚಯ ಮಾಡಿಕೊಡುತ್ತಿದ್ದಾನೆ ಜಿನ್ಸ್‌ಬರ್ಗ್. ನೈತಿಕತೆ ಎಂಬ ವಸ್ತು ಒಂದು ಭೌತಿಕ ವಿಚಾರವಲ್ಲ, ಅದು ಕೇವಲ ಬಾಹ್ಯ ಆಚರಣೆಗಳಿಗಷ್ಟೇ ಸೀಮಿತವಲ್ಲ. ಲೈಂಗಿಕತೆಗೆ ಸಂಬಂಧಪಟ್ಟ ನೈತಿಕತೆ ಅಥವ ಅನೈತಿಕತೆ ಶರೀರದ ಸಹಜ ಧರ್ಮಕ್ಕೆ ಸಂಬಂಧಪಟ್ಟಿದ್ದು. ಈ ಅಂಶವನ್ನು ಅದು ಯಾವ ರೂಪಿನಲ್ಲಿದೆಯೋ ಹಾಗೆಯೇ ಸ್ವೀಕಾರ ಮಾಡಿಕೊಳ್ಳಬೇಕು. ಜಿನ್ಸ್‌ಬರ್ಗ್‌ನ ದೃಷ್ಟಿಯಲ್ಲಿ ನೈತಿಕತೆಯ ಮೂಲಭೂತ ತತ್ವ ಮಾನವೀಯ ಏಕತೆ, ಪ್ರೇಮ ಮತ್ತು ಅಸ್ತಿತ್ವದ ಶಾಶ್ವತ ಮಹತ್ವವನ್ನು ಒಪ್ಪಿ ಗೌರವಿಸುವುದು. ಈ ವಿಚಾರದಿಂದ ಪ್ರೇರಿತನಾಗಿಯೇ ಆತ ಅಮೆರಿಕೆಯ ರಕ್ಷಣಾ ಮಂತ್ರಿಗೆ ಪತ್ರ ಬರೆದ—ಪ್ರೀತಿಯ ಮೆಕ್‌ನಮೇರೀ, ಮೊಟ್ಟ ಮೊದಲಿಗೆ ನಿನಗೆ ತಿಳಿಸುವುದೇನೆಂದರೆ ನೀನು ಶಾಂತನಾಗು. ಯಾರದ್ದೇ ಬದುಕಿನ ಬಗ್ಗೆ, ಉಳಿವಿನ ಬಗ್ಗೆ ಯಾವುದೇ ರೀತಿಯ ಮೂಲಭೂತ ಸಂಕಷ್ಟ ಇಲ್ಲ. ನಿನ್ನ ಬದುಕಿನ ಬಗ್ಗೆಯೂ ಅಷ್ಟೇ. ನೀನೂ ಕೂಡ ಸುರಕ್ಷಿತನಾಗಿದ್ದೀಯೆ. ನೀನು ಯಾರನ್ನು ಶತ್ರುವೆಂದು ಪರಿಗಣಿಸಿದ್ದೀಯೋ, ಅವರೂ ಕೂಡ ಸುರಕ್ಷಿತರಾಗಿರುತ್ತಾರೆ.

# ಲೂ ಶುನ್ ಸಂದರ್ಶನ

ಅನು : ಬಿ. ಎಸ್. ಶಿವಪ್ರಸಾದ್

ಲೂ–ಶುನ್ ತನ್ನ ಕಾಲದ ಸಮಾಜ, ರಾಜಕೀಯ ಮತ್ತು ಸಾಹಿತ್ಯದ ಮೇಲೆ ಪೂರ್ಣ ಪ್ರಭುತ್ವವುಳ್ಳವರಾಗಿ ಅಧಿಕಾರಯುತವಾಗಿ ಸಮಗ್ರ ಚಿಂತನೆ ನಡೆಸಿದ್ದರು. ಆದ್ದರಿಂದಲೇ ಇಂದು ನಾವು ಆ ಕಾಲದ ಬಗ್ಗೆ ತಿಳಿಯಬೇಕಾದಲ್ಲಿ ಮೊದಲು ಲೂ-ಶುನ್‌ರನ್ನು ಅರಿತುಕೊಳ್ಳಬೇಕಾದ್ದು ತುಂಬಾ ಆವಶ್ಯಕ. ಮೊದಮೊದಲು ಅವರು ಅಕ್ಟೋಬರ್ ಕ್ರಾಂತಿಯ ಬಗ್ಗೆ ಉದಾಸೀನರಾಗಿದ್ದರೂ ಕ್ರಮೇಣ ಅದರಿಂದ ಪ್ರಭಾವಿತರಾದರು ಮತ್ತು ವರ್ಗರಹಿತ ಸಮಾಜ ನಿರ್ಮಾಣ ಇದರಿಂದ ಸಾಧ್ಯವೆಂದು ಮನಗಂಡರು. "ಇಂಟರ್‌ನ್ಯಾಶನಲ್ ಲಿಟರೇಚರ್" ಜೊತೆ ಅವರ ಸಂದರ್ಶನದಲ್ಲಿ ಅವರು ವ್ಯಕ್ತಪಡಿಸಿರುವ ವಿಚಾರಗಳಿಂದ, ಅವರು ತಮ್ಮ ದೇಶದ ಗಂಭೀರ ಸ್ಥಿತಿಯ ಬಗ್ಗೆ ಪೂರ್ಣ ತಿಳಿದವರಾಗಿದ್ದರು ಮತ್ತು ಆ ಸಮಯದಲ್ಲಿ ಹೊಸ ಸಮಾಜವನ್ನು ನಿರ್ಮಿಸಲು ಪ್ರೋತ್ಸಾಹಿಸುವ ಸಾಹಿತ್ಯಕ್ಕಿಂತ ಹೆಚ್ಚಾಗಿ ಯುದ್ಧ ಸಂಬಂಧಿ ಲೇಖನಗಳು ಮಹತ್ವಪೂರ್ಣವೆಂಬುದನ್ನು ಬಲ್ಲವರಾಗಿದ್ದರು ಎಂಬುದು ಗೊತ್ತಾಗುತ್ತದೆ. ಬಂಡವಾಳಶಾಹಿ ದೇಶಗಳ ಪಿತೂರಿ ಮತ್ತು ಅವರ ಕಾರ್ಯಚಟುವಟಿಕೆಗಳ ಮೇಲೆ ಅವರು ತೀಕ್ಷ್ಣದೃಷ್ಟಿಯನ್ನು ಇಟ್ಟಿದ್ದರು.

ನಿಜ ಹೇಳಬೇಕೆಂದರೆ ಚೀನೀ ಸಮಾಜಕ್ಕೆ ಲೂ-ಶುನ್‌ರ ರೂಪದಲ್ಲಿ ತನ್ನ ದೇಶದ ಕ್ರಾಂತಿಕಾರಿ ಜನತೆಯ ಹಿತ ಕಾಯುವ ಒಬ್ಬ ಕಾಲಜಯಿ ಮಹಾನ್ ದ್ರಷ್ಟಾರ ದೊರೆತ.

ಈ ಪುಟ್ಟ ಸಂದರ್ಶನ ಲೂ-ಶುನ್‌ರ ವಿಚಾರಧಾರೆಯನ್ನು ಪ್ರಕಟಗೊಳಿಸುವುದರ ಜೊತೆ-ಜೊತೆಗೆ ಸೋವಿಯತ್ ಸಂಘದ ತತ್ಕಾಲೀನ ಸಾಧನೆಗಳ ವಿಶ್ವವ್ಯಾಪಿ ಪ್ರಭಾವವನ್ನು ತಿಳಿಸುತ್ತದೆ.

● ಸೋವಿಯತ್ ಸಂಘ ಮತ್ತು ಅದರ ಮಹತ್ವಪೂರ್ಣ ಸಾಧನೆಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಅಕ್ಟೋಬರ್ ಕ್ರಾಂತಿಯು ನಿಮ್ಮ ವಿಚಾರ ಶಕ್ತಿ ಹಾಗೂ ಸಾಹಿತ್ಯಿಕ ಕೃಷಿಯ ಮೇಲೆ ಯಾವ ಪರಿಣಾಮವನ್ನುಂಟು ಮಾಡಿತು.

○ ಮೊದ ಮೊದಲು ನಾನು ಪ್ರಾಚೀನ ಸಮಾಜದ ನ್ಯೂನತೆಗಳ ಬಗ್ಗೆ ವಿಚಾರ ಮಾಡುತ್ತಿದ್ದೆ. ಹೊಸ ಸಮಾಜ ನಿರ್ಮಾಣದ ಸರಿಯಾದ ಪ್ರಕ್ರಿಯೆಯನ್ನರಿಯದೆ ಅದರ ರೂಪರೇಷೆಗಳ ಬಗ್ಗೆ ಯೋಚಿಸುತ್ತಿದ್ದೆ. ಹೊಸ ಸಮಾಜದ ಒಳಿತಿನಿಂದಲೇ ಪರಿಸ್ಥಿತಿ ಸುಧಾರಣೆಗೊಳ್ಳುವುದೆಂಬ ಬಗ್ಗೆ ಪೂರ್ಣ ನಂಬಿಕೆ ಇರಲಿಲ್ಲ. ಸಮಾಜವನ್ನು ಕಟ್ಟುವುದರಲ್ಲಿ ಶೋಷಿತರ ಮಹತ್ವವನ್ನು ನಾನು ಅಕ್ಟೋಬರ್ ಕ್ರಾಂತಿಯ ಬಗ್ಗೆ ಬಂಡವಾಳಶಾಹಿ ದೇಶಗಳ ಅಪಪ್ರಚಾರಗಳ ಕಾರಣದಿಂದ ಆ ಬಗ್ಗೆ ನನ್ನಲ್ಲಿ ಉತ್ಸಾಹವೂ ಮೂಡಲಿಲ್ಲ. ಕೆಲವು ಭ್ರಮೆಗಳೂ ಇದ್ದವು... ಆದರೆ ಈಗ ನಾನು ಸೋವಿಯತ್ ಸಂಘದ ಪ್ರಗತಿ ಹಾಗೂ ಕಾರ್ಯ ಸಾಧನೆಯನ್ನು ಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಇಂದು ಒಂದು ವರ್ಗರಹಿತ ಸಮಾಜ ನಿರ್ಮಾಣ ಖಂಡಿತ ಆಗುತ್ತದೆ. ನಾನು ನನ್ನ ಭ್ರಮೆಗಳಿಂದ ಮುಕ್ತನಾಗಿದ್ದೇನೆ.. ನಾನು ಈಗ ಉತ್ಸಾಹವುಳ್ಳವನಾಗಿದ್ದೇನೆ.

ಇನ್ನು ನನ್ನ ಸಾಹಿತ್ಯಿಕ ರಚನೆಯ ಸಂದರ್ಭದಲ್ಲಿ...ನಾನು ಈ ಕ್ರಾಂತಿಕಾರಿ ವಾತಾವರಣದಿಂದ ದೂರವಿದ್ದೇನೆ. ಬಹಳ ವರ್ಷಗಳಿಂದ ನನಗೆ ದೇಶ ಸುತ್ತಲು ಪ್ರವಾಸ ಮಾಡಲು ಸಾಧ್ಯವಾಗಿಲ್ಲ...ವಸ್ತುಗಳನ್ನು ಸರಿಯಾಗಿ ನೋಡಿ ತಿಳಿಯಲು ಸಾಧ್ಯವಾಗಿಲ್ಲ. ಈ ಕಾರಣದಿಂದಾಗಿಯೇ ನಾನು ಪುರಾತನ ಸಮಾಜದ ದೋಷಗಳು ಹಾಗೂ ದೌರ್ಬಲ್ಯಗಳ ಬಗ್ಗೆ ಬೆಳಕು ಚೆಲ್ಲುವಲ್ಲಿ ಮಾತ್ರ ಸಮರ್ಥನಾಗಿದ್ದೇನೆ.

● ಸೋವಿಯತ್ ಸಾಹಿತ್ಯದ ಬಗ್ಗೆ ತಮ್ಮ ಅಭಿಪ್ರಾಯವೇನು ?

○ ವಾಸ್ತವವಾಗಿ ನಾನು ಜರ್ಮನಿ ಮತ್ತು ಜಪಾನಿ ಭಾಷಾನುವಾದವನ್ನು ಮಾತ್ರ ಓದಬಲ್ಲೆ. ನನ್ನ ಅಭಿರುಚಿ ಮತ್ತು ಉಪಯುಕ್ತತೆಯ ಪ್ರಶ್ನೆ ಬಂದಾಗ ಹೊಸ ಸಮಾಜ ನಿರ್ಮಾಣದ ಪ್ರೇರಕವಾಗಿ ಇಲ್ಲಿ ರಚನೆಗೊಂಡ ಕಾದಂಬರಿಗಳು ಈ ಹಿಂದೆ ಯುದ್ಧಸಂಬಂಧವಾಗಿ ರಚನೆಗೊಂಡ ಕಾದಂಬರಿಗಳಷ್ಟು ಉಪಯುಕ್ತವಾಗಿಲ್ಲ. ಚೀನಾದಲ್ಲಿ ಈ ಬೆಳವಣಿಗೆಗಳನ್ನು ಅಳವಡಿಸಬೇಕೆಂಬ ಉದ್ದೇಶದಿಂದ ಸೋವಿಯತ್ ಸಾಹಿತ್ಯವನ್ನು ಆಧ್ಯಯನ ಮಾಡುತ್ತೇನೆ. ಪ್ರಸ್ತುತ ಚೀನಾದೇಶಕ್ಕೆ ಯುದ್ಧ ಸಂಬಂಧಿ ಸಾಹಿತ್ಯ ತುಂಬಾ ಆವಶ್ಯಕವೂ ಮಹತ್ವಪೂರ್ಣವೂ ಆಗಿದೆ.

● ಬಂಡವಾಳಶಾಹಿ ರಾಷ್ಟ್ರಗಳಲ್ಲಿ ನಡೆಯುತ್ತಿರುವ ಯಾವ ಸಾಂಸ್ಕೃತಿಕ ಆಂದೋಲನಗಳು ಮತ್ತು ಚಳುವಳಿ ತಮ್ಮನ್ನು ಆಕರ್ಷಿಸಿತು ?

○ ಚೀನಾದಲ್ಲಿ ನನಗೆ ಹುಸಿಹೆಗ್ಗಳಿಕೆಯ ಸಂಸ್ಕೃತಿ ಎಲ್ಲೂ ಕಾಣುತ್ತಿಲ್ಲ. ನನಗೆ

ಗೊತ್ತಿರುವಂತೆ ನಮ್ಮ ದೇಶದಲ್ಲಿ ವಿದ್ಯುತ್, ಯಂತ್ರ ಮತ್ತು ರಾಸಾಯನಿಕ ವಸ್ತುಗಳನ್ನು ಕ್ರಾಂತಿಕಾರಿ ಜನತೆಗೆ ಹಿಂಸೆ ಕೊಡಲು ಮಾತ್ರ ಆ ಜನ ಬಳಸುತ್ತಾರೆ. ನಮ್ಮ ಕ್ರಾಂತಿಕಾರಿ ಜನತೆಯ ಹತ್ಯೆಗಾಗಿ ಹಡಗು ಮತ್ತು ಬಾಂಬುಗಳನ್ನು ಬಳಸಲಾಗುತ್ತಿದೆ.

**ವಿಚಾರಧಾರೆ-2**

## ಭರವಸೆಯ ಭವಿಷ್ಯ

ಬಾಲ್ಯದಲ್ಲಿ ನನ್ನ ಮನಸ್ಸಿನಲ್ಲು ಅನೇಕ ಕನಸುಗಳಿದ್ದವು. ಅವುಗಳಲ್ಲಿ ಅನೇಕ ಕನಸುಗಳನ್ನು ಮರೆತಿದ್ದೇನೆ. ಇದಕ್ಕಾಗಿ ಮನದಲ್ಲಿ ಯಾವ ವ್ಯಥೆಯೂ ಇಲ್ಲ. ಒಮ್ಮೊಮ್ಮೆ ಕಳೆದ ದಿನಗಳ ನೆನಪು ಸುಖವನ್ನು ತರುತ್ತದೆ. ಆದರೆ ಒಮ್ಮೊಮ್ಮೆ ಆ ದಿನಗಳ ನೆನಪು ಶೂನ್ಯತೆಯನ್ನುಂಟುಮಾಡುತ್ತದೆ. ಶೂನ್ಯತೆಯಿಂದ ಕೂಡಿದ ಕಳೆದ ದಿನಗಳ ಮಾತಿನಿಂದ ಪ್ರಯೋಜನವೇನು? ಆದರೆ ಕಳೆದ ದಿನಗಳನ್ನು ಸಂಪೂರ್ಣವಾಗಿ ಮರೆಯುವುದೂ ಕಷ್ಟತಾನೆ. ಯಾವುದನ್ನು ಮರೆಯಲಾಗಲಿಲ್ಲವೋ ಅವುಗಳ ಪರಿಣಾಮವೇ ನನ್ನ ಕಥೆಗಳು. ನಾಲ್ಕು ವರ್ಷಗಳಿಗಿಂತ ಹೆಚ್ಚು ಸಮಯ ನಿತ್ಯ ಒಂದಲ್ಲ ಒಂದು ವಸ್ತುವನ್ನು ಗಿರಿವಿ ಇಡಲು ಲೇವಾದೇವಿಗಾರನ ಬಳಿ ಹೋಗಿ ಬರಬೇಕಾದಂತಹ ಪರಿಸ್ಥಿತಿ ಇತ್ತು. ಗಿರಿವಿಯಿಂದ ಬಂದ ಹಣದೊಡನೆ ಔಷಧಿ ಅಂಗಡಿಗೆ ಹೋಗುತ್ತಿದ್ದೆ. ಆಗ ನನ್ನ ವಯಸ್ಸೆಷ್ಟೆಂದು ಸರಿಯಾಗಿ ಜ್ಞಾಪಕವಿಲ್ಲ. ಔಷಧಿ ಅಂಗಡಿಯಲ್ಲಿ ನನ್ನ ತಲೆ ಕೌಂಟರ್‌ನ ಸಮಕ್ಕಿರುತ್ತಿತ್ತು. ಮತ್ತು ಲೇವಾದೇವಿಗಾರನ ಕೌಂಟರ್‌ನ ಎತ್ತರ ನನ್ನ ಶರೀರದ ಎರಡು ಪಟ್ಟು ಇರುತ್ತಿತ್ತು ಎಂಬುದು ನೆನಪಿದೆ. ಅವನ ಅಂಗಡಿಗೆ ಗಿರಿವಿ ಇಡಲು ತೆಗೆದುಕೊಂಡು ಹೋಗುತ್ತಿದ್ದ ಬಟ್ಟೆ-ಚಿಂದಿ, ಪಾತ್ರೆ-ಪಗಡಿ ಮುಂತಾದ ವಸ್ತುಗಳನ್ನು ಕೈ ಮೇಲೆತ್ತಿ ಲೇವಾದೇವಿಗಾರನಿಗೆ ಕೊಡುತ್ತಿದ್ದೆ. ಆ ಲೇವಾದೇವಿಗಾರ ತಿರಸ್ಕಾರದಿಂದ ಕೊಟ್ಟಷ್ಟು ಹಣವನ್ನು ತೆಗೆದುಕೊಂಡು ಔಷಧಿ ಅಂಗಡಿಗೆ ಔಷಧಿ ಕೊಳ್ಳಲು ಹೋಗುತ್ತಿದ್ದೆ. ತಂದೆ ಬಹಳಷ್ಟು ದಿನಗಳಿಂದ ಖಾಯಿಲೆಯಿದ್ದರು. ಅವರಿಗೆ ಔಷಧಿ ಕೊಳ್ಳಬೇಕಾಗುತ್ತಿತ್ತು. ಮನೆಗೆ ಹಿಂದಿರುಗಿದ ನಂತರ ಮಾಡಲು ಸಾಕಷ್ಟು ಕೆಲಸವಿರುತ್ತಿತ್ತು. ಒಬ್ಬ ಹೆಸರಾಂತ ಪಂಡಿತರು ತಂದೆಯವರ ಚಿಕಿತ್ಸೆ ಮಾಡುತ್ತಿದ್ದರು. ಅವರು ಬಹಳ ವಿಚಿತ್ರ ರೀತಿಯ ಔಷಧಿಗಳನ್ನು ಬಳಸುತ್ತಿದ್ದರು. ಚಳಿಗಾಲದಲ್ಲಿ ಅಗೆದು ತೆಗೆದ ಮರಗಳ ಬೇರುಗಳು, ಮೂರು ವರ್ಷಗಳವರೆಗೆ ಹಿಮಗಾಳಿಯಲ್ಲಿಟ್ಟ ಕಬ್ಬು, ಒಂದು ಜೊತೆ ಜೀರುಂಡೆಹುಳು

ವಿಚಿತ್ರ ವಾಸನೆಯಿಂದ ಕೂಡಿದ ಗೆಡ್ಡೆ ಬೇರುಗಳು. ಈ ಔಷಧಿಗಳು ಬಹುಶಃ ತುಂಬಾ ಅಪರೂಪದವವಾಗಿದ್ದವು. ಆದರೆ ನಮ್ಮ ತಂದೆಯುವರ ರೋಗ ತೀವ್ರಗೊಂಡು ಕೊನೆಗೆ ಅವರು ಅಸುನೀಗಿದರು.

ಸುಖ-ಸಮೃದ್ಧಿಯನ್ನು ನೋಡಿ ನಂತರ ದಾರಿದ್ರ್ಯಕ್ಕೆ ಗುರಿಯಾದ ಜನ ಸಮಾಜದ ವಾಸ್ತವಿಕತೆಯನ್ನು ಚೆನ್ನಾಗಿ ಅರ್ಥೈಸಿಕೊಳ್ಳಬಲ್ಲರು ಎಂದು ನನಗನ್ನಿಸುತ್ತದೆ. ನಾನು ಶಾಲೆ ಸೇರಲು ಬಯಸುತ್ತಿದ್ದೆ. ಬಹುಶಃ ಇದಕ್ಕೆ ಕಾರಣ ನಾನು ನನ್ನ ವಾತಾವರಣದಿಂದ ಬೇಸರಗೊಂಡಿದ್ದೆ. ಒಂದು ಹೊಸ ವಾತಾವರಣವನ್ನು ಸೇರಬಯಸಿದ್ದೆ. ತಾಯಿ ಅಸಹಾಯಕಳಾಗಿದ್ದಳು. ನನ್ನ ಪ್ರಯಾಣಕ್ಕೆ ಎಂಟು ಡಾಲರ್ ಹೊಂದಿಸಿ ನನ್ನನ್ನು ನನ್ನ ಪಾಡಿಗೆ ಬಿಡದೆ ಅವಳಿಗೆ ಬೇರೆ ದಾರಿಯಿರಲಿಲ್ಲ. ಅಮ್ಮ ಸಾಕಷ್ಟು ಅತ್ತಳು. ಇದು ಸ್ವಾಭಾವಿಕವೂ ಸಹ. ಆ ಕಾಲದಲ್ಲಿ ಹಳೆಯ ಗ್ರಂಥಗಳನ್ನು ಓದಿ ಸರ್ಕಾರಿ ಪರೀಕ್ಷೆಯನ್ನು ಪಾಸು ಮಾಡಿಕೊಳ್ಳುವುದೇ ಬಹಳ ಗೌರವಪ್ರದವೆಂದು ಭಾವಿಸಲಾಗುತ್ತಿತ್ತು. ವಿದೇಶಿ ವಿಷಯಗಳನ್ನು ಅಧ್ಯಯನ ಮಾಡಿದವನನ್ನು ಒಂದು ರೀತಿ ತಿರಸ್ಕಾರದಿಂದ ನೋಡಲಾಗುತ್ತಿತ್ತು. ಮತ್ತು ಅಸಹಾಯಕನಾಗಿ ತನ್ನ ಆತ್ಮವನ್ನು ವಿದೇಶಿ ದರಿದ್ರರಿಗೆ ಮಾರಿಕೊಂಡಿದ್ದಾನೆಂದು ಭಾವಿಸಲಾಗುತ್ತಿತ್ತು. ಇದಲ್ಲದೆ ತಾಯಿಗೆ ನನ್ನ ಅಗಲಿಕೆಯ ದುಃಖವೂ ಇತ್ತು. ಇಷ್ಟೆಲ್ಲ ಇದ್ದು ನಾನು ಹೊರಟು ಶಾಲೆ ಸೇರಿದೆ. ಅಲ್ಲಿಗೆ ಹೋದ ಮೇಲೆ ಪ್ರಾಕೃತಿಕ ವಿಜ್ಞಾನ, ಅಂಕಗಣಿತ, ಭೂಗೋಳ, ಇತಿಹಾಸ, ಚಿತ್ರಕಲೆ ಮತ್ತು ಶಾರೀರಕ ವ್ಯಾಯಾಮ ಮುಂತಾದ ವಿದ್ಯೆಗಳ ಅಸ್ತಿತ್ವವಿದೆಯೆಂಬ ವಿಚಾರ ಗೊತ್ತಾಯಿತು. ಶಾಲೆಯಲ್ಲಿ ಶರೀರ ವಿಜ್ಞಾನದ ಪಾಠ ಮಾಡುತ್ತಿರಲಿಲ್ಲವಾದರೂ "ಮಾನವ ಶರೀರ ರಚನೆಯ ಹೊಸ ಕೋರ್ಸ್" ಮತ್ತು "ರಸಾಯನಶಾಸ್ತ್ರ" ಅಲ್ಲದೆ "ಆರೋಗ್ಯ ರಕ್ಷಣೆಯ ಸೂತ್ರ" ಮುಂತಾದ ವಿಷಯಗಳ ಬಗ್ಗೆ ಮರದ ಬ್ಲಾಕ್‌ನಲ್ಲಿ ಮುದ್ರಿಸಿದ ಸಾಮಗ್ರಿಗಳನ್ನು ನಮಗೆ ಕೊಡಲಾಗುತ್ತಿತ್ತು. ಅವುಗಳನ್ನು ಓದಿದ ಮೇಲೆ ನಮ್ಮ ಪ್ರಾಚೀನ ವೈದ್ಯ ಪಂಡಿತರ ವೈದ್ಯಜ್ಞಾನ ಹಾಗೂ ಅವರು ಕೊಡುತ್ತಿದ್ದ ಔಷಧಿಗಳನ್ನು ತುಲನೆಮಾಡಿ, ಅವರು ಸ್ವತಃ ಎಷ್ಟು ಅಜ್ಞಾನಿಗಳಾಗಿದ್ದರು ಅಥವಾ ಧೂರ್ತರಾಗಿದ್ದರು ಎಂದು ಭಾವಿಸಿದೆ. ಇಂಥ ವೈದ್ಯ ಪಂಡಿತರ ಶಿಕಾರಿಗಳಾಗುವ ರೋಗಿಗಳು ಹಾಗೂ ಅವರ ಕುಟುಂಬದವರ ಬಗ್ಗೆ ಮರುಕಪಟ್ಟೆ. ಇತಿಹಾಸದ ಪುಸ್ತಕದ ಕೆಲವು ಅನುವಾದಗಳನ್ನು ಓದಿದೆ. ಪಾಶ್ಚಿಮಾತ್ಯ ಚಿಕಿತ್ಸಾಶಾಸ್ತ್ರದ ಪರಿಚಯವಾದ ಮೇಲೆಯೇ ಜಪಾನಿನ ಸುಧಾರಣೆ ಆರಂಭವಾಯಿತು ಎಂಬುದನ್ನು ಇದರಿಂದ ಅರಿತೆ.

ಈ ವಿಚಾರಗಳಿಂದ ಪ್ರಭಾವಿತನಾಗಿ ನಾನು ಜಪಾನಿಗೆ ಹೋಗಿ ಒಂದು ಪ್ರಾಂತೀಯ ವೈದ್ಯ ಕಾಲೇಜನ್ನು ಸೇರಿದೆ. ನನ್ನ ತಾಯ್ನಾಡು ಚೀನಾದಲ್ಲಿ ನನ್ನ ತಂದೆಯಂತೆಯೇ ಲಕ್ಷಾಂತರ ಜನ ಯೋಗ್ಯ ಚಿಕಿತ್ಸೆಯಿಂದ ವಂಚಿತರಾಗಿ ನರಳು

ತ್ತಿದ್ದಾರೆ. ವಾಪಸ್ಸಾಗಿ ಅವರಿಗೆ ಚಿಕಿತ್ಸೆ ನೀಡಬಲ್ಲೆ. ಒಂದು ವೇಳೆ ಯುದ್ಧ ಆರಂಭವಾದರೆ ಡಾಕ್ಟರ್ ರೂಪದಲ್ಲಿ ಸೇವೆ ಸಲ್ಲಿಸಬಹುದು. ಜೊತೆಗೆ ನನ್ನ ದೇಶವಾಸಿಗಳಲ್ಲಿ ಸುಧಾರಣೆಯ ಪ್ರೇರಕನಾಗಿ ಕಾರ್ಯ ನಿರ್ವಹಿಸಬಹುದು ಎಂದೆಲ್ಲ ಆ ಸಮಯದಲ್ಲಿ ಕನಸು ಕಂಡಿದ್ದೆ.

ಇಂದು ಶಾಲಾ–ಕಾಲೇಜುಗಳಲ್ಲಿ ಚಿಕಿತ್ಸಾಶಾಸ್ತ್ರ ಮತ್ತು ಸೂಕ್ಷ್ಮಜೀವಿ ವಿಜ್ಞಾನ ವಿಷಯಗಳನ್ನು ಬೋಧಿಸಲು ಯಾವ ಸಾಧನ ಸಾಮಗ್ರಿಗಳನ್ನು ಬಳಸುತ್ತಾರೋ ನನಗದು ಗೊತ್ತಿಲ್ಲ. ನಾನು ಚಿಕಿತ್ಸಾ ವಿಜ್ಞಾನವನ್ನು ಓದುವಾಗ ಲಾಟೀಸ್-ಸ್ಲೈಡ್ ಗಳನ್ನು ಬಳಸಿ ಸೂಕ್ಷ್ಮ ಜೀವಿಗಳ ಪರಿಚಯುವನ್ನು ವಿದ್ಯಾರ್ಥಿಗಳಿಗೆ ಮಾಡಿಸುತ್ತಿದ್ದರು. ಬೋಧನಾ ಕಾರ್ಯ ಸಮಯಕ್ಕೆ ಮೊದಲೇ ಮುಕ್ತಾಯಗೊಂಡರೆ ಅಧ್ಯಾಪಕರು ಸಮಯವನ್ನು ಪೂರ್ತಿಗೊಳಿಸಲು ಪ್ರಾಕೃತಿಕ ದೃಶ್ಯ ಅಥವಾ ಸಮಾಚಾರಗಳ ಸ್ಲೈಡ್‌ಗಳನ್ನು ತೋರಿಸುತ್ತಿದ್ದರು. ಆ ದಿನಗಳಲ್ಲಿ ರಷ್ಯ ಮತ್ತು ಜಪಾನ್ ನಡುವೆ ಯುದ್ಧ ನಡೆಯುತ್ತಿತ್ತು. ಆದುದರಿಂದ ಯುದ್ಧಕ್ಕೆ ಸಂಬಂಧಿಸಿದ ಸಾಕಷ್ಟು ಸಿನಿಮಾಗಳು ಬರುತ್ತಿದ್ದವು. ಬೇರೆ ವಿದ್ಯಾರ್ಥಿಗಳೊಡನೆ ಲೆಕ್ಚರ್ ಹಾಲ್‌ನಲ್ಲಿ ಉತ್ಸಾಹಿತನಾಗಿ ನಾನೂ ಸಹ ಚಪ್ಪಾಳೆ ತಟ್ಟಿ ಹರ್ಷೋದ್ಗಾರಗಳನ್ನು ಮಾಡಬೇಕಾಗುತ್ತಿತ್ತು. ಬಹಳ ದಿನಗಳಿಂದ ನನ್ನ ಯಾವೊಬ್ಬ ದೇಶವಾಸಿಯನ್ನೂ ನೋಡಿರಲಿಲ್ಲ. ಒಂದು ದಿನ ಮಾಮೂಲಿನಂತೆ ನಾವು ನೋಡುತ್ತಿದ್ದ ಸಿನಿಮಾದಲ್ಲಿ ಕೆಲವು ಚೀನಿಯರು ಕಾಣಿಸಿಕೊಂಡರು. ಅವರಲ್ಲಿ ಒಬ್ಬ ಚೀನೀಯನ ಬಾಹುಗಳನ್ನು ಬಂಧಿಸಿದ್ದರು. ಉಳಿದ ಚೀನೀಯರು ಅವನನ್ನು ಸುತ್ತುವರಿದು ನಿಂತಿದ್ದರು. ಇವರೆಲ್ಲ ಕಟ್ಟುಮಸ್ತಾದ ಯುವಕರು. ಆದರೆ ಅವರ ಮುಖಗಳು ಭಾವಶೂನ್ಯವಾಗಿ ಕಂಡು ಬರುತ್ತಿದ್ದವು. ಬಾಹುಗಳನ್ನು ಬಂಧಿಸಿದ್ದ ಯುವಕನ ಮೇಲೆ ರಷ್ಯನ್ನರ ಗೂಢಚಾರಿ ಎಂಬ ಆರೋಪವನ್ನು ಹೊರಿಸಲಾಗಿತ್ತೆಂದು ತಿಳಿದು ಬಂತು. ಜಪಾನಿ ಸೈನಿಕರು ಈ ಯುವಕನ ಕುತ್ತಿಗೆ ಕತ್ತರಿಸಲು ಮೈದಾನಕ್ಕೆ ಕರೆತಂದಿದ್ದರು. ಬೇರೆ ಚೀನೀಯರನ್ನು ಜಾಗೃತಗೊಳಿಸಲು ಈ ಶಿಕ್ಷೆಯನ್ನು ಬಯಲು ಪ್ರದೇಶದಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಆದರೆ ಚೀನೀಯರು ತಮಾಷೆ ನೋಡುವವರಂತೆ ಬಂದು ಸೇರಿದ್ದರು,

ಈ ಘಟನೆಯನ್ನು ನೋಡಿದ ನಂತರ ಚಿಕಿತ್ಸಾ ವಿಜ್ಞಾನದ ಶಿಕ್ಷಣ ಪಡೆಯುವುದು ಅಷ್ಟು ಮಹತ್ವಪೂರ್ಣವಲ್ಲವೆನಿಸಿದ್ದರಿಂದ ಶಿಕ್ಷಣ ಅವಧಿ ಪೂರ್ಣಗೊಳ್ಳುವ ಮುಂಚೆಯೇ ನಾನು ಟೋಕಿಯೋಗೆ ಹೋದೆ. ಹಿಂದುಳಿದ ಮತ್ತು ದುರ್ಬಲ ರಾಷ್ಟ್ರಗಳ ಜನರ ಶರೀರ ಎಷ್ಟು ಬಲಿಷ್ಠವಾಗಿದ್ದರೂ, ಆರೋಗ್ಯಪೂರ್ಣವಾಗಿದ್ದರೂ ಕೇವಲ ಶಿಕ್ಷಿಸಲು ಮತ್ತು ಶಿಕ್ಷಿಸುವ ತಮಾಷೆ ನೋಡಲು ಉಪಯೋಗಿಸಲಾಗುತ್ತದೆ. ಇಂಥ ಜನ ರೋಗದಿಂದ ನರಳಿ ಸತ್ತರೂ ಅಂಥ ವ್ಯಥೆಯ ವಿಚಾರವಲ್ಲ. ಮೊದಲ ಆದ್ಯ ಕರ್ತವ್ಯವೆಂದರೆ ಜನರ ಭಾವನೆಗಳನ್ನು ಬದಲಿಸುವುದು ಎಂಬುದನ್ನು ಮನ

ಗಂಡು, ಇದಕ್ಕೆ ಸಾಹಿತ್ಯವೇ ಸೂಕ್ತ ಮಾರ್ಗವೆಂಬುದನ್ನು ಅರಿತು ಒಂದು ಸಾಹಿತ್ಯಿಕ ಆಂದೋಲನವನ್ನು ಆರಂಭ ಮಾಡಲು ನಿಶ್ಚಯಿಸಿದೆ. ಆ ಸಮಯದಲ್ಲಿ ಟೋಕಿಯೋದಲ್ಲಿ ಸಾಕಷ್ಟು ಚೀನೀ ವಿದ್ಯಾರ್ಥಿಗಳಿದ್ದರು. ಅವರು ಕಾನೂನು, ರಾಜನೀತಿಶಾಸ್ತ್ರ, ಭೌತವಿಜ್ಞಾನ ಮತ್ತು ರಸಾಯನಶಾಸ್ತ್ರ ಓದುತ್ತಿದ್ದರು. ಕೆಲವರು ಪೋಲೀಸ್ ತರಬೇತಿ ಪಡೆಯುತ್ತಿದ್ದರೆ ಮತ್ತೆ ಕೆಲವರು ಇಂಜಿನಿಯರಿಂಗ್ ಶಿಕ್ಷಣ ಪಡೆಯುತ್ತಿದ್ದರು. ಆದರೆ ಸಾಹಿತ್ಯ ಮತ್ತು ಕಲೆಯ ಅಧ್ಯಯನ ಯಾರೂ ಮಾಡುತ್ತಿರಲಿಲ್ಲ. ಈ ಪ್ರತಿಕೂಲ ಪರಿಸ್ಥಿತಿಯಲ್ಲಿ ನನ್ನ ಪುಣ್ಯಕ್ಕೆ ನನ್ನ ಭಾವನೆಗಳಿಗೆ ಸ್ಪಂದಿಸುವ ಕೆಲಜನ ದೊರೆತರು. ನಮಗೆ ಅವಶ್ಯಕವಿದ್ದ ಇನ್ನೂ ಕೆಲವು ಜನರನ್ನು ನಮ್ಮೊಡನೆ ಸೇರಿಸಿಕೊಂಡು ವಿಚಾರ–ವಿನಿಮಯ ನಡೆಸಿದ ನಂತರ ಒಂದು ಪತ್ರಿಕೆ ಆರಂಭಿಸುವ ನಿರ್ಣಯ ಕೈಗೊಂಡೆವು. ಪತ್ರಿಕೆಯ ಹೆಸರು ಆಧುನಿಕತೆಯನ್ನು ಸಂಕೇತಿಸುವಂತಿರಬೇಕೆಂದು ಯೋಚಿಸಿದೆವು. ಅದರಂತೆ 'ಶಿನಶಡ್' (ನವಜೀವನ) ಎಂದು ಪತ್ರಿಕೆಗೆ ನಾಮಕರಣ ಮಾಡಿದೆವು.

ಈ ಪತ್ರಿಕೆಯನ್ನು ಮುದ್ರಿಸುವ ಸಮಯ ಬಂದಾಗ ನಮ್ಮ ಅನೇಕ ಮಿತ್ರರು ಜಾರಿಕೊಂಡರು. ನಾವು ಸಂಗ್ರಹಿಸಿದ್ದ ಹಣವೂ ಸಾಲದಾಯಿತು. ಕೊನೆಗೆ ಯಾರ ಬಳಿಯೂ ಆರ್ಥಿಕ ಬಲವಿಲ್ಲದ ಮೂರು ಜನ ಮಿತ್ರರುಳಿದೆವು. ಪತ್ರಿಕೆಯು ಕೆಟ್ಟ ಘಳಿಗೆಯಲ್ಲಿ ಆರಂಭವಾದ್ದರಿಂದ ಅದರ ಅಸಫಲತೆಗೆ ಯಾರನ್ನು ದೂಷಿಸುವುದು ? ಕೆಲವು ಸಮಯದ ನಂತರ ದುರದೃಷ್ಟವು ನಾವು ಮೂರು ಮಂದಿಯನ್ನು ಒಟ್ಟಿಗೆ ಇರಲು ಬಿಡಲಿಲ್ಲ. ನಮ್ಮ ಭಾವಿ ಕನಸುಗಳು ಸಾಕಾರಗೊಳ್ಳಲಿಲ್ಲ ಮತ್ತು 'ನವಜೀವನ'ದ ಪ್ರಕಾಶನದ ಪ್ರಯತ್ನ ಗರ್ಭಾವಸ್ಥೆಯಲ್ಲೇ ಸಮಾಪ್ತಿಯಾಯಿತು.

ಸ್ವಲ್ಪ ಸಮಯ ಕಳೆದ ನಂತರ ನನಗೆ ನನ್ನ ಉತ್ಸಾಹದ ನಿಸ್ಸಾರತೆಯ ಅನುಭವವಾಯ್ತು. ಇದಕ್ಕೆ ಮೊದಲು ನಿಜವಾಗಿಯೂ ನನಗೆ ಏನೂ ಅರ್ಥವಾಗುತ್ತಿರಲಿಲ್ಲ. ನಂತರ ಜನ ನಮ್ಮ ಪ್ರಯತ್ನವನ್ನು ಪ್ರೋತ್ಸಾಹಿಸಿದರೆ ಸ್ವಾಭಾವಿಕವಾಗಿ ಉತ್ಸಾಹವನ್ನು ಪಡೆಯಬಹುದೆಂಬುದನ್ನು ಅರಿತೆ. ಒಂದು ವೇಳೆ ಜನ ನಮ್ಮ ವಿಚಾರಗಳನ್ನು ವಿರೋಧಿಸಿದರೆ ಅವರೊಡನೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಬಹುದು. ಆದರೆ ನಾವು ಸಮಾಜದ ಮುಂದೆ ಒಂದು ವಿಚಾರವನ್ನು ಇಟ್ಟಾಗ ಜನ ಅದನ್ನು ಸಮರ್ಥಿಸಿಯೋ ಅಥವಾ ವಿರೋಧಿಸಿಯೋ ಸ್ಪಂದಿಸಿದರೆ ಸರಿ. ಅದಿಲ್ಲದೆ ಎಲ್ಲೆಲ್ಲಿಯೂ ಉಪೇಕ್ಷೆಯೇ ಕಂಡು ಬಂದರೆ ಮನುಷ್ಯ ಏನು ಮಾಡಬಲ್ಲ ? ಆಗ ನಾವು ಒಂದು ಬೆಂಗಾಡಿನಲ್ಲಿ ನಿಂತು ವ್ಯರ್ಥ ಕಿರುಚಿದ ಅನುಭವವಾಗಿ ಏನನ್ನೂ ಮಾಡುವ ಉಪಾಯ ತೋರುವುದಿಲ್ಲ. ನನ್ನನ್ನು ನಾನು ಅಸಹಾಯಕನೆಂದುಕೊಂಡೆ.

ಒಂಟಿತನದ ನೋವು ದಿನೇ ದಿನೇ ತೀವ್ರವಾಗುತ್ತಿತ್ತು. ಏಕಾಕೀತನದ ವಿಷಸರ್ಪ ನನ್ನನ್ನು ಸುತ್ತುವರೆದು ಹಿಸುಕುತ್ತಿದೆಯೆಂಬ ಅನುಭವವಾಯ್ತು. ಮನಸ್ಸು ತುಂಬಾ ಭಾರಗೊಂಡಿತು. ಆದರೆ ಯಾರ ಮೇಲೆ ಕ್ರೋಧಗೊಳ್ಳಲಿ ? ಏಕೆಂದರೆ

ನನ್ನಲ್ಲಿ ಶೌರ್ಯದ ಕೊರತೆಯಿದೆ. ಅಲ್ಲದೆ ನನ್ನ ಆಹ್ವಾನದಲ್ಲಿ ಅಸಂಖ್ಯಾತ ಜನರನ್ನು ಹಿಡಿದಿಡುವ ಕ್ಷಮತೆಯು ಅಭಾವವಿದೆಯೆಂಬುದನ್ನು ಈ ಅನುಭವದಿಂದ ಮನಗಂಡಿದ್ದೆ.

ಒಂಟಿತನದ ಈ ಅನುಭೂತಿ ನನ್ನನ್ನು ತುಂಬಾ ಘಾಸಿಗೊಳಿಸುತ್ತಿತ್ತು. ಇದರಿಂದ ಮುಕ್ತನಾಗುವುದು ನನಗೆ ತುಂಬಾ ಅವಶ್ಯಕವಾಗಿತ್ತು. ಯಾವುದೇ ವಿಷಯವಾಗಿ ಚಿಂತಿಸುವುದನ್ನು, ಕೊನೆಗೆ ನನ್ನ ಬಗ್ಗೆ ನಾನು ಯೋಚಿಸುವುದನ್ನು ಬಿಡಲು ತುಂಬಾ ಪ್ರಯತ್ನಿಸಿದೆ. ಕೆಲವೊಮ್ಮೆ ನನ್ನ ರಾಷ್ಟ್ರದ ವೈಭವಪೂರ್ಣ ಇತಿಹಾಸದ ಅಧ್ಯಯನದಲ್ಲಿ ನನ್ನನ್ನು ನಾನು ಮರೆಯಲು ಪ್ರಯತ್ನಿಸಿದೆ. ನಂತರ ನನಗೆ ಮತ್ತಷ್ಟು ಒಂಟಿತನ ಹಾಗೂ ಶೂನ್ಯತೆಯ ಅನುಭವವಾಗತೊಡಗಿತು. ನಾನು ಯೌವನದ ಉತ್ಸಾಹ ಹಾಗೂ ಸ್ಫೂರ್ತಿಯಿಂದ ವಂಚಿತನಾಗಿದ್ದೆ.

ಹಾಸ್ಟೆಲ್‌ನಲ್ಲಿ ಮೂರು ಕೊಠಡಿಗಳಿದ್ದವು. ಅಂಗಳದಲ್ಲಿ ಒಂದು ಜಾಲಿಮರವಿತ್ತು. ಮೊದಲು ಈ ಕಟ್ಟಡದಲ್ಲಿ ಒಬ್ಬ ಹೆಂಗಸಿದ್ದಳೆಂದೂ ಅವಳು ಅಂಗಳದ ಈ ಮರಕ್ಕೆ ನೇಣು ಹಾಕಿಕೊಂಡು ಸತ್ತಳೆಂದೂ ಜನ ಹೇಳುತ್ತಿದ್ದರು. ಇಂದು ಮರ ಸಾಕಷ್ಟು ದೊಡ್ಡದಾಗಿ ಅದರ ಕೊಂಬೆಗಳನ್ನು ಮುಟ್ಟುವುದು ಸುಲಭಸಾಧ್ಯವಾಗಿರಲಿಲ್ಲ. ಆದರೆ ಕಟ್ಟಡ ಖಾಲಿಯಾಗಿತ್ತು. ಕೆಲವು ವರ್ಷಗಳವರೆಗೆ ನಾನು ಇದೇ ಕಟ್ಟಡದಲ್ಲಿದ್ದು ಹಳೆಯ ಶಾಸನಗಳ ನಕಲು ಮಾಡುತ್ತಿದ್ದೆ. ಬಹಳಷ್ಟು ಕಡಿಮೆ ಜನ ನನ್ನನ್ನು ಭೇಟಿ ಮಾಡಲು ಬರುತ್ತಿದ್ದರು. ಆ ಹಳೆಯ ಶಾಸನಗಳಲ್ಲಿ ರಾಜಕೀಯ ಸಮಸ್ಯೆ ಅಥವಾ ಘಟನೆಗಳ ಉಲ್ಲೇಖವಿರುವ ಸಾಧ್ಯತೆ ಇರಲಿಲ್ಲ. ಉಳಿದ ಜೀವನವೂ ಇದೇ ರೀತಿ ಮೌನವಾಗಿ ಮುಗಿಯಲಿ ಎಂಬ ಇಚ್ಛೆ ಇತ್ತು. ಬೇಸಿಗೆಯ ರಾತ್ರಿಗಳಲ್ಲಿ ಅಸಂಖ್ಯಾತ ಸೊಳ್ಳೆಗಳು. ಕಡಿತದಿಂದ ಪಾರಾಗಲು ಕೈಯಲ್ಲಿ ಬೀಸಣಿಗೆ ಹಿಡಿದು ಜಾಲಿ ಮರದ ಕೆಳಗೆ ಕುಳಿತು ಆಕಾಶ ನೋಡಲು ಪ್ರಯತ್ನಿಸುತ್ತಿದ್ದೆ. ಮರದ ಕೊಂಬೆ ಎಲೆಗಳಿಂದ ಹಿಮ ಬಿಂದುಗಳು ನನ್ನ ಮೇಲೆ ಬೀಳುತ್ತಿದ್ದವು

ಚಿನ್‌ಶಿನ್–ಎಂಬ ಈ ನನ್ನ ಹಳೆಯ ಮಿತ್ರ ನನ್ನನ್ನು ನೋಡಲು ಆಗಾಗ ಬರುತ್ತಿದ್ದ. ಚಿನ್ ಬಂದಾಗಲೆಲ್ಲ ತನ್ನ ದೊಡ್ಡ ಪೆಟ್ಟಿಗೆಯನ್ನು ಮುರಿದ ಮೇಜಿನ ಮೇಲೆ ಇಟ್ಟು ತನ್ನ ಉದ್ದ ನಿಲುವಂಗಿಯನ್ನು ಬಿಚ್ಚಿ ನನ್ನ ಮುಂದೆ ಕುಳಿತು ಬಿಡುತ್ತಿದ್ದ. ಹಿಂಬಾಲಿಸಿ ಬರುತ್ತಿದ್ದ ನಾಯಿಗಳ ಭಯದಿಂದ ಅವನು ಏದುಸಿರು ಬಿಡುತ್ತಿದ್ದ. ಒಂದು ದಿನ ಸಂಜೆ ವೇಳೆ ಹಳೆ ಶಿಲಾಶಾಸನಗಳ ನಕಲನ್ನು ನೋಡಿ "ಹೀಗೆ ನಕಲು ಮಾಡುವುದರಿಂದ ಲಾಭವೇನೆಂದು" ಕುತೂಹಲದಿಂದ ಕೇಳಿದ.

"ಏನೂ ಇಲ್ಲ."

"ಮತ್ತೆ ಇವುಗಳಿಗಾಗಿ ಸಮಯವನ್ನೇಕೆ ವ್ಯರ್ಥ ಮಾಡುತ್ತೀಯ ?"

"ಸಮಯ ಕಳೆಯಲಿಕ್ಕಾಗಿ."

"ಇದರ ಬದಲು ಸ್ವಂತ ಏನಾದರು ಬರೆಯಬಹುದಲ್ಲ."

ಚಿನ್‌ನ ಅಭಿಪ್ರಾಯವನ್ನು ನಾನು ಅರ್ಥ ಮಾಡಿಕೊಂಡೆ. ಅವನು ಕೆಲವರೊಡನೆ ಸೇರಿ "ಆಧುನಿಕ ಯುವಕರು" ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದ್ದ. ಪತ್ರಿಕೆಯ ಕಡೆ ಜನ ವಿಶೇಷ ಗಮನ ಕೊಟ್ಟಿರಲಿಲ್ಲ. ಆ ಪತ್ರಿಕೆಯನ್ನು ಸಮರ್ಥಿಸಲೂ ಇಲ್ಲ, ವಿರೋಧಿಸಲೂ ಇಲ್ಲ. ಜನರೂ ಒಂಟಿತನವನ್ನು ಅನುಭವಿಸುತ್ತಿದ್ದಾರೆ ಅವರಿಗೆ ನೆರವು ಸಹಕಾರ ಬೇಕೆಂದು ನನಗನ್ನಿಸಿತು. "ಕಬ್ಬಿಣದ ದಪ್ಪ ಗೋಡೆಯ ಕಟ್ಟಡವಿದೆ ಎಂದು ಕಲ್ಪಿಸಿಕೊ, ಯಾವುದೇ ಬಾಗಿಲು ಕಿಟಕಿ ಅಥವಾ ಬೆಳಕಿನ ವ್ಯವಸ್ಥೆ ಇಲ್ಲ. ಗಾಳಿ ಸಂಚಾರಕ್ಕೂ ವ್ಯವಸ್ಥೆ ಇಲ್ಲ. ಗೋಡೆಗಳು ಅಭೇದ್ಯ. ಕಟ್ಟಡದಲ್ಲಿ ಅಸಂಖ್ಯಾತ ಜನ ಎಚ್ಚರ ತಪ್ಪಿ ಮಲಗಿದ್ದಾರೆ. ಖಂಡಿತವಾಗಿಯೂ ಆ ಜನ ಉಸಿರು ಕಟ್ಟಿ ಸಾಯುತ್ತಾರೆ. ಪ್ರಜ್ಞಾಹೀನರಾಗಿ ಸಾಯುವುದರಿಂದ ಅವರಿಗೆ ಯಾತನೆಯ ಅನುಭವವಾಗುವುದಿಲ್ಲ. ನೀನು ಕೂಗಿ ಕಿರುಚಿ ಅವರನ್ನು ಎಚ್ಚರಿಸುವ ಪ್ರಯತ್ನ ಪಟ್ಟರೆ ಕೆಲವರು ನಿದ್ದೆಯಿಂದ ಎಚ್ಚರವಾಗಬಹುದು. ಆದರೆ ಉಸಿರುಕಟ್ಟಿ ಸಾಯುವುದಂತೂ ನಿಶ್ಚಿತ. ಕೆಲವು ನತದೃಷ್ಟರು ಎಚ್ಚರಗೊಂಡು ನಿಶ್ಚಿತ ಮೃತ್ಯುವಿನ ಯಾತನೆಯನ್ನು ಅನುಭವಿಸುವುದರಿಂದ ಅವರಿಗಾಗುವ ಒಳಿತೇನು"? ಎಂದು ನಾನು ಕೊಂಚ ಯೋಚಿಸಿ ಹೇಳಿದೆ.

"ಕೆಲವರು ನಿದ್ರೆಯಿಂದ ಜಾಗೃತರಾಗಬಲ್ಲವರಾದರೆ ಲೋಹದ ಬಂಧೀಖಾನೆಯನ್ನು ನಾಶಗೊಳಿಸುವ ಯಾವ ಭರವಸೆಯೂ ಇಲ್ಲವೆಂದು ಹೇಗೆ ಹೇಳುವುದು?" ಎಂದ ಚಿನ್.

ನಾನು ಭರವಸೆಯನ್ನು ಬಿಟ್ಟಿದ್ದೇನೋ ನಿಜ. ಆದರೆ ಭರವಸೆಯೇ ಸಂಪೂರ್ಣವಾಗಿ ನನ್ನಲ್ಲಿ ಇಲ್ಲವಾಗಿತ್ತೆಂದು ಹೇಗೆ ಹೇಳುವುದು. ಭರವಸೆಯೇ ಭವಿಷ್ಯ. ನನ್ನ ನಿರಾಶೆಯ ಉದಾಹರಣೆಯನ್ನು ನೀಡಿ ಅವರ ಭರವಸೆಯ ಮೇಲೆ ವಜ್ರಘಾತ ಮಾಡುವ ಮನಸ್ಸಾಗಲಿಲ್ಲ. ಹಾಗಾಗಿ ಬರೆಯಲು ಒಪ್ಪಿದೆ. ಇದರ ಪರಿಣಾಮವೇ ನನ್ನ ಮೊದಲ ಕಥೆ "ಹುಚ್ಚನ ದಿನಚರಿ". ಅಂದಿನಿಂದ ಬರೆಯುತ್ತಲೇ ಹೋದೆ. ಮಿತ್ರರು ಹೇಳಿದಾಗಲೆಲ್ಲಾ ಸಣ್ಣ ಪುಟ್ಟ ಕಥೆ ಬರೆದು ಬಿಡುತ್ತಿದ್ದೆ,

# ಪಾಕಿಸ್ತಾನ, ಬಾಂಗ್ಲಾ ಮತ್ತು ನೇಪಾಳದ ಕಾವ್ಯ–ಒಂದು ಟಿಪ್ಪಣಿ

ಎಚ್. ಎಸ್. ವೆಂಕಟೇಶಮೂರ್ತಿ

ಪಾಕಿಸ್ತಾನ ಸ್ವತಂತ್ರ ರಾಷ್ಟ್ರವಾಗಿ ಅಸ್ತಿತ್ವಕ್ಕೆ ಬರುವುದಕ್ಕೆ 9 ವರ್ಷಗಳ ಮೊದಲೇ ತೀರಿಹೋದರೂ, ಮಹಮ್ಮದ್ ಇಕ್ಬಾಲ್ (1873–1938) ಅವರನ್ನು ಪಾಕಿಸ್ತಾನಿ ಕಾವ್ಯದ ಜನಕ ಎಂದು ಕರೆಯಬಹುದು. ಇಕ್ಬಾಲ್ ಪರ್ಷಿಯನ್ ಮತ್ತು ಉರ್ದು ಎರಡು ಭಾಷೆಗಳಲ್ಲೂ ಕಾವ್ಯ ರಚಿಸಿದ ಮಹತ್ವದ ಕವಿ. ಉರ್ದು ಈಗ ಪಾಕಿಸ್ತಾನದ ಅಧಿಕೃತ ಭಾಷೆಯಾಗಿ ಅಂಗೀಕೃತವಾಗಿದೆ. (ಈಚೆಗೆ ಬೆಂಗಾಲಿ ಭಾಷೆಗೂ ಅಂಥ ಮಾನ್ಯತೆ ಸಿಕ್ಕಿದೆ). ಇಕ್ಬಾಲ್ ಪಾಕಿಸ್ತಾನದ ಕನಸುಕಂಡ ಕವಿ ಕೂಡ. 'ಒಂದೇ ಇಂಡಿಯಾ; ಎರಡು ರಾಷ್ಟ್ರಗಳು'—ಇದು ಆ ಕವಿಯ ಆದರ್ಶವಾಗಿತ್ತು. ಎರಡು ರಾಷ್ಟ್ರಗಳೇನೋ ಆದವು. ಆದರೆ ಒಂದೇ ಇಂಡಿಯಾ ಎಂಬ ಅವರ ಕನಸು, ಕಲ್ಪನೆ ಮಾತ್ರ ಭಗ್ನವಾಯಿತು. ಇಂಡಿಯಾ ಹೀಗೆ ಎರಡಾಗುವುದನ್ನು ಇಕ್ಬಾಲ್ ಬಯಸಿದ್ದರೆ ಎಂಬುದು ಈಗ ಅಪ್ರಸ್ತುತ ಪ್ರಶ್ನೆ.

ಇಕ್ಬಾಲ್ ಪ್ರೀತಿಯ ಸುತ್ತ ಪರಿಭ್ರಮಿಸುತ್ತಿದ್ದ ಗಜಲ್‌ಗೆ ಗಾಂಭೀರ್ಯವನ್ನೂ, ಘನವಾದ ಗುರಿಯನ್ನೂ, ವಸ್ತುವೈವಿಧ್ಯವನ್ನೂ ದೊರಕಿಸಿಕೊಟ್ಟ ಕವಿ.

ಎನ್. ಎಮ್. ರಷೀದ್ (1910) ಪಾಕಿಸ್ತಾನದ ಮುಂಚೂಣಿ ಕವಿಗಳಲ್ಲಿ ಒಬ್ಬರು. 1952ರಿಂದ ಅಮೆರಿಕಾದಲ್ಲಿ ಪಾಕಿಸ್ತಾನದ ವಾರ್ತಾ ಅಧಿಕಾರಿಯಾಗಿ, ಆಮೇಲೆ ಇರಾನ್‌ನಲ್ಲಿ ಪಾಕಿಸ್ತಾನದ ವಾರ್ತಾ ಅಧಿಕಾರಿಯಾಗಿ ಸೇವೆ ಸಲ್ಲಿಸಿದ್ದಾರೆ.

ತಾಫಿಖ್ ರಾಫತ್ (Taufiq Rafat) (1927) ಸಂಪೂರ್ಣ ಆಧುನಿಕ ಎನ್ನಬಹುದಾದ, (ಇಂಗ್ಲಿಷ್ ಭಾಷೆಯಲ್ಲಿ ಬರೆಯುವ) ಪ್ರಸಿದ್ಧ ಪಾಕಿಸ್ತಾನೀ ಕವಿ.

ಬಾಂಗ್ಲಾ ದೇಶದ ಕವಿಗಳು ಬರೆಯುವ ಕಾವ್ಯ ಇಂಡಿಯಾದ ಪಶ್ಚಿಮ ಬಂಗಾಲದ ಬಂಗಾಲೀ ಹಿಂದೂ ಕವಿಗಳು ಬರೆಯುವ ಕಾವ್ಯವನ್ನು ಹೋಲುವಂಥದ್ದು. ಆರಂಭದಲ್ಲಿ ಬಾಂಗ್ಲಾ ದೇಶದ ಕವಿಗಳು ಅರಾಬಿಕ್, ಪರ್ಷಿಯನ್, ಉರ್ದು ಭಾಷೆಗಳ ಪದಗಳನ್ನು ತಾವು ಬರೆಯುವ ಬಂಗಾಲೀ ಪದ್ಯಗಳಲ್ಲಿ ವಿಶೇಷವಾಗಿ ಬೆರೆಸುತ್ತಿದ್ದರಾದರೂ, ಈಚೆಗೆ ಆ ಪ್ರವೃತ್ತಿ ಕಡಿಮೆಯಾಗುತ್ತಿದೆ. ಇವರ ಕಾವ್ಯ ಹೆಚ್ಚು ಭಾವಗೀತಾತ್ಮಕವಾಗಿದೆ. ಇಸ್ಲಾಮಿನ ಬಿಗಿಯಾದ ವಿಧಿನಿಷೇಧ ಸೂತ್ರಗಳು ಈ ಕವಿಗಳ

ಮೇಲೆ ಹೆಚ್ಚಿನ ಪರಿಣಾಮವನ್ನೇನೂ ಮಾಡಿಲ್ಲವೆಂದೇ ಹೇಳಬೇಕು. ಗೀತಾತ್ಮಕ ಬಂಗಾಲೀ ಮನೋವೃತ್ತಿಯೇ ಅವರನ್ನಿನ್ನೂ ಆಳುತ್ತಿರುವುದು ಪಾಕಿಸ್ತಾನದ ನೀತಿ ಪರವಾದ (didactic) ಉರ್ದು ಕಾವ್ಯಕ್ಕಿಂತ, ಬಾಂಗ್ಲಾದೇಶದ ಬೆಂಗಾಲೀ ಕಾವ್ಯ ಸಾಕಷ್ಟು ಭಿನ್ನವಾಗಿದೆಯೆಂದೇ ಹೇಳಬೇಕು.

ಅಬ್ದುಲ್ ಘನಿ ಹಜಾರಿ (Abdul Ghani Hazari) (1925) ಬಂಗ್ಲಾ ದೇಶದ ಪ್ರಸಿದ್ಧ ಕವಿ. 1964ರಲ್ಲಿ ಇವರಿಗೆ ಪಿ.ಇ.ಎನ್. ಸಂಸ್ಥೆ ನೀಡುವ 'ಏಷಿಯಾ ಕಾವ್ಯ ಪ್ರಶಸ್ತಿ'ಯೂ ಲಭಿಸಿದೆ.

ಭಾರತದೊಂದಿಗೆ ನಿಕಟವಾದ ಸಾಂಸ್ಕೃತಿಕ ಸಂಬಂಧವಿದ್ದರೂ, ನೇಪಾಲೀ ಕಾವ್ಯಕ್ಕೆ ಅದರದ್ದೇ ಆದ ಸ್ವತಂತ್ರ ಅಸ್ತಿತ್ವವಿದೆ. ಹಿಂದೂಧರ್ಮ ಮತ್ತು ಬೌದ್ಧ ಧರ್ಮ ಈ ಕಾವ್ಯದ ತಾತ್ವಿಕತೆಯನ್ನು ರೂಪಿಸಿವೆ ಎನ್ನಬಹುದು. ಬುದ್ಧ ನೇಪಾಲ ದಲ್ಲಿ ಜನಿಸಿದವನೇ ಆದಕಾರಣ ಬೌದ್ಧಧರ್ಮದ ಪ್ರಭಾವ ನೇಪಾಲೀ ಕಾವ್ಯದ ಮೇಲೆ ಒಂದು ಪಟ್ಟು ಹೆಚ್ಚಾಗಿದೆಯೇ ಇದೆ ಎನ್ನಬಹುದು.

ಬಾಲಕೃಷ್ಣಸಾಮ (1903) ನೇಪಾಲದ ಪ್ರಾತಿನಿಧಿಕ ಕವಿ; ಚಿತ್ರಕಾರ ಹಾಗೂ ನಾಟಕಕಾರನೂ ಹೌದು. ಈತ ಬುದ್ಧಪೂರ್ವ ಯುಗದ ಕೃಷ್ಣಭಕ್ತಿ ಪಾರಮ್ಯವನ್ನು ಎತ್ತಿಹಿಡಿಯುವ ಭಾಗವತ ಸಂಪ್ರದಾಯದ ಕವಿಯಾಗಿದ್ದಾರೆ. ಶ್ರೀಕೃಷ್ಣನ ಜೀವನದ ಅನೇಕ ಘಟನೆಗಳನ್ನು ಆಧರಿಸಿ ಸೊಗಸಾದ ಗೀತೆಗಳನ್ನು ಬರೆದಿದ್ದಾರೆ.

# ಹರಾಕಿರಿ

ಮೂಲ : ಹೆನ್ರಿ ಸ್ಕಾಟ್‌ಸ್ಟೋಕ್ಸ್
ಅನು : ಆರ್.ಲಕ್ಷ್ಮೀನಾರಾಯಣ

ಮಶಿತಾ ಅತ್ಯಂತ ಲಕ್ಷ್ಯಪೂರ್ವಕವಾಗಿ ಕತ್ತಿಯನ್ನು ನೋಡುತ್ತಾ ಹೇಳಿದರು– "ನೀವು ಈ ಕತ್ತಿಯನ್ನು ಏಕೆ ಇಟ್ಟುಕೊಂಡಿದ್ದೀರಿ ಎಂದು ಹೇಳುತ್ತೀರಾ ?" ಮಿಶಿಮಾ ಹೇಳಿದರು.—"ಕತ್ತಿ ಇಟ್ಟುಕೊಳ್ಳುವುದು ತುಂಬ ಉಚಿತ. ಇದೊಂದು ಅತ್ಯಂತ ಪ್ರಾಚೀನ ಮಿಲಿಟರಿ ಕತ್ತಿ. ನನ್ನ ಹತ್ತಿರ ಈ ಅಪರೂಪದ ಕತ್ತಿಯ ಬಗ್ಗೆ ಒಂದು ಪ್ರಮಾಣ ಪತ್ರ ಕೂಡ ಇದೆ. ನೀವು ಅದನ್ನು ನೋಡೋಕೆ ಇಷ್ಟ ಪಡುತ್ತೀರೇನು ?

ಜನರಲ್ ಹೇಳಿದರು—"ಖಂಡಿತ."

"ಮೊದಲು ಇದನ್ನು ಹೊರಕ್ಕೆ ತೆಗೀಬೇಕು ತಾಳಿ" ಎಂದು ಹೇಳಿ ಮಿಶಿಮಾ ಮೇಲೆದ್ದು ಕತ್ತಿಯನ್ನು ಕೈಗೆತ್ತಿಗೂಂಡರು. ಆಮೇಲೆ ತನ್ನ ನುರಿತ ಕೈಗಳಿಂದ ಕತ್ತಿಯನ್ನು ಒರೆಯಿಂದ ಹೊರಕ್ಕೆಳೆದು ಹೊಳೆಯುವ ಕತ್ತಿಯನ್ನು ಮೇಲೆತ್ತಿದರು.

ಮಿಶಿಮಾ ಮತ್ತು ಮಶಿತಾ ಇಬ್ಬರೂ ಕೆಲ ಕ್ಷಣ ಕತ್ತಿಯನ್ನು ಲಕ್ಷ್ಯವಿಟ್ಟು ನೋಡಿದರು.

"ಕೋಗಾ ಒಂದು ಕರ್ಚೀಪು ತಗೊಂಡು ಬಾ"—ಎಂದು ಮಿಶಿಮಾ ಛಿಬೀ ಕೋಗಾನಿಗೆ ಹೇಳಿದರು.

ಕುಳ್ಳ ಆಕೃತಿಯ ವಿದ್ಯಾರ್ಥಿ ಕೋಗಾ ತಾನು ಕುಳಿತಿದ್ದ ಕುರ್ಚಿಯಿಂದ ಎದ್ದು ಮಿಶಿಮಾ ಮತ್ತು ಮಶಿತಾರ ಮೇಜುಗಳ ಹತ್ತಿರ ಬಂದು ನಿಂತ. ಅವನ ಕೈಯಲ್ಲಿ ಒಂದು ಮಜಬೂತಾದ ಟವಲ್ ಇತ್ತು. ಈ ಟವಲ್ಲೇ ಮಿಶಿಮಾ ತರಲು ಹೇಳಿದ ಕರ್ಚೀಫು ಆಗಿತ್ತು. ಇದನ್ನು ಛಿಬೀ ಕೋಗಾ ಜನರಲ್ ಮಶಿತಾರ ಬಾಯಿ ಮುಚ್ಚಲು ಬಳಸುವವನಿದ್ದ. ಈ ಕರ್ಚೀಫಿನಿಂದ ಹಿಂದುಗಡೆಯಿಂದ ಮಶಿತಾನ ಬಾಯಿಯನ್ನು ಅದುಮಿಬಿಡಬೇಕೆಂದು ಅವನಿಗೆ ಈ ಮುಂಚೆಯೇ ಆದೇಶ ನೀಡಲಾಗಿತ್ತು.

ಛಿಬೀ ಕೋಗಾ ಧರ್ಮಸಂಕಟದಲ್ಲಿ ಸಿಕ್ಕಿದ್ದ. ಅವನು ಇನ್ನೂ ಹೆಚ್ಚು ಹೊತ್ತು ನಿರೀಕ್ಷಿಸುವಂತಿರಲಿಲ್ಲ. ಕಾರಣ ಅವರು ಮೊದಲೇ ನಿಶ್ಚಯಿಸಿದ್ದ ಹಂಚಿಕೆಯಂತೆ

ಹೀಗಾಗಕೂಡದು. ತಕ್ಷಣ ಏನಾದರೂ ಬದಲಿಯಾಗಿ ಮಾಡಲೂ ಅಸಮರ್ಥ ನಾಗಿದ್ದ.

ಬೇರೆ ಏನೂ ತೋಚದೆ ಇದ್ದಾಗ ಅವನು ಮಿಶಿಮಾರಿಗೆ ಟವಲ್ ಕೊಟ್ಟು ಬಿಟ್ಟು ತನ್ನ ಕುರ್ಚಿಯಲ್ಲಿ ಕೂತುಬಿಟ್ಟ.

ಮಿಶಿಮಾ ತುಂಬ ಚೊಕ್ಕಟವಾಗಿ ಕತ್ತಿಯನ್ನು ಒರೆಸಿದರು. ಆಮೇಲೆ ಅದನ್ನೆತ್ತಿ ಅದರ ಅಲಗನ್ನು ಮೆಚ್ಚಿಗೆಯ ದೃಷ್ಟಿಯಿಂದ ನೋಡತೊಡಗಿದರು. ಅಲಗು ಒಂದು ಚೂರೂ ಮೊಂಡಾಗಿರಲಿಲ್ಲ.

ಮಶಿತಾ ಕತ್ತಿಯನ್ನು ಮಿಶಿಮಾನಿಗೆ ವಾಪಸ್ ಕೊಟ್ಟರು. ಇಬ್ಬರೂ ಕುಳಿತರು. ಆಗ ಹನ್ನೊಂದು ಗಂಟೆಯಾಗಿ ಐದು ನಿಮಿಷವಾಗಿತ್ತು.

ಛಿಬೀ ಕೋಗಾ ಇನ್ನೊಮ್ಮೆ ಎದ್ದು ಹತ್ತಿರ ಬಂದ. ಮಿಶಿಮಾ ಅವನಿಗೆ ಮೌನವಾಗಿ ಸೂಚನೆ ಕೊಟ್ಟರು.

ಛಿಬೀ ಕೋಗಾ ಒಂದು ಹೆಜ್ಜೆ ಮುಂದಿಟ್ಟು ಮಶಿತಾರ ಹಿಂದೆ ಹೋಗಿ ನಿಂತ. ಒಮ್ಮೆಲೇ ತನ್ನ ಕೈಗಳಿಂದ ಜನರಲ್ ಮಶಿತಾರ ಕುತ್ತಿಗೆ ಹಿಚುಕತೊಡಗಿದ.

ಛಿಬೀ ಕೋಗಾನ ಈ ಕಾರ್ಯತಂತ್ರ ಇತರೆ ವಿದ್ಯಾರ್ಥಿಗಳಿಗೆ ಕಾರ್ಯ ತತ್ಪರ ರಾಗಲು ಸೂಚನೆಯಾಗಿತ್ತು.

ಫುರೂ ಕೋಗಾ ಮತ್ತು ಸಣಕಲು ಶರೀರದ ಓಗಾವಾ ಇಬ್ಬರೂ ಛಿಬೀ ಕೋಗಾನ ಸಹಾಯಕ್ಕೆ ಧಾವಿಸಿದರು. ಅವರಿಬ್ಬರೂ ತಮ್ಮ ಜೇಬುಗಳಿಂದ ಹುರಿ ಗಳನ್ನೆಳೆದುಕೊಂಡು ಅವುಗಳಿಂದ ಮಶಿತಾರ ಕೈ ಕಾಲುಗಳನ್ನು ಕುರ್ಚಿಗೆ ಕಟ್ಟಿ ಬಿಟ್ಟರು.

ಮಿಶಿಮಾ ಕಛೇರಿಯ ನಡುವೆ ನಿಂತುಬಿಟ್ಟರು. ಅವರ ಕಣ್ಣುಗಳು ಕೆಂಪಾಗಿ ದ್ದುವು, ಕತ್ತಿಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದರು.

ಕೊಠಡಿಯಲ್ಲಿ ಒಂದು ಸಣ್ಣ ಕಂಡಿಯೂ ಇತ್ತು. ಅದರ ವಿಷಯ ಮಿಶಿಮಾ ಮತ್ತು ಅವರ ಸಂಗಡಿಗ ವಿದ್ಯಾರ್ಥಿಗಳಿಗೆ ಗೊತ್ತಿರಲಿಲ್ಲ. ಈ ಕಂಡಿ ಪ್ರವೇಶದ್ವಾರದ ಬಾಗಿಲಿನ ಎಡಗಡೆಯ ಕಿಟಕಿಯ ಗಾಜಿನ ಮರೆಯಲ್ಲಿತ್ತು. ಈ ಕಿಟಕಿಯ ಗಾಜು ಅಪಾರ ದರ್ಶಕವಾಗಿತ್ತು. ಈ ಕಂಡಿಯನ್ನು ಪಾರದರ್ಶಕವಾದ ಟೇಪಿನ ಚಿಕ್ಕ ಚೂರಿನಿಂದ ಮಾಡಲಾಗಿತ್ತು. ಇದರ ಮೂಲಕ ಮಶಿತಾರ ಕಛೇರಿಯ ಒಳಭಾಗ ವನ್ನು ಮಸಕು ಮಸಕಾಗಿ ನೋಡಬಹುದಿತ್ತು.

ಪಕ್ಕದ ಕಛೇರಿಯಿಂದ ಮೇಜರ್ ಸಾಕ್‌ಮೊತೋ ಹೊರಬಂದಿದ್ದ. ಆ ಕಂಡಿ ಯಿಂದ ಜನರಲ್ ಮಶಿತಾರನ್ನು ಕುರ್ಚಿಗೆ ಕಟ್ಟಿಹಾಕಿರುವುದು ಹಾಗೂ ಬಾಯಿಗೆ ಬಟ್ಟೆ ತುರುಕಿರುವುದು ಕಣ್ಣಿಗೆ ಬಿತ್ತು. ಕೂಡಲೇ ಒಳಗಡೆ ಏನೋ ಅನಾಹುತ ನಡೆದಿದೆ ಎಂದು ಗೊತ್ತಾಯಿತು. ಅವನು ಕರ್ನಲ್ ಹಾರಾನನ್ನು ಕರೆಯಲು ಓಡಿದ.

ಒಬ್ಬೊಬ್ಬರಾಗಿ ಎಲ್ಲ ಅಧಿಕಾರಿಗಳೂ ಮಶಿತಾರನ್ನು ಕಂಡಿಯಿಂದ ಇಣುಕಿ ನೋಡಿದರು. ಆನಂತರ ಅವರೆಲ್ಲರೂ ಯೂಮಾಜಿಯ ಕಛೇರಿಯಲ್ಲಿ ಗುಂಪು ಸೇರಿದರು,

ಮಶಿತಾರ ಸಹಾಯಕ್ಕಾಗಿ ಈ ಅಧಿಕಾರಿಗಳು ಹುಂಚಿಕೆ ಸಿದ್ಧಪಡಿಸುತ್ತಿದ್ದಾಗ ಅಲ್ಲಿಂದಲೇ ಬೇರೊಂದು ಬಾಗಿಲ ಕಡೆಗೆ ಸಾಗಿಸುತ್ತಿದ್ದ ಕುರ್ಚಿಮೇಜುಗಳ ಸದ್ದೂ ಒಂದೇ ಸಮನೆ ಕೇಳಿಸುತ್ತಿತ್ತು.

ಒಬ್ಬ ಅಧಿಕಾರಿ ಕೇಳಿದ—"ವಿಷಯವಾದರೂ ಏನು ?" ಜನರಲ್ ಹೇಳಿದ— "ನಾವು ಇದರ ಬುಡಮಟ್ಟ ಪರೀಕ್ಷೆಮಾಡಿ ಪತ್ತೆ ಹಚ್ಚುತ್ತೇವೆ."

ಮಿಶಿಮಾ ತನ್ನ ಎರಡನೇ ಯೋಜನೆಯನ್ನು ಜಾರಿಗೊಳಿಸುವ ಸಿದ್ಧತೆಯಲ್ಲಿ ತೊಡಗಿದ್ದರು. ಈ ಸ್ಟರ್ನ್ ಆರ್ಮಿ ಹೆಡ್ ಕ್ವಾರ್ಟರ್ಸ್‌ನಿಂದ ಒಂದು ಸಾವಿರ ಸೈನಿಕ ರನ್ನು ಕರೆಸುವಂತೆ ತಮ್ಮ ಜನರಿಗೆ ಆದೇಶ ನೀಡುವುದು ಜನರಲ್ ಅವರಿಗೆ ಅನಿವಾರ್ಯವೆನಿಸುವಂತೆ ಮಾಡಬೇಕೆಂಬುದು ಅವರ ಇರಾದೆಯಾಗಿತ್ತು. ಸೈನಿಕರು ಹೆಡ್‌ಕ್ವಾರ್ಟರ್ಸ್‌ನ ಎದುರುಗಡೆ ಇರುವ ಮೈದಾನದಲ್ಲಿ ಸೇರಬೇಕೆಂಬುದು ಅವರ ಇಚ್ಛೆಯಾಗಿತ್ತು. ವಾಸ್ತವವಾಗಿ ಅವರು ಹೊರಗಡೆ ಬಾಲ್ಕನಿಯಲ್ಲಿ ನಿಂತು ದೇಶ ಭಕ್ತಿ ಕುರಿತು ಭಾಷಣ ಮಾಡಬೇಕೆಂದಿದ್ದರು. ಆದರೂ ಅವರ ಯೋಜನೆ ತಪ್ಪುತ್ತ ನಡೆದಿತ್ತು.

ಹನ್ನೊಂದೂ ಕಾಲರ ಸರಿಸುಮಾರಿಗೆ ಬಹಳಷ್ಟು ಜನರು ಮಶಿತಾರ ಕಛೇರಿಯ ಬಾಗಿಲನ್ನು ಬಡಿಯತೊಡಗಿದರು. "ಬಾಗಿಲು ತೆಗಿ" ಎಂದು ಅವರೆಲ್ಲ ಜೋರಾಗಿ ಕಿರುಚುತ್ತಾ ಇದ್ದರು.

ವಿದ್ಯಾರ್ಥಿಗಳಿಗೆ ತಮ್ಮ ಹಿಂದೆ ನಿಂತುಕೊಳ್ಳಲು ಹೇಳಿ ಸ್ವಯಂ ಮಿಶಿಮಾ ಅವರು ಬಾಗಿಲ ಕಡೆಗೆ ಧಾವಿಸಿದರು. ಕತ್ತಿ ಅವರ ಕೈಯಲ್ಲಿ ಹೇಗೂ ಇದ್ದೇ ಇತ್ತು. ಛಿಬೀ ಕೋಗಾ ಮಶಿತಾರ ಪಕ್ಕದಲ್ಲಿ ಚಾಕು ಹಿಡಿದು ನಿಂತೇ ಇದ್ದ. ಮಿಶಿಮಾ ಕೋಗಾನಿಗೆ ಜನರಲ್ ಮಶಿತಾರ ಪಕ್ಕ ಬಿಟ್ಟು ಸರಿಯಕೂಡದೆಂದು ಆದೇಶ ನೀಡಿ ಬಿಟ್ಟಿದ್ದರು.

ಮಿಲಿಟರಿ ಅಧಿಕಾರಿಗಳು ತಮ್ಮ ಮುಷ್ಟಿಗಳಿಂದ ಬಾಗಿಲನ್ನು ಒಂದೇ ಸಮನೆ ಕುಟ್ಟುತ್ತಲೇ ಇದ್ದರು. "ಬಾಗಿಲು ತೆಗೀರಿ. ಒಳಗಡೆ ಏನಾಗುತ್ತಾ ಇದೆ. ತೆಗೀರಿ ಬಾಗಿಲು"—ಎಂದು ಜೋರಾಗಿ ಕೂಗುತ್ತಿದ್ದರು.

ಒಬ್ಬ ಬಾಗಿಲಿನ ಹ್ಯಾಂಡಲ್ ಅನ್ನು ತಿರುಗಿಸಿ ಜೋರಾಗಿ ಒದ್ದ. ಮೊದಲೇ ದುರ್ಬಲವಾಗಿದ್ದ ಬಾಗಿಲು ಕೂಡಲೇ ಬಿದ್ದುಬಿಟ್ಟಿತು. ಮೂರು ಜನ ಕರ್ನಲ್‌ಗಳು ಮತ್ತು ಇಬ್ಬರು ಮಾಸ್ಟರ್ ಸಾರ್ಜೆಂಟ್‌ಗಳು–ಒಟ್ಟು ಐದು ಜನ ಒಳಕ್ಕೆ ನುಗ್ಗಿದರು. ಕರ್ನಲ್ ಹಾರಾ ಇವರ ನೇತೃತ್ವ ವಹಿಸಿದ್ದ.

ಮಿಶಿಮಾ ಅವರಿಗೆ ಅಡ್ಡವಾಗಿ ನಿಂತರು. "ಹೊರಕ್ಕೆ ನಡೀರಿ"—ಎಂದು ಜೋರಾಗಿ ಕಿರುಚಿದರು.

ಅವರೆಲ್ಲರೂ ಮಿಶಿಮಾರ ತೀರ ಸಮೀಪದಲ್ಲಿದ್ದರು. ಅವರನ್ನು ಎದುರಿಸಲು ಹಿಂದೆ ಮುಂದೆ ನೋಡುತ್ತಿದ್ದರು. ಯಾರ ಹತ್ತಿರವೂ ಏನೊಂದು ಆಯುಧವೂ ಇರಲಿಲ್ಲ. ಆದರೆ ಕರ್ನಲ್‌ನ ಹತ್ತಿರ ಮರದ ಒಂದು ಹಳೆಯ ಕತ್ತಿ ಇತ್ತು. ಅದನ್ನು ಅವನು ಹೊರಗೆ ಸೆಳೆದಿದ್ದ.

"ಹೊರಗೆ, ಹೊರಗೆ, ಹೊರಗೆ" ಎಂದು ಹೇಳುತ್ತಾ ಒಮ್ಮೆಲೇ ಮಿಶಿಮಾ ಅವರ ಮೇಲೆ ಆಕ್ರಮಣ ಮಾಡಿಬಿಟ್ಟರು. ಜೊತೆಗೆ ಅವರನ್ನು ಹೊಡೆಯ ತೊಡಗಿದರು.

ಒಬ್ಬ ಸಾರ್ಜೆಂಟ್ ಮುನ್ನುಗ್ಗಿ ಮಿಶಿಮಾರ ಮಣಿಕಟ್ಟಿನ ಮೇಲೆ ಹೊಡೆದ. ಆದರೆ, ಅಂಗೈ ಮಣಿಕಟ್ಟನ್ನು ಕಡಿದುಹಾಕಬೇಕೆಂಬ ಅವನ ಉದ್ದೇಶ ಸಫಲ ವಾಗಲಿಲ್ಲ.

ಮಿಶಿಮಾ ಮತ್ತೆ ಜೋರಾಗಿ ಕಿರುಚಿದರು—"ಹೊರಕ್ಕೆ ಹೊರಡಿ"—ಎಂದು. ಅವರು ತೀವ್ರವಾದ ಹಿಂಸ್ರನೋಟದಿಂದ ಅವರೆಲ್ಲರನ್ನು ನೋಡಿದರು.

ಅವರು ಇನ್ನೊಬ್ಬ ಕರ್ನಲ್‌ನ ಭುಜಗಳು ಮತ್ತು ಬೆನ್ನಿನ ಮೇಲೆ ಮೂರು ಸಲ ಆಕ್ರಮಣ ಮಾಡಿದರು. ಆದಾಗ್ಯೂ ಕರ್ನಲ್ ಹಾರಾ ತಮ್ಮ ಮರದ ಕತ್ತಿಯಿಂದ ಆ ಹೊಡೆತಗಳನ್ನು ತಡೆದರು.

ಗಾಯಗೊಳ್ಳದೆ ಉಳಿದಿದ್ದ ಇಬ್ಬರು ವ್ಯಕ್ತಿಗಳಿಗೆ ಕೊಠಡಿಯ ಹೊರಗಿದ್ದ ವ್ಯಕ್ತಿಗಳು ಸಹಾಯ ಮಾಡಿದರು. ಮಿಶಿಮಾರ ಕತ್ತಿಯಿಂದ ಏಟು ತಿಂದವರ ಗಾಯಗಳಿಂದ ಬಹಳಷ್ಟು ರಕ್ತ ಸುರಿಯುತ್ತಿತ್ತು.

ಎರಡನೇ ಮೀಟಿಂಗಿನ ಅನಂತರ ಜಾರಿಗೆ ಕೊಡಲಾದ ಸೂಚನೆಗಳಿಂದ ಎಲ್ಲ ಅಧಿಕಾರಿಗಳೂ ಉದ್ವೇಗಕ್ಕೆ ಒಳಗಾಗಿದ್ದರು ಹಾಗೂ ಏನು ಮಾಡಬೇಕೆಂದು ಸ್ಪಷ್ಟ ವಾಗಿ ಯೋಚಿಸಲಾರದಾಗಿದ್ದರು. ಇದ್ದಕ್ಕಿದ್ದಂತೆ ಬಂದೊದಗಿದ ಈ ಆಪತ್ತಿನಿಂದ ಪಾರಾಗುವುದು ಹೇಗೆ ಎಂಬ ಬಗ್ಗೆ ಅವರಾರಿಗೂ ಏನೂ ಹೊಳೆಯುತ್ತಿರಲಿಲ್ಲ. ಅವರಿಗೆ ಎಲ್ಲಕ್ಕಿಂತ ದೊಡ್ಡ ಚಿಂತೆ ಜನರಲ್ ಮಶಿತಾರ ಸುರಕ್ಷತೆಯದು. ಮಿಶಿಮಾ ಬಯಸುತ್ತಿದ್ದುದೇನು ? ಈ ಪ್ರಶ್ನೆಯ ಮಹತ್ವವನ್ನರಿಯಲು ಸಮರ್ಥನಾದದ್ದರಿಂದ ಜನರಲ್ ಯಾವಾಜಾಕಿ ಕೆಲವೊಂದು ಮೂರ್ಖ ಕೃತ್ಯಗಳಲ್ಲಿ ತೊಡಗಿದ. ಅವನು ಯಾವುದೇ ಯೋಜನೆ ಹಾಕದೆ ಏನೂ ವಿಧ್ವಂಸಕ ಕೃತ್ಯಕ್ಕೆ ತೊಡಗದೆ, ಆಯುಧವಿಲ್ಲದೆ ಬೇರೊಂದು ಪಾರ್ಟಿ ರಚಿಸುವ ಯೋಚನೆ ಮಾಡಿದ. ತನಗೆ ಸಹಾಯ ಮಾಡಲು ಅವನು ಆರು ಮಂದಿ ಅಧಿಕಾರಿಗಳನ್ನು ಆಯ್ಕೆ ಮಾಡಿದ.

ಅಧಿಕಾರಿಗಳು ಉಪ ಪ್ರಧಾನರ ಕಛೇರಿಯ ಕಡೆಯಿಂದ ಮಶಿತಾರ ಕೊಠಡಿಯ

ಬಾಗಿಲನ್ನು ಜಾಡಿಸಿ ಒದ್ದರು, ಯಾಮಾಜಾಕಿ ಎಲ್ಲ ಅಧಿಕಾರಿಗಳಿಗಿಂತ ಮುಂದೆ ಹೋಗಿ ಎಲ್ಲರಿಗಿಂತ ಮೊದಲು ಕೊಠಡಿಯನ್ನು ಪ್ರವೇಶಿಸಿದ.

ಕೂಡಲೇ ಅವನೆದುರು ಮಿಶಿಮಾ ಪ್ರತ್ಯಕ್ಷರಾಗಿ ನಿಂತರು. ಅವರ ಕೈಯಲ್ಲಿ ರಕ್ತಸಿಕ್ತ ಖಡ್ಗವಿತ್ತು. ಜನರಲ್ ಯಾಮಾಜಾಕಿ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡ. ಮಿಶಿಮಾರ ಹಿಂದೆ ಕುರ್ಚಿಗೆ ಕಟ್ಟಿಹಾಕಿದ್ದ ಅವನ ಕಮಾಂಡಿಂಗ್ ಆಫೀಸರ್ ಮಶಿತಾ ಇದ್ದರು. ಅವರ ಬಲಗಡೆ ಛಿಬೀ ಕೋಗಾ ಕೈಯಲ್ಲಿ ಚಾಕು ಹಿಡಿದು ನಿಂತಿದ್ದ.

ಮಿಶಿಮಾರ ಹತ್ತಿರ ಅವರ ಮೂವರು ವಿದ್ಯಾರ್ಥಿಗಳೂ ನಿಂತಿದ್ದರು. ಓಗಾವಾನ ಹತ್ತಿರ ಒಂದು ಕಪ್ಪನೆಯ ಲಾಠಿ ಇತ್ತು. ಅವನ ಹಿಂದೆ ಫುರೂ ಕೋಗಾ ಇದ್ದ. ಅವನ ಕೈಯಲ್ಲಿ ಆಷ್‌ಟ್ರೇ ಇತ್ತು. ಮಿಶಿಮಾರ ಹತ್ತಿರವೇ ಚಾಕೂ ಹಿಡಿದು ಮೋರಿನಾ ಕೂಡ ನಿಂತಿದ್ದ.

ಯಾಮಾಜಾಕಿ ಇಂಥ ಒಂದು ದೃಶ್ಯದ ಕಲ್ಪನೆ ಕೂಡ ಮಾಡಿರಲಿಲ್ಲ.

ಮಿಶಿಮಾ ಸಹ, ಯಾಮಾಜಾಕಿಯ ಹಿಂದೆ ಸುಮಾರು ಅರ್ಧ ಡಜನ್ ಜನ ನಿಂತಿರುವುದನ್ನು ನೋಡಿದರು. ಅವನ ಹಿಂದೆ ಇನ್ನೆಷ್ಟು ಜನರಿರಬಹುದೆಂದು ಅವರು ಯೋಚಿಸತೊಡಗಿದರು. ಅವರು ತಮ್ಮ ಕತ್ತಿಯ ಬಲದಿಂದ ಯಾಮಾಜಾಕಿ ಮತ್ತು ಅವನ ಸಂಗಡಿಗರನ್ನು ನಿರ್ವಾಹವಿಲ್ಲದೆ ಒಂದು ಮೂಲೆಯಲ್ಲಿ ಮುದುರಿಕೊಂಡು ಒಟ್ಟಾಗಿ ನಿಲ್ಲುವಂತೆ ಮಾಡಿದರು.

ಮಿಶಿಮಾ ಕೂಗಿ ಹೇಳಿದರು—"ಸರಿ. ಈಗಂತೂ ನೀವು ನೋಡೇ ಇದ್ದೀರಿ. ಬೇಕಾದರೆ ಇನ್ನೂ ಸರಿಯಾಗಿ ನೋಡಿ. ನೀವುಗಳು ತಕ್ಷಣ ಇಲ್ಲಿಂದ ತೊಲಗದೆ ಇದ್ದರೆ ನಾನು ಜನರಲ್‌ನನ್ನು ಕೊಂದುಬಿಡುತ್ತೇನೆ."

ಯಾಮಾಜಾಕಿ ಮಿಶಿಮಾರ ಹಿಂದೆ ಇದ್ದ ತನ್ನ ಕಮಾಂಡಿಂಗ್ ಆಫೀಸರ್ ಅವರನ್ನು ನೋಡಿದ. ಆತನಿಗೆ ನೆರವಿನ ಆವಶ್ಯಕತೆ ಇತ್ತು.

ಮಿಶಿಮಾ ಪುನಃ ಚೀರಿ ಹೇಳಿದರು—"ನಾನು ಮತ್ತೆ ಹೇಳುತ್ತಾ ಇದ್ದೀನಿ. ಇಲ್ಲಿಂದ ಹೊರಟುಹೋಗಿ."

ಯಾಮಾಜಾಕಿ ಸಹ ಜೋರಾಗಿ ಕಿರುಚಿ ಹೇಳಿದ—"ಈ ಮೂರ್ಖತನ ಬಂದ್ ಮಾಡಿ ತೆಪ್ಪಗಾಗು."

"ನಡೀರಿ ಆಚೆ"—ಮಿಶಿಮಾ ಇನ್ನೊಮ್ಮೆ ಜೋರಾಗಿ ಕೂಗಿ ಹೇಳಿದರು. ಅವರು ಕತ್ತಿಯ ಮೊನೆಯನ್ನು ಜನರಲ್ಲನ ಕುತ್ತಿಗೆಯ ಕಡೆಗೆ ಮಾಡಿಕೊಂಡು ಯಾಮಾ ಜಾಕಿಯ ಕಡೆಗೆ ನುಗ್ಗಿದರು.

ಯಾಮಾಜಾಕಿ ಹೇಳಿದ—"ಈ ಮೂರ್ಖತನ ನಿಲ್ಲಿಸು." ಮಿಶಿಮಾ ಕಿರುಚಿ ಹೇಳಿದರು—"ನೀನು ನನ್ನ ಮಾತಿಗೆ ಒಪ್ಪಲಿಲ್ಲ ಅಂದರೆ ನಾನು ನಿನ್ನ ಕಮಾಂಡಿಂಗ್ ಆಫೀಸರ್‌ನನ್ನು ಕೊಂದುಬಿಡುತ್ತೀನಿ."

ಸೇನೆಯ ಅಧಿಕಾರಿಗಳು ಮುಂದುವರಿಯುತ್ತಲೇ ಇದ್ದರು. ಮುಂದಿದ್ದ

ಮನುಷ್ಯ ಕುರ್ಚಿ ಮೇಜುಗಳ ಅಡೆತಡೆಗಳ ಮೇಲೆ ಹತ್ತಿಬಿಟ್ಟರು. ಹಿಂದಿದ್ದವರೂ ಹತ್ತುವ ತಯಾರಿಯಲ್ಲಿದ್ದರು. ಮತ್ತೆ ಅಲ್ಲಿಯೂ ದಡ ಬಡ ಸದ್ದು ಮತ್ತು ಮುರಿದ ಗಾಜಿನ ಪಳ್ ಪಳ್ ಎಂಬ ಶಬ್ದ. ಜನಗಳು ಮಾರೀತಾನ ಕಛೇರಿ ಮತ್ತು ಹೊರಗಿನ ವರಾಂಡಾದ ನಡುವಿನ ಕಿಟಕಿಯ ಪಾರದರ್ಶಕ ಗಾಜನ್ನು ಒಡೆದು ಒಳಗೆ ಇಣುಕಿ ನೋಡತೊಡಗಿದರು.

ಮಿಶಿಮಾ ಒಮ್ಮೆಲೇ ಹಿಂದೆ ತಿರುಗಿದರು. ಕತ್ತಿಯನ್ನು ಚಲಾಯಿಸಲು ಅವರಿಗೆ ಜಾಗ ಬೇಕಿತ್ತು.

ಯಾಮಾಜಾಕಿ ಮತ್ತೆ ಹೇಳಿದ—"ನಿನ್ನಿಷ್ಟ ಏನು ಅನ್ನುವುದು ನಮಗಂತೂ ಬಿಲ್‌ಕುಲ್ ಗೊತ್ತಾಗುತ್ತಿಲ್ಲ, ನನಗೆ ಹೇಳು." ಇದು ಸಂಧಾನದ ಮಾತಾಗಿತ್ತು.

ಅವರುಗಳು ಯಾವುದೋ ಹೊಸ ಸಂಚು ಹೂಡುತ್ತಾ ಇರಬಹುದೆಂದು ಮಿಶಿಮಾಗೆ ಶಂಕೆಯಾಗತೊಡಗಿತು. ಯಾಮಾಜಾಕಿ ಸೇರಿದಂತೆ ಏಳೂ ಜನ ಸೈನಿಕ ಅಧಿಕಾರಿಗಳು ಮುಂದುವರಿಯುತ್ತಲೇ ಇದ್ದರು. ಮಿಶಿಮಾನೊಂದಿಗೆ ಕೇವಲ ಮೂವರಿದ್ದರು, ಛಿಬೀ ಕೋಗಾ ಜನರಲ್ ಮಶಿತಾ ಹತ್ತಿರವೇ ಇರಬೇಕಾಗಿತ್ತು.

ಮಿಶಿಮಾ ಬೇಕಂತಲೇ ಯಾಮಾಜಾಕಿಯ ಕಡೆ ಸುಮ್ಮನೆ ಕತ್ತಿ ಚಲಾಯಿಸಿ ಹೇಳಿದರು—"ನಡೀರಿ ಆಚೆ."

ಯಾಮಾಜಾಕೆ ಮುಗ್ಗರಿಸಿದ. ಅವನ ಹಿಂದಿದ್ದ ಅಧಿಕಾರಿ ಅವನ ಸಹಾಯಕ್ಕೆ ಧಾವಿಸಿದ. ಉಳಿದವರೆಲ್ಲರೂ ಮುಂದಕ್ಕೆ ಹಾರಿದರು.

ಮುಂದಿದ್ದ ಮನುಷ್ಯ ಮೋರಿನಾನೊಂದಿಗೆ ಸೆಣಿರುತ್ತಿದ್ದ. ಅವನ ಕೈಯಿಂದ ಚಾಕು ಕಿತ್ತುಕೊಳ್ಳಲು ಪ್ರಯತ್ನಿಸಿದ.

ಮೂರು ಜನ ಒಟ್ಟಾಗಿ ಒಮ್ಮೆಗೇ ಮಿಶಿಮಾರ ಮೇಲೆ ಮುಗಿಬಿದ್ದರು. ಮಿಶಿಮಾ ತನ್ನ ನಾಲ್ಕೂ ಕಡೆ, ಎಡ ಬಲ, ಹಿಂದೆ ಮುಂದೆ ಕತ್ತಿಯನ್ನು ರಭಳಿಪಿಸುತ್ತಾ ಅವರುಗಳ ಕೈ, ಭುಜ ಮತ್ತು ಬೆನ್ನಿನ ಮೇಲೆ ಪ್ರಹಾರ ಮಾಡಿದರು. ಮೂರೂ ಜನ ಕರ್ನಲ್‌ಗಳ ದೇಹಗಳು ರಕ್ತಸಿಕ್ತವಾದುವು.

ಇತ್ತ ಮೋರಿನಾ ಕೈಯಿಂದ ಚಾಕು ಕಿತ್ತುಕೊಳ್ಳಲಾಯಿತು.

ಮಿಶಿಮಾ ಅಧಿಕಾರಿಗಳಿಗೆ ಚೀರಿ ಹೇಳಿದರು—"ಹೊರಗೆ ಹೋಗಿ." ಮತ್ತೆ ಕತ್ತಿಯನ್ನು ಜನರಲ್ ಮಶಿತಾರ ಕುತ್ತಿಗೆಯ ಸಮೀಪಕ್ಕೆ ಕೊಂಡೊಯ್ದು ಹೇಳಿದರು —"ಹೊರಗೆ ನಡೀರಿ. ಇಲ್ಲದಿದ್ದರೆ ನಾನು ಜನರಲ್‌ನನ್ನು ಸಾಯಿಸಿಬಿಡ್ತೀನಿ."

ಯಾಮಾಜಾಕಿ ಹಾಗೂ ಅವನ ಕಡೆಯವರಿಗೆ, ಮಿಶಿಮಾ ನಿಜಕ್ಕೂ ಜನರಲ್‌ನನ್ನು ಕೊಂದ:ಬಿಡುತ್ತಾನೋ ಅಥವಾ ಬರೀ ಬೆದರಿಕೆ ಹಾಕುತ್ತಿದ್ದಾನೋ ಗೊತ್ತಾಗಲಿಲ್ಲ.

"ಹೊರಗೆ ನಡೀರಿ"—ಎಂದು ಮತ್ತೆ ಕಿರುಚುತ್ತಾ ತುಂಬಾ ಹತ್ತಿರಕ್ಕೆ ಬಂದರು. ಒಬ್ಬ ಕರ್ನಲ್‌ನತ್ತ ಕತ್ತಿಯನ್ನು ಚಲಾಯಿಸಿ ಅವನ ಕೈಗೆ ಏಟು

ಹೊಡೆದರು....ಮಿಲಿಟರಿ ಜನಗಳೆಲ್ಲಾ ಈ ಮಿಶಿಮಾನಿಗೆ ಬೇಕಾಗಿರುವುದಾದರೂ ಏನು ಎಂದು ವಿಸ್ಮಿತರಾದರು.

ಮಿಶಿಮಾ ಅವರುಗಳಿಗೆ ಹೆಚ್ಚು ಯೋಚಿಸಲು ಅವಕಾಶ ಕೊಡಲಿಲ್ಲ. ಕತ್ತಿಯಿಂದ ಅವರನ್ನು ಚುಚ್ಚಿ ಚುಚ್ಚಿ ಕಛೇರಿಯಿಂದ ಓಡಿಸಿಬಿಟ್ಟರು.

ಏಳೂ ಜನ ಹೊರಹೋಗುತ್ತಲೇ ಅವರ ಹಿಂದೆಯೇ ಬಾಗಿಲು ಮುಚ್ಚಿಕೊಂಡಿತು. ಎಲ್ಲರೂ ಉಪ-ಪ್ರಧಾನನ ಸ್ಟಾಫ್‌ರೂಮ್‌ಗೆ ಹೊರಟು ಹೋದರು.

ಮಿಶಿಮಾನ ಕಡೆಯವರು ಕುರ್ಚಿ ಮೇಜುಗಳನ್ನು ಅತ್ತ ಇತ್ತ ಸರಿಸುವ ಸದ್ದು ಅವರಿಗೆ ಕೇಳಿಸಿತು.

ಯಾಮಾಜಾಕಿಗೆ ಅಂಥ ಗಂಭೀರ ಸ್ವರೂಪದ ಗಾಯವೇನೂ ಆಗದೆ ಇದ್ದರೂ ಅವನು ಈಗಲೋ ಆಗಲೋ ಎಚ್ಚರ ತಪ್ಪಬಹುದೆಂದು ತೋರಿತು. ವೈಸ್ ಕರ್ನಲ್ ಯೋಶೀ ಮಾಸ್ತು ಸೈನ್ಯದ ಕಮಾಂಡ್ ಅನ್ನು ತನ್ನ ಕೈಗೆ ತೆಗೆದುಕೊಂಡರು. ಅವರು ಮತ್ತೆ ಮೇಲಿನವರಿಂದ ಸೂಚನೆ ಪಡೆದು ಅಧಿಕಾರಿಗಳೊಂದಿಗೆ ಮಾತುಕತೆ ನಡೆಸಿದರು.

ಈ ಮಧ್ಯೆ ಕಮಾಂಡಿಂಗ್ ಜನರಲ್‌ನ ಕಛೇರಿಯ ವರಾಂಡಾದ ಹೊರಗಡೆಯಿಂದ ಒಳಗೆ ನಡೆಯುತ್ತಿದ್ದ ವಿದ್ಯಮಾನಗಳನ್ನು ನೋಡಿ ಕರ್ನಲ್ ಈ ಕಡೆ ಹೊರಳಿದರು.

ಮುರಿದ ಕಿಟಕಿಯಿಂದ ಮಿಶಿಮಾರತ್ತ ನೋಡುತ್ತ ಕರ್ನಲ್ ಕೂಗಿ ಹೇಳಿದರು —"ನಿನ್ನ ಬೇಡಿಕೆ ಏನು."

ಯಾವುದೇ ಸಣ್ಣಪುಟ್ಟ ಸಾರ್ವಜನಿಕ ಕೆಲಸವೂ
ನಿರರ್ಥಕವಾಗುವುದಿಲ್ಲ.

# ಗಾರ್ಕಿ ವಿಚಾರಧಾರೆ

ಅನು : ಡಾ|| ತಿಪ್ಪೇಸ್ವಾಮಿ

ಈಗ ನಾನು ವರ್ಣಿಸಬಯಸುವ ವಿಷಯ ಈಗ್ಗೆ ಮೂವತ್ತು ವರ್ಷಗಳಷ್ಟು ಹಿಂದಿನದಾದ್ದರಿಂದ ಅದೆಲ್ಲವೂ ಈಗ ನಾನು ವರ್ಣಿಸುವಂತೆ ನಡೆಯದೇ ಇದ್ದಿರಲೂ ಬಹುದು.

ನಾನು ನನ್ನ ಬಾಲ್ಯಾವಸ್ಥೆಯಿಂದಲೂ ನೋಡುತ್ತಾ ಬಂದಿದ್ದೇನೆ-ನೀಜ್ನಿ ನೊವ ಗೊರೋದ್‌ನಲ್ಲಿ 'ದಡ್ಡರ', 'ತಲೆ ತಿರುಗಿದವರ' ಹಾಗೂ 'ದಿವ್ಯ ಮೂರ್ಖ'ರಿಗೇನೂ ಕೊರತೆಯಿರಲಿಲ್ಲ. 'ಸಾಮಾನ್ಯ' ಜನರು ಅಂದರೆ ಮಧ್ಯಮ ವರ್ಗದ ಜನ ಈ 'ಅಸಾಮಾನ್ಯ' ಜನರ ಬಗೆಗೆ ಎರಡು ಬಗೆಯ ಅಭಿಪ್ರಾಯಗಳನ್ನು ಹೊಂದಿರುತ್ತಿದ್ದರು. ಇವರು ಈ 'ತಲೆ ತಿರುಗಿದವರ'ನ್ನು ಕುರಿತಂತೆ ತಮಾಷೆ ಮಾಡುತ್ತಿದ್ದರಾದರೂ ಅವರ ಬಗೆಗೆ ಕೊಂಚ ಆದರ ಭಾವನೆಯನ್ನೂ ಇಟ್ಟುಕೊಂಡಿದ್ದರು. ಇವರ ಈ ಹುಚ್ಚುತನದಲ್ಲೂ ಯಾವುದಾದರೊಂದು ವಿಶೇಷ ಬುದ್ಧಿವಂತಿಕೆ ಅಡಗಿದೆ, ಇದರಿಂದ 'ಸಾಮಾನ್ಯ' ಜನರ ವಿವೇಕ ವಂಚಿತವಾಗಬಹುದೆಂಬ ಅನುಮಾನ ಇವರಲ್ಲಿತ್ತು. ಈ ಅನುಮಾನ ಯೋಗ್ಯವಾದದ್ದೇ ಆಗಿತ್ತು.

ಹದಿನಾಲ್ಕನೆಯ ವಯಸ್ಸಿನಲ್ಲಿ ಮೂಜಾ ಮೂಶ್ಚಿನಾಳನ್ನು 'ದಡ್ಡ'ಳೆಂದೇ ಭಾವಿಸಲಾಗಿತ್ತು. ಅನಂತರದ ಎರಡು ಅಥವಾ ಮೂರು ವರ್ಷಗಳ ನಂತರ ಮಧ್ಯಮ ಶ್ರೇಣಿಯ ಎಲ್ಲ ನಾಗರಿಕರು 'ದಿವ್ಯದೃಷ್ಟಾರ'ಳ ರೂಪದಲ್ಲಿ ಅವಳನ್ನು ಗೌರವಿಸಲಾರಂಭಿಸಿದರು – ಅವಳಲ್ಲಿ ಭವಿಷ್ಯವಾಣಿ ಹೇಳುವ ಸಾಮರ್ಥ್ಯವಿತ್ತು ಎಂಬ ಕಾರಣಕ್ಕಾಗಿ, ಕಾಲು ನಡಿಗೆಯಲ್ಲಿ ಅಥವಾ ವಾಹನಗಳಲ್ಲಿ ನೂರಾರು ಜನ ಗ್ರೇಬೆ–ಶೋಕ್‌ನಲ್ಲಿದ್ದ ಅವಳ ಚಿಕ್ಕ ಮನೆಗೆ ಬರುತ್ತಿದ್ದರು. ಅಲ್ಲಿ ಆಕೆ ಸಣ್ಣ ರಾಗದಲ್ಲಿ ಏನೇನೋ ಮಂತ್ರ–ಜಾದು, ಅದು-ಇದು ಅಂತ ಗೊಣಗುತ್ತಿದ್ದಳು. ತಾನು ಇಷ್ಟು ಮಾಡಿದ್ದಕ್ಕಾಗಿ ಆಕೆ ಇಪ್ಪತ್ತೈದು ಕೋಸೆಕ್‌ಗಳನ್ನು ವಸೂಲಿ ಮಾಡುತ್ತಿದ್ದಳು.

ಆಕೆ ಇಪ್ಪತ್ತೊಂದು ವರ್ಷದವಳಾದ ಕೂಡಲೆ ತನ್ನ ತಾಯಿ ಕಡೆಯಿಂದ ಬರಬಹುದಾದ ಆಸ್ತಿಯನ್ನು ಕಬಳಿಸಿಕೊಂಡು ಅದರ ನಾಶಮಾಡಲು ತನ್ನ ಮಾವ ಮತ್ತು ತನ್ನನ್ನು ನೋಡಿಕೊಳ್ಳುತ್ತಿದ್ದವರ ವಿರುದ್ಧವೇ ಮೊಕದ್ದಮೆಯನ್ನು ಹಾಕಿ

ಇಡೀ ನಗರವನ್ನೇ ಆಶ್ಚರ್ಯಗೊಳ್ಳುವಂತೆ ಮಾಡಿದಳು. ಮೂಜಾ ತನ್ನ ಅಲೌಕಿಕ ಸೇವೆಗೆಂದು ತೆಗೆದುಕೊಳ್ಳುತ್ತಿದ್ದ ಇಪ್ಪತ್ತೈದು ಕೋಸೆಕ್‌ಗಳ ಫೀಸನ್ನು ಹಾಗೆಯೇ ಉಳಿಸಿಟ್ಟುಕೊಳ್ಳುತ್ತಿದ್ದಳು ಮತ್ತು 'ಕಾನೂನು ವಿಷಯಗಳನ್ನು ಕುರಿತಂತೆ ಓರ್ವ ಸ್ವತಂತ್ರ ಸಲಹೆಗಾರ'ನ ನೆರವಿನಿಂದ ಆಕೆ ಯಾವುದೇ ಸದ್ದು–ಗದ್ದಲವಿಲ್ಲದೆ ತುಂಬ ಬುದ್ಧಿವಂತಿಕೆಯಿಂದ ತನ್ನ ಮಾವನ ವಿರುದ್ಧ ಸಾಕ್ಷ್ಯಗಳನ್ನು ಒಗ್ಗೂಡಿಸುತ್ತಿದ್ದಳು. ಈ ಸಾಕ್ಷ್ಯಗಳು ಎಷ್ಟು ಪ್ರಬಲವಾಗಿದ್ದವೆಂದರೆ ಮಾವನಿಗೆ ಜೈಲು ಸಜೆಯಾಯಿತು.

ನಗರದಲ್ಲಿ ಇನ್ನೂ ಅನೇಕ 'ದಡ್ಡ'ರಿದ್ದರು. ಸುಯೋಗವೆಂಬಂತೆ ಇವರೆಲ್ಲ ಉಳ್ಳ ಕುಟುಂಬಗಳಿಂದ ಅಥವಾ ಶ್ರೀಮಂತ ಮನೆತನಗಳಿಂದ ಬಂದವರೇ ಆಗಿದ್ದ ಹುಡುಗರಾಗಿದ್ದರು. ಈ ಕಡೆ ನನ್ನ ಗಮನ ವಿಶೇಷವಾಗಿ ಹರಿದಿತ್ತು. ಮೀಶಾ ತ್ಯುಲೆನೇವ್ ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿದ್ದ.

ಯಾರಾದರೂ ಹೆಂಗಸು ತನ್ನ ಕಡೆ ಬರುತ್ತಿರುವುದನ್ನು ಒಂದು ವೇಳೆ ಆತ ನೋಡಿದನೆಂದರೆ, ಸರಿ. ಕೈಗೆ ಕಲ್ಲುಗಳನ್ನು ತೆಗೆದುಕೊಂಡು ಆಕೆಯನ್ನು ಹೆದರಿಸು ತ್ತಿದ್ದ, ಗದರಿಸುತ್ತಿದ್ದ ಮತ್ತು ಬಾಯಿಂದ ವಿಚಿತ್ರ ಬಗೆಯ ಸದ್ದು ಮಾಡಿ ಗಾಬರಿ ಹುಟ್ಟಿಸುತ್ತಿದ್ದ. ಅವನನ್ನು ನೋಡುವುದೆಂದರೆ ಅಸಹ್ಯವಾಗುತ್ತಿತ್ತು. ಸಾಮಾನ್ಯ ಜನ ಅವನನ್ನು ಸಹಿಸಿಕೊಳ್ಳುತ್ತಿರಲಿಲ್ಲ. ಒಂದು ವೇಳೆ ಹಗಲಿನಲ್ಲಿ ಅವನು ನಗರದ ವಿಶಾಲವಾದ ರಸ್ತೆಗೆ ಬಂದನೆಂದರೆ ಪೋಲೀಸರು ಅವನನ್ನು ನಾಯಿಯನ್ನು ಅಟ್ಟು ವಂತೆ ಅಟ್ಟಿ ಬಿಡುತ್ತಿದ್ದರು.

ತ್ಯುಲೆನೇವ್ ಮತ್ತು ಅವನಂಥ ಇತರೆ 'ತಲೆ ತಿರುಗಿದವರು' ಹುಟ್ಟಿನಿಂದಲೇ ಆ ರೀತಿ ಇದ್ದವರಲ್ಲ ಎಂದು ಎಲ್ಲರೂ ಹೇಳುತ್ತಿದ್ದರು. ಆದರೆ ನಾನು ಬಹಳ ಮಂದಿ ಹಿರಿಯರನ್ನು ಈ ಬಗೆಗೆ ವಿಚಾರಿಸಿದರೂ ಅವರ ಮಾನಸಿಕ ರೋಗಕ್ಕೆ ಏನು ಕಾರಣ ಎಂಬುದು ನನಗೆ ಎಂದೂ ಗೊತ್ತಾಗಲಿಲ್ಲ.

ನನಗೆ 'ಸಾಮಾನ್ಯ' ಜನರಿಗಿಂತ! ಈ ಮೂರ್ಖರ ಬಗೆಗೇ ಹೆಚ್ಚು ಆಸಕ್ತಿ ಯಿತ್ತು. ಇದು ಸ್ವಾಭಾವಿಕವೂ ಹೌದು, ಏಕೆಂದರೆ ಸಾಮಾನ್ಯ ಜನ ಉಣ್ಣುವುದು, ತಿನ್ನುವುದರಲ್ಲಿ, ಮಕ್ಕಳನ್ನು ಹುಟ್ಟಿಸುವುದರಲ್ಲಿ, ಹೀಗೆ ಲೌಕಿಕ ವ್ಯವಹಾರದಲ್ಲಿಯೇ ತಮ್ಮ ಇಡೀ ಬದುಕನ್ನು ವ್ಯಯಿಸಿಬಿಡುತ್ತಾರೆ.

ಹೀಗಾಗಿ ನನ್ನ ಯುವ ಮನಸ್ಸಿನ ಮೇಲೆ ಪ್ರಭಾವ ಬೀರಿದ ಒಂದೇ ವರ್ಗದ ಜನರ, ದಡ್ಡರ, ದಿವ್ಯ ಮೂರ್ಖರ ಮತ್ತು ಸಾಮಾನ್ಯವಾಗಿ ಹುಚ್ಚರೆಂದು ನಾವು ಹೇಳುವಂಥವರ ಉಲ್ಲೇಖನವನ್ನು ಇಲ್ಲಿ ಮಾಡಿದ್ದೇನೆ. ಅಂದ ಹಾಗೆ ಈ ವರ್ಗದ ಜನರಂತೆಯೇ, ಈ ವರ್ಗದ ಜನರಿಗಿಂತಲೂ ತೀರಾ ಭಿನ್ನವಾದ ವರ್ಗದ ಪ್ರಭಾವವೂ ನನ್ನ ಮೇಲಾಗಿದೆ.

ನೀಜ್ನಿ ನೋವಗೋರೋದ್ ವ್ಯಾಪಾರಿಗಳ ನಗರ. ಈ ನಗರದ ಬಗೆಗೆ

'ಇಲ್ಲಿಯ ಮನೆಗಳು ಕಲ್ಲಿನಿಂದ ಆಗಿದ್ದರೆ, ಜನರು ಕಬ್ಬಿಣದಿಂದ ಮಾಡಲ್ಪಟ್ಟಿದ್ದಾರೆ' ಎಂಬ ಗಾದೆಯೇ ರೂಢಿಯಲ್ಲಿತ್ತು.

ಕೆಳಮಟ್ಟದ ಕೂಪ ಮಂಡೂಕದಂಥ ಬದುಕಿನ ನೀರಸ ಹಿನ್ನೆಲೆಯಲ್ಲಿ ಸಾಮಾನ್ಯರೆಂದು ತೋರುತ್ತಿದ್ದ ಈ ಕಬ್ಬಿಣದಂಥ ಗಟ್ಟಿ ಮನುಷ್ಯರೇ ನನಗೆ 'ಅಸಾಮಾನ್ಯ'ರೆಂದು ಅನ್ನಿಸುತ್ತಿತ್ತು. ವಾಸ್ತವವಾಗಿ ಅವರು ಹಾಗೆ ಇದ್ದರೂ ಕೂಡ. ಗೋರ್ದೆಯಿ ಚೆನೋಂವ್‌ನ ಕತೆ ನನಗೆ ವಿಶೇಷವಾಗಿ ಉಲ್ಲೇಖನೀಯ ಎಂದನ್ನಿಸಿತು.

ಚೆನೋಂವ್ ಯಾವುದೇ ಕೆಲಸಕ್ಕೆ ಕೈ ಹಾಕಿದರೂ ಅವನಿಗೆ ಅದರಲ್ಲಿಯೇ ಯಶಸ್ಸು ಸಿಕ್ಕಿಬಿಡುತ್ತಿತ್ತು. ಯಾವುದೇ ಅಡಚಣೆಗಳು ಮುಂದೆ ಬಂದರೂ ಅವನು ಸ್ವತಃ ತಂದುಕೊಂಡಿರುತ್ತಿದ್ದ. ಅವನು ಒಂದು ಸಾರಿ ಒಂದು ದೊಡ್ಡ ಹಡಗನ್ನು ಮಾಡಿದ. ಇದರಲ್ಲಿ ಹೇರಳವಾಗಿ ಸಾಮಾನುಗಳನ್ನು ತುಂಬಬಹುದಿತ್ತು. ನೀರು ಪ್ರವಾಹದ ಮಟ್ಟಕ್ಕೆ ಬಂದರೂ ಈ ಹಡಗು ಅದರಲ್ಲಿ ಹೋಗಲು ಸಾಧ್ಯವಿಲ್ಲ ಎಂದು ಜನ ಹೇಳಿದರು.

'ಹೋಗೇ ಹೋಗುತ್ತೆ. ಯಾಕೆ ಹೋಗುವುದಿಲ್ಲ? ನಾನು ಇದನ್ನು ಎಳೆದುಕೊಂಡು ಹೋಗುತ್ತೇನೆ' ಎಂದು ಉತ್ತರಿಸಿದ್ದ. ಅವನು ತಪ್ಪು ಮಾಡಿದ. ಆ ಹಡಗನ್ನು ಎಂದಿಗೂ ಎಳೆದುಕೊಂಡು ಹೋಗಲು ಸಾಧ್ಯವಾಗಲೇ ಇಲ್ಲ.

ಆದರೆ ಮುಂದೆ ಎಂಥ ದಿನ ಬಂತೆಂದರೆ—ಆ ಮನುಷ್ಯ ತನ್ನೆಲ್ಲ ವ್ಯವಹಾರಗಳಲ್ಲಿ ಎಷ್ಟು ಯಶಸ್ವಿಯಾದನೆಂದರೆ, ಅದನ್ನು ಹೇಳಲೂ ಬರುವುದಿಲ್ಲ. ಅವನು ಬಲಶಾಲಿಯೂ, ಸುಂದರನೂ ಆಗಿದ್ದ, ರಸಿಕನೂ ಆಗಿದ್ದ. ತನ್ನೆಲ್ಲ ವ್ಯವಹಾರಗಳನ್ನು ಬಿಟ್ಟು ತನ್ನ ಮಗ ಮತ್ತು ಮಗಳಿಗೆ ಒಂದು ಮಾತನ್ನೂ ಹೇಳದೆ ನಾಪತ್ತೆಯಾಗಿಬಿಟ್ಟ.

1896ರಲ್ಲಿ ನೀಜ್ನಿ ನೋವಗೋರೋದ್‌ನಲ್ಲಿ ನಡೆದ ಅಖಿಲ ರಷ್ಯ ಪ್ರದರ್ಶನದ ಸಮಯದಲ್ಲಿ ಗೋರ್ದೇ ಈ ಚೆನೋಂವ್ ಮತ್ತೆ ಪ್ರತ್ಯಕ್ಷನಾದ, ಆತ ಕ್ರೈಸ್ತ ಭಿಕ್ಷುಕವಾಗಿದ್ದ ಮತ್ತು ಹಳೆಯ ಎಥನ್ ಮಠದಿಂದ ತನ್ನ ಊರಿನ ಉತ್ಸವವನ್ನು ನೋಡಲು ಬಂದಿದ್ದ. ಪ್ರದರ್ಶನೋತ್ಸವನ್ನು ಮನಸಾರೆ ನೋಡಿದ, ತನ್ನ ಹಳೆಯ ಮಿತ್ರರೊಂದಿಗೆ ಸೇರಿಕೊಂಡು ಮನಸಾರೆ ಪುನಃ ಪುನಃ ಮದ್ಯವನ್ನು ಕುಡಿದ. ನಂತರ ತನ್ನ ಕ್ರೈಸ್ತ ಮಠಕ್ಕೆ ಮರಳಿದ. ಅಲ್ಲಿ ಆತ 1900ರಲ್ಲಿ ಮರಣಹೊಂದಿದ.

ಮಾರಿಯಾ ಕಪಿತೋನೋವನಾ ಕಾಶಿನಾವೋಲ್ಲಾ ಹಡಗು ಕಂಪನಿಯ ಒಡತಿ ಮತ್ತು ತುಂಬ ಚುರುಕಾದ ಹೆಂಗಸು. ಚಹಾ ಕುಡಿಯುವಾಗ ಆಕೆ ದಾರ್ಶನಿಕಳಂತೆ ಹೇಳುತ್ತಿದ್ದುದೇನೆಂದರೆ—'ನಾನು ರಾಶಿಗಟ್ಟಲೆ ಹಣವನ್ನು ಸಂಪಾದಿಸಿದ್ದೇನೆ. ನಾನು ಬದುಕಿನಲ್ಲಿ ಬಹಳಷ್ಟನ್ನು ಕಟ್ಟಿದ್ದೇನೆ. ಆದರೆ ಈ ಬದುಕೋ! ತುಂಬ ಬೇಸರ ತರಿಸುವಂಥಾದ್ದು. ನಾನು ಇದನ್ನು ಕಾಡು ಮನುಷ್ಯರಂತೆ ಇದರ ಮೊದಲ ರೂಪ

ದಿಂದಲೇ ಶುರು ಮಾಡುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಆಗ ಬಹುಶಃ ಇನ್ನೊಂದು ರೂಪವೇ ಹೊರಬರುತ್ತಿತ್ತೇನೋ.

ವಾಸ್ತವಿಕವಾಗಿ ಬದುಕಿನ ಬಗೆಗೆ ಈ ಬಗೆಯ ನಕಾರಾತ್ಮಕ ದೃಷ್ಟಿಕೋಣದ ಮಾತುಗಳು ಇನ್ನೂ ಎಷ್ಟೋ ಸಾರಿ ನನ್ನ ಕಿವಿಗೆ ಬಿದ್ದಿದ್ದುವು. ಕಬ್ಬಿಣದಂಥ ಗಟ್ಟಿ ಮುಟ್ಟಾದ ತಾಯಂದಿರು ಮತ್ತು ತಂದೆಗಳು ಈ ಬಗೆಯ ಮಾತುಗಳನ್ನು ಆಡುತ್ತಿದ್ದ ರಾದರೂ, ಅವರಲ್ಲಿ ಬಹಳಷ್ಟು ಮಂದಿ ತುಂಬ ಆಸಕ್ತಿಯಿಂದ 'ಸಾಮಾನ್ಯ' ಸಭ್ಯ ಜನರ ಬದುಕನ್ನೇ ಬದುಕುತ್ತಿದ್ದರು. ನಗರದ ಸರಿ–ಸುಮಾರು ಎಲ್ಲ ಪ್ರಮುಖ ವ್ಯಾಪಾರಿ ಕುಟುಂಬಗಳ ಸದಸ್ಯರು ಎಂಥ ಬಗೆಯ ಬದುಕನ್ನು ಬದುಕುತ್ತಿದ್ದಾರೆ ಎಂಬುದರ ಬಗ್ಗೆ ನನಗೆ ಒಳ್ಳೆಯ ತಿಳುವಳಿಕೆಯೇ ಇತ್ತು. ಇದರ ಜೊತೆಗೆ ಇಂಥ 'ಸಾಮಾನ್ಯ' ಸಭ್ಯ ಜೀವನದ ಬದುಕಿನಿಂದ ಪಲಾಯನ ಮಾಡಿರುವ ವ್ಯಕ್ತಿ ಚೆನೋಂವ್ ಒಬ್ಬನೇ ಅಲ್ಲ, ಇನ್ನೂ ಬಹಳ ಮಂದಿ ಹೀಗೆಯೇ ಮಾಡಿದ್ದಾರೆ. ಇವರು ಅನೇಕ ದಶಕಗಳಿಂದ ರೂಢಿಯಲ್ಲಿದ್ದ ಜೀವನ ಪದ್ಧತಿಯಿಂದ ವಿಮುಖರಾಗಿದ್ದಾರೆ ಎಂಬ ವಿಷಯವೂ ನನಗೆ ಗೊತ್ತಿತ್ತು.

ನಾನು ಇಪ್ಪತ್ತು ಅಥವಾ ಇಪ್ಪತ್ತೆರಡು ವರ್ಷದವನಾದಾಗ ಜನರನ್ನು ನೋಡಿದ ಬಗೆ ಈ ಕೆಳಕಂಡಂತಿತ್ತು–ಬಹಳಷ್ಟು ಮಂದಿ ಕೂಪ ಮಂಡೂಕಗಳು, ಪಾಪ, ಇವರು 'ಸಾಮಾನ್ಯ' ಗುಂಪಿನಲ್ಲಿ ಬರುತ್ತಾರೆ. ಇವರ ಮಧ್ಯದಿಂದಲೇ ಕಬ್ಬಿಣ ದಂಥ ಗಟ್ಟಿ ಮನುಷ್ಯರು ಮೂಡಿಬರುತ್ತಾರೆ. ಇವರೇ ನಗರಪಾಲಿಕೆ ಅಥವಾ ಚರ್ಚುಗಳ ಉಸ್ತುವಾರಿಗಳಾಗುತ್ತಾರೆ. ಇವರು ತಮ್ಮ ವಾಹನಗಳಲ್ಲಿ ಕುಳಿತು ಚರ್ಚ್‌ಗಳ ಉತ್ಸವ–ಸಮಾರಂಭಗಳಲ್ಲಿ ಪಾದ್ರಿಗಳ ಹಿಂದೆ–ಹಿಂದೆ ಹೋಗುತ್ತಾರೆ. ಯಾವಾಗಲಾದರೂ ಒಮ್ಮೆ ಯಾವನಾದರೂ ಒಬ್ಬ 'ಕಬ್ಬಿಣದ ಮನುಷ್ಯ' ಈ ಸಾಮಾನ್ಯ ಬದುಕಿನ ಬಂಧನವನ್ನು ಭೇದಿಸಿಕೊಂಡು ಹೊರಬರುತ್ತಾನೆ.

ಒಂಬತ್ತರ ದಶಕದ ಅಂತ್ಯದಲ್ಲಿ ಮತ್ತು ಹತ್ತನೆಯ ದಶಕದ ಆರಂಭದಲ್ಲಿ ಈ ಕಬ್ಬಿಣದಂಥ ಗಟ್ಟಿ ಮನುಷ್ಯರ ಪೀಳಿಗೆ ಬದುಕಿನಿಂದ ಶೀಘ್ರಾತಿಶೀಘ್ರವಾಗಿ ಬಿಡು ಗಡೆ ಹೊಂದಲು ತನ್ನ ಒಲವನ್ನು ತೋರಿಸಲಾರಂಭಿಸಿತು. ಕಜೌನ್‌ನ ಒಬ್ಬ ವಿದ್ಯಾರ್ಥಿ ಮದ್ವೇದೇವ್ ತಾನು ಆತ್ಮಹತ್ಯೆ ಮಾಡಿಕೊಳ್ಳುವ ಮೊದಲು ಬರೆದ ಪತ್ರ ದಿಂದ ಕೆಲವು ಮಾತುಗಳತ್ತು ಉದ್ಧರಿಸುತ್ತಿದ್ದೇನೆ—1988ರಲ್ಲಿ ಕಜೌನ್‌ನಲ್ಲಿ ಆತ್ಮ ಹತ್ಯೆ ಮಾಡಿಕೊಂಡ ಒಟ್ಟು ಹನ್ನೊಂದು ಮಂದಿ ವಿದ್ಯಾರ್ಥಿಗಳಲ್ಲಿ ಇಬ್ಬರು ವಿದ್ಯಾ ರ್ಥಿನಿಯರೂ ಇದ್ದರು ಎಂದು ನನ್ನ ಅನಿಸಿಕೆ. ಇದಾದ ನಂತರ ನೀಜ್ನಿ ನೋವ್ ಗೋರೋದ್‌ನ ಶ್ರೀಮಂತ ಮಿಲ್ ಮಾಲೀಕನ ಮಗ ಈತನೂ ವಿದ್ಯಾರ್ಥಿಯೇ-ತನ್ನ ಮೇಲೆ ತಾನೇ ಗುಂಡು ಹಾರಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡ. ಹೀಗೆ ಇನ್ನೂ ಎಷ್ಟೋ ಆತ್ಮಹತ್ಯೆಗಳಾದುವು.

ವಾಸ್ತವವಾಗಿ ನಾನು ವ್ಯಾಪಾರಿ ವರ್ಗದ ಅನೇಕ ಯುವಕರನ್ನು ಭೇಟಿಯಾದೆ. ಇವರು ಅನೇಕ ವಿದೇಶಿ ಭಾಷೆಗಳ ಮೇಲೆ ಹೊಂದಿದ್ದ ಪ್ರಭುತ್ವ ಹಾಗೂ ಯುರೋಪಿನ ಸಾಹಿತ್ಯವನ್ನು ಅದರ ಮೂಲದಲ್ಲೇ ಓದುವುದರಲ್ಲಿ ಇವರಿಗಿದ್ದ ಸಾಮರ್ಥ್ಯವನ್ನು ನೋಡಿ ನನಗೆ ಒಂದು ಬಗೆಯ ಹೊಟ್ಟೆ ಕಿಚ್ಚಾಯಿತು. ಇಷ್ಟರ ಹೊರತಾಗಿ ಇವರಲ್ಲಿ ಅಂಥಾ ವಿಶೇಷವಾದುದೇನೂ ಇರಲಿಲ್ಲ. ಪರಿಷ್ಕೃತವಾದ ಭಾಷೆಯನ್ನು ಅಸ್ಪಷ್ಟವಾಗಿ ಮಾತನಾಡುತ್ತಿದ್ದರು. ಅವರು ಉಪಯೋಗಿಸುತ್ತಿದ್ದ ಶಬ್ದಗಳು ಅರ್ಥಪೂರ್ಣವಾಗಿ ಯೇನೋ ಇರುತ್ತಿದ್ದುವು. ಆದರೆ ಅವುಗಳ ಆಳದಲ್ಲಿ ಹತ್ತಿಚೂರು ಮತ್ತು ಕಡ್ಡಿ-ಕಸ. ರೂಕಾವೀಶ್ನಿಕೋವ್‌ನಂತೆ ಈ ಜನರು ಮದ್ಯ ಸೇವಿಸಿಯೇ ಅದರ ಬೆಳಕಿನಲ್ಲಿ ಬದುಕನ್ನು ನೋಡಬಲ್ಲವರಾಗಿದ್ದರು.- ಪೊ.ಪೊ. ಬೋದಲೇರ್ ಮತ್ತು ದೋಸ್ತೊಯೆಸ್ಕಿಯವರ ಕೃತಿಗಳಲ್ಲಿನ 'ಭಯಾನಕ ಸ್ಥಳ'ಗಳನ್ನೂ ಚರ್ಚಿಸುತ್ತಿದ್ದರು. ಹೀಗೆ ಚರ್ಚಿಸುವುದರ ಮೂಲಕ ತಾವು ತಮ್ಮ ಒಳಗಿನ ಭಯಂಕರವಾದುದನ್ನು ಚರ್ಚಿಸುತ್ತಿದ್ದೇವೆ ಎಂದು ಭಾವಿಸುತ್ತಿದ್ದರು.

ಯಾವನಾದರೂ ಒಬ್ಬ ನವಯುವಕ ಒಂದು ಸಾಧಾರಣ ಕವಿತೆಯನ್ನೋ ಅಥವಾ ಕೆಟ್ಟ ಕಥೆಗಳ ಒಂದು ಚಿಕ್ಕಪುಸ್ತಕವನ್ನೋ ಪ್ರಕಟಿಸಿದ, ಎಂದಿಟ್ಟುಕೊಳ್ಳಿ, ಅವನು ತನ್ನ ಈ 'ಸೃಷ್ಟಿ'ಯನ್ನು 'ಸೃಜನಶೀಲ' ಎಂದುಬಿಡುತ್ತಾನೆ. ಕಾರ್ಮಿಕನ ಎಲ್ಲ ಶಕ್ತಿಯನ್ನು ಹಿಂಡಿ ಹಾಕುತ್ತಿರುವಂಥ ಸಂದರ್ಭದಲ್ಲಿ ಕಾರ್ಮಿಕವರ್ಗ ಭವ್ಯವಾದ ಕಾರ್ಖಾನೆಗಳನ್ನು ನಿರ್ಮಾಣಮಾಡುತ್ತಿರುವುದಷ್ಟೇ ಅಲ್ಲ, ತನ್ನ ನೆಲದ ರೂಪುರಂಗನ್ನೇ ಬದಲಿಸಲು ಉದ್ಯುಕ್ತವಾಗಿರುವಾಗ, ಹಳ್ಳಿಗಾಡುಗಳ ಜೀವನಪದ್ಧತಿಯನ್ನೇ ಅಲ್ಲೋಲ-ಕಲ್ಲೋಲಮಾಡಲು ಪ್ರಯತ್ನಶೀಲವಾಗಿರುವಾಗ, ಬಿಡುವಿಲ್ಲದೆ ಅವಿರತವಾಗಿ ವಿಶ್ವವ್ಯಾಪಿ ಮಹತ್ವದ ಬೃಹತ್ ಕಾರ್ಯಗಳನ್ನು ಮಾಡುತ್ತಿರುವಾಗ ಈ ನವಯುವಕರು ಹೀಗೆ ಸೃಜನಶೀಲತೆಯನ್ನೇ ಪರಿಭಾಷಿಸುತ್ತಿರುವುದನ್ನು ನೋಡಿದರೆ ಇದು ಒಂದೆಡೆ ದೇಶದ ಸಮಸ್ಯೆಗಳ ಬಗೆಗೆ ಇವರು ವಿಮುಖರಾಗುತ್ತಿದ್ದಾರೆ ಎಂದು ಅನ್ನಿಸಿದರೆ ಇನ್ನೊಂದೆಡೆ ಹಾಸ್ಯಾಸ್ಪದವೆಂದೂ ಅನ್ನಿಸುತ್ತದೆ.

ಇನ್ನು ನನ್ನ ಬಗೆಗೆ ಹೇಳುವುದಾದರೆ, ನಾನು ನನ್ನನ್ನು 'ಲೇಖಕ' ಎಂದಷ್ಟೇ ಎಂದೂ ಭಾವಿಸಿಲ್ಲ. ಒಂದಲ್ಲ ಒಂದು ರೂಪದಲ್ಲಿ ನಾನು ನನ್ನ ಜೀವನಪರ್ಯಂತ ಸಾರ್ವಜನಿಕ ಕಾರ್ಯಚಟುವಟಿಕೆಗಳಲ್ಲಿ ಭಾಗವಹಿಸುತ್ತಲೇ ಬಂದಿದ್ದೇನೆ. ಇವತ್ತಿಗೂ ಈ ಬಗೆಯ ಕಾರ್ಯಚಟುವಟಿಕೆಗಳಲ್ಲಿ ನನ್ನ ಆಸಕ್ತಿ ಕಡಿಮೆಯಾಗಿಲ್ಲ. ಸಾಮಾನ್ಯವಾಗಿ ಯುವಲೇಖಕರು, 'ಸಣ್ಣಪುಟ್ಟ ಸಾರ್ವಜನಿಕ ಕೆಲಸಕಾರ್ಯಗಳಲ್ಲಿ ಬಹಳಷ್ಟು ಸಮಯ ಹಿಡಿಸುತ್ತದೆ. ಇದರಿಂದಾಗಿ ಸೃಜನಾತ್ಮಕ ಚಿಂತನೆಯಲ್ಲಿ ಅಡಚಣೆಯುಂಟಾಗುತ್ತದೆ' ಎಂದು ದೂರುತ್ತಾರೆ. ಆದರೆ ಇಂಥ ದೂರುಗಳನ್ನು ನಾನು ಆಧಾರವಿಲ್ಲದವು ಎಂದೇ ಭಾವಿಸುತ್ತೇನೆ. ಎಂಥದೇ ಸಣ್ಣ-ಪುಟ್ಟ ಸಾರ್ವಜನಿಕ ಕೆಲಸವೇ ಆಗಿದ್ದರೂ ಅದು ನಿರರ್ಥಕವಾಗುವುದಿಲ್ಲ. ನೀವು ಅಂಗಳದ ಕಸಗುಡಿಸಿದರೆ, ಅಲ್ಲಿನ ಹಾನಿಯುಂಟು

ಮಾಡುವ ಧೂಳಿನಿಂದ ಮಕ್ಕಳ ಶ್ವಾಸಕೋಶದ ಆರೋಗ್ಯವನ್ನು ಕಾಪಾಡುವಿರಿ. ಅಲ್ಲವೆ ?

'ಸೈನಿಕನ ಬಲ ಬಂದೂಕದಲ್ಲಿ, ವ್ಯಾಪಾರಿಯ ಬಲ ರೂಬೆಲ್‌ನಲ್ಲಿ' ಎಂಬ ಒಂದು ರಶ್ಯನ್ ಗಾದೆಯಿದೆ. ಈ 'ಸಾಮಾನ್ಯ' ಜನ ಹತ್ತಾರು, ನೂರಾರು ಮಣ ಗಟ್ಟಲೆ ರೂಬೆಲ್‌ಗಳನ್ನೂ ಚೀಲಗಳಲ್ಲಿ ತುಂಬಿಕೊಂಡು, ಅವನ್ನು ಬಗಲಿಗೆ ಸೇತು ಹಾಕಿಕೊಂಡು ಸುತ್ತುತ್ತಿರುತ್ತಾರೆ. ಆದರೆ ಒಂದು ಕಾಲದಲ್ಲಿ ಅತ್ಯಂತ ಸಾಮಾನ್ಯ ವ್ಯಕ್ತಿಯಾಗಿದ್ದು ಈಗ ಒಂದು ದೊಡ್ಡ ಪತ್ತಿಬಟ್ಟೆಯ ಕಾರ್ಖಾನೆಯ ಮಾಲೀಕನಾಗಿರುವ ಬಕಾಲ್ದಿನ್ ತನ್ನ ಅರವತ್ತನೆಯ ವಯಸ್ಸಿನಲ್ಲಿ ಚಿನಿಶಿವಸ್ಕಿಯನ್ನೂ ಓದಲು ಪ್ರಾರಂಭಿಸಿದ. ಓದುತ್ತ-ಓದುತ್ತ ಯಾವುದಾದರೊಂದು ಹೊಸ ವಿಷಯ ಅರ್ಥವಾಗುತ್ತಿದ್ದಂತೆಯೇ ಅವನು, 'ನನ್ನಂಥ ಗೌರವಾನ್ವಿತ ವ್ಯಕ್ತಿಯನ್ನೂ ಮೂರ್ಖನನ್ನಾಗಿಯೇ ಇಟ್ಟುಬಿಟ್ಟರು. ಕೊಂಚ ಯೋಚಿಸಿ ನೋಡಿ, ನಲ್ವತ್ತು ವರ್ಷಗಳವರೆಗೆ ಹಣ ಮಾಡುವ ಮತ್ತು ಎಷ್ಟೋ ಜನರನ್ನು ಹಾಳುಮಾಡುವ ಮತ್ತು ಅವರ ಶತ್ರುತ್ವವನ್ನು ಸಂಪಾದಿಸಿದ ನಂತರ ಇವತ್ತು ನನಗೆ ಈ ಎಲ್ಲ ಕೆಡಕುಗಳಿಗೆ ಮೂಲಕಾರಣ ಈ ಹಣ ಎಂಬುದು ಗೊತ್ತಾಯಿತು' ಎಂದು ಉದ್ಗರಿಸಿದ.

ಶ್ರೀಮಂತರು ಮತ್ತು ಬಲಶಾಲಿಗಳಿಂದಷ್ಟೇ ಈ ಬಗೆಯ ಮಾತುಗಳನ್ನು ನಾನು ಕೇಳಿಸಿಕೊಳ್ಳುತ್ತಿದ್ದೆ ಎಂದೇನಲ್ಲ. ನಗರದ ದಲಿತರು, ಫ್ಯಾಕ್ಟರಿ ಕಾರ್ಮಿಕರು, ಕುಶಲಕರ್ಮಿಗಳು, ನೌಕರ-ಚಾಕರರೂ ಸಾಮಾನ್ಯವಾಗಿ ಮೇಲಿನಂತೆಯೇ ಮಾತನಾಡುತ್ತಿದ್ದರು. ಈ ಜನ ಮಾಲೀಕರ ಅಧಿಕಾರಗಳನ್ನು ನ್ಯಾಯೋಚಿತವೆಂದು ಭಾವಿಸುತ್ತಿದ್ದರು, ಅವರ ಮೇಲೆ ಚರ್ಚ್‌ನ ಪ್ರಭಾವವಿತ್ತು. ಹಾಗೂ ಧರ್ಮ 'ಶ್ರೀಮಂತರು ಭಗವಂತನ ನೇರ ಕೃಪಾಪಾತ್ರರು' ಮತ್ತು 'ಮಹತ್ವ ಮತ್ತು ಗೌರವ ಶ್ರೀಮಂತರಿಗೆ ಮಾತ್ರ ಉಂಟು' ಎಂದು ಭಾವಿಸಿದ್ದರು.

ನೀತ್ಸೆಯ ಸಾಮಾಜಿಕ ದರ್ಶನದ ಆಧಾರಭೂತ ವಿಚಾರಗಳು ತುಂಬಾ ಸರಳವಾಗಿವೆ-ಬದುಕಿನ ನಿಜವಾದ ಉದ್ದೇಶ ವಿಶಿಷ್ಟ ಬಗೆಯ ಜನರನ್ನು--ಅತಿಮಾನವರನ್ನು ಸೃಷ್ಟಿಮಾಡುವುದೇ ಆಗಿದೆ. ಇವರಿಗೆ ಜೀತಮಾಡುವುದೂ ಅನಿವಾರ್ಯವಾಗಿ ಸೇರಿಕೊಂಡಿದೆ. ಇಂತ ಜೀತ ಪದ್ಧತಿಯ ಮೇಲೆ ಆಧಾರಿತವಾಗಿದ್ದರಿಂದಲೇ ಪ್ರಾಚೀನ ಗ್ರೀಕ್ ಜನ ವಿಕಾಸದ ಅಭೂತಪೂರ್ವ ಹಂತವನ್ನು ತಲುಪಿದರು. ಆದರೆ ಇದಾದ ನಂತರ ಕ್ರೈಸ್ತರ ಜನಪರವಾದ ಆಂದೋಲನದ ಪರಿಣಾಮವಾಗಿ ಮಾನವ ಜನಾಂಗದ ಸಾಂಸ್ಕೃತಿಕ ವಿಕಾಸ ಪತನೋನ್ಮುಖವಾಗಿದೆ. ಜನ ಹರಿದು ಹಂಚಿಹೋಗುತ್ತಿದ್ದಾರೆ ಎಂಬುದನ್ನು ನಾವು ಒಪ್ಪಬೇಕಾಗುತ್ತದೆ. ಒಂದೆಡೆ, ತಮಗೆ ಇಷ್ಟಬಂದಂತೆ ಮಾಡುವ ಅಲ್ಪಸಂಖ್ಯಾತರಾದ ಶಕ್ತಿಶಾಲಿ ಜನರಿದ್ದಾರೆ, ಇನ್ನೊಂದೆಡೆ ಬಹುಸಂಖ್ಯಾತರಾದ ದುರ್ಬಲ ಜನರಿದ್ದಾರೆ. ಈ ದುರ್ಬಲರು ಮೌನವಾಗಿದ್ದುಕೊಂಡು ಮೊದಲವರ್ಗದ ಜನರ ಆದೇಶಗಳನ್ನು ಪಾಲಿಸುತ್ತಾರೆ !

ಮೇಲಿನ ದರ್ಶನವನ್ನು ಪ್ರವರ್ತಿಸಿದ ವ್ಯಕ್ತಿ ಕೊನೆಗೆ ಹುಚ್ಚನಾದ. ಆತ, ವಾಸ್ತವ ಸಂಗತಿಯೆಂದರೆ 'ಮಾಲೀಕರ' ವ್ಯಕ್ತಿಯಾಗಿದ್ದ ಮತ್ತು ಅವರ ಪರವಾಗಿದ್ದ. ಇದರಲ್ಲಿ ಯಾವುದೇ ಮೌಲಿಕತೆ ಇರಲಿಲ್ಲ. ಈ ವಿಚಾರಗಳನ್ನು ಅಫಲಾತೂನ್‌ನೇ ಹೇಳಿದ್ದ. ಇದೊಂದು ತುಂಬಾ ಪ್ರಾಚೀನ ದರ್ಶನ. ಇದರ ಮುಖ್ಯ ಉದ್ದೇಶ 'ಮಾಲೀಕರ' ಆಧಿಪತ್ಯವನ್ನು ಸಮರ್ಥಿಸುವುದೇ ಆಗಿದೆ. ಅವರನ್ನು ಇದು ಎಂದೂ ಮರೆಯುವುದಿಲ್ಲ. ನಿತ್ಶೆಯಲ್ಲಿ ಈ ದರ್ಶನದ ಅಂಕುರ ಜರ್ಮನಿಯಲ್ಲಾದ ಸಾಮಾಜಿಕ ಜನಾಂದೋಲನದ ವಿಕಾಸದ ಕಾರಣದಿಂದಾಗಿ ಆಯಿತು ಎಂದು ಹೇಳಬಹುದೇನೋ. ನಮ್ಮ ಕಾಲದಲ್ಲಂತೂ ಇದು ಫ್ಯಾಸಿಸ್ಟರ ಪ್ರಿಯ ಆಧ್ಯಾತ್ಮಿಕ ಆಹಾರವಾಗಿದೆ.

ನಮ್ಮ ವಿಮರ್ಶಕರು ದೂರುವಂತೆ, ನಮ್ಮ ಸಾಹಿತ್ಯ ನಮ್ಮ ಕಾಲದ ನಾಯಕರನ್ನು 'ಸಂಪೂರ್ಣ'ರನ್ನಾಗಿ ಹಾಗೂ ಜೀವಂತ ವ್ಯಕ್ತಿಗಳ ರೂಪದಲ್ಲಲ್ಲದೆ ರಸಹೀನರನ್ನಾಗಿ, ಮರದಮೂರ್ತಿಗಳಂತೆ ಚಿತ್ರಿಸುತ್ತದೆ. ಕೆಲವು ವಿಮರ್ಶಕರಂತೂ 'ಯಥಾರ್ಥವಾದ' ನಾಯಕನ ಜೀವಂತವಾದ ಹಾಗೂ ಸಂಪೂರ್ಣವಾದ ಚಿತ್ರಣ ನೀಡುವುದರಲ್ಲಿ ಅಸಮರ್ಥವಾಗಿದೆ ಎಂದೇ ಹೇಳಿಬಿಡುತ್ತಾರೆ. ವಿಮರ್ಶೆಯನ್ನು ಹವ್ಯಾಸವೆಂದು ಪರಿಭಾವಿಸಿರುವ ಜನರ ವಿಶೇಷತೆಯೆಂದರೆ ಅವರು ಇದನ್ನು ಸಂಶಯಗ್ರಸ್ತವನ್ನಾಗಿ ಮಾಡಿದ್ದಾರೆ. ಇದರಿಂದಾಗಿಯೇ ನಾನು ನಮ್ಮ ವಿಮರ್ಶಕರು 'ಶ್ರೀಮಂತರ ನೈತಿಕತೆ'ಯಿಂದ ಮುಕ್ತರಾಗಿದ್ದಾರೆಯೋ ಅಥವಾ ಇಲ್ಲವೋ ಎಂಬುದರ ಬಗೆಗೆ ಮತ್ತು ಇವರು ತಮ್ಮ ಗುಣಗಳನ್ನು ತಮ್ಮ ಮೇಲೆಯೇ ಹೇರಿಕೊಳ್ಳಲು ಬದ್ಧರಾಗಿದ್ದಾರೇನು ಎಂದು ಯೋಚಿಸಲು ವಿವಶನಾಗುತ್ತಿದ್ದೇನೆ.

ಶ್ರಮ ಪ್ರಪಂಚದಲ್ಲಿ ಕ್ರಾಂತಿಯನ್ನು ತರುವ ಮಟ್ಟ ತಲುಪಿದೆ. ಇದಕ್ಕೆ ಪೂರಕವಾಗಿ ಸಹಾಯಮಾಡುವುದು, ಕ್ರಾಂತಿಗೆ ನೆರವಾಗುವುದು ಸಾಹಿತ್ಯದ ಕರ್ತವ್ಯವಾಗಿದೆ. ಈ ಬಗೆಯ ಸಹಾಯ ಎಷ್ಟು ದೀರ್ಘ ಗತಿಯಲ್ಲಾಗುವುದೋ ಅಷ್ಟೇ ದೀರ್ಘಗತಿಯಲ್ಲಿ 'ಅತಂತ್ರದಲ್ಲಿರುವ ವ್ಯವಸ್ಥೆ' ಹೇಳಹೆಸರಿಲ್ಲದಂತೆ ಪತನವಾಗುವುದು.

ಜೀವನ ಈ ಪರಿವರ್ತನೆಗಳ ಬಗೆಗೆ ನನ್ನ 'ವಿಚಾರ'ಗಳ ನಿರೂಪಣೆ ಕ್ರಮ-ಕ್ರಮೇಣ, ತುಂಬಾ ಕಷ್ಟದಿಂದ ಸಾಧ್ಯವಾಯಿತು. ಬಹುಶಃ ನನ್ನ ಅಸ್ತವ್ಯಸ್ತ ಬದುಕು, ನನ್ನ ಮೇಲೆ ಬಿದ್ದ ಪ್ರಭಾವಗಳ ತೀವ್ರತೆ, ಕ್ರಮಬದ್ಧ ಶಿಕ್ಷಣದ ಅಭಾವ ಮತ್ತು ಸ್ವಂತ ಓದಿಗಾಗಿ ನನಗೆ ದೊರೆತ ಅಲ್ಪಸಮಯದ ಕೊರತೆಯೂ ಕಾರಣಗಳಿದ್ದಿರಬಹುದು. 'ಆರ್ಥಿಕ ಪ್ರಗತಿ'ಯಲ್ಲಿ ನನಗೆ ಯಾವ ಆಸಕ್ತಿಯೂ ಇರಲಿಲ್ಲ. ಆದರೆ ಈ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಗತಿಯನ್ನು ಕುರಿತಂತೆ ನನ್ನ ವಿಚಾರಗಳೇ ಬೇರೆಯಾಗಿದ್ದವು.

ಲೇಖಕವರ್ಗ ಬುದ್ಧಿಜೀವಿಗಳನ್ನು ಸಂಕಲ್ಪಶಕ್ತಿಯಿಲ್ಲದ ಜನರ ರೂಪದಲ್ಲಿ ಯಾಕಾಗಿ ಸಮಾಜದ ಮುಂದೆ ಮಂಡಿಸುತ್ತಿದ್ದಾರೆ ಎಂಬುದನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ನೂರಾರು ಜನ ಬುದ್ಧಿಜೀವಿಗಳು 'ಜನರ ಮಧ್ಯ'ಕ್ಕೆ ಹೋಗುತ್ತಿದ್ದರು

ಮತ್ತು ಅವರಲ್ಲಿ ಬಹಳಷ್ಟು ಜನರನ್ನು ಕಾರಾವಾಸಕ್ಕೆ ಅಥವಾ ಅವರನ್ನು ಜನರಿಂದ ದೂರಕಳಿಸಿದರೂ ಅವರ ಬಗ್ಗೆ ಈ ಬಗೆಯ ಅಭಿಪ್ರಾಯ ರೂಢಿಗೆ ಬಂತಾದರೂ ಹೇಗೆ? ಸಾಹಿತ್ಯ ಇಂಥ ಜನರನ್ನು 'ಪ್ರತಿಬಿಂಬಿಸಲು' ಅಸಮರ್ಥವಾಗಲು ಅಸಮರ್ಥವಾದುದಕ್ಕೆ ಕಾರಣವಾದರೂ ಯಾವುದು? ಈ ಜನರ ಮೇಲೆ 193ರ ಮೊಕದ್ದಮೆಯನ್ನು ಹೂಡಲಾಗಿತ್ತು. ಏಕೆಂದರೆ ಇವರು ಫ್ಯಾಕ್ಟರಿಗಳಲ್ಲಿ ಪ್ರಚಾರ ಮಾಡುತ್ತಿದ್ದರು. ಮತ್ತು 'ನರೋದ್‌ನಾಯಾ ಬೋಲ್ಯಾ' ಆಂದೋಲನದಲ್ಲಿ ಕೆಲಸ ಮಾಡುತ್ತಿದ್ದರು. ಇವರನ್ನು ಅಸ್ಥಿರ ಮನಸ್ಸಿನವರೆಂದೋ ಅಥವಾ ಸಂಕಲ್ಪಶಕ್ತಿ ಯಿಲ್ಲರೆಂದೋ ಕರೆಯಲಾಗುವುದಿಲ್ಲ. ಇದರ ಪರಿಣಾಮವೇನಾಯಿತೆಂದರೆ ಸಾಹಿತ್ಯ ಜೀವನದೊಂದಿಗೆ ಅನ್ಯಾಯವಮಾಡುತ್ತದೆ, ಅದನ್ನು ಶುಷ್ಕವಾಗಿ ಬಿಂಬಿಸುತ್ತಿದೆ ಎಂದೇ ಹೇಳಬೇಕಾಗುತ್ತದೆ.

ಏಳನೆಯ ಮತ್ತು ಎಂಟನೆಯ ದಶಕದ ಸಂಪೂರ್ಣ ಸಾಹಿತ್ಯವನ್ನು ನಾನು ಪುನಃ ಗಮನವಿಟ್ಟು ಓದಿದೆ. ನನ್ನ ದೃಷ್ಟಿಯಲ್ಲಿ ಅದನ್ನು ಎರಡು ವರ್ಗಗಳನ್ನಾಗಿ ಮಾಡಬಹುದು. ಮೊದಲ ವರ್ಗದಲ್ಲಿ ಕಟು ಸ್ವಭಾವದ ನಿಕೊಲಾಯಿ ಉಸ್ಪೇಸ್ಕಿ ಮತ್ತು ಉದಾಸಪ್ರವೃತ್ತಿಯ ರಶೇತ್ನಿಕೋವ್ ಬರುತ್ತಾರೆ. ಇವರ ಕಾದಂಬರಿಗಳನ್ನು ಕಂಡರೆ ನನಗೆ ಆಗುತ್ತಿರಲಿಲ್ಲ. ಎರಡನೆಯ ವರ್ಗದಲ್ಲಿ ಜ್ಲಾತೋವ್ರಾತಸ್ಕಿ ಇದ್ದರು. ಇವರನ್ನು ನೇಚಾಯೇವ್‌ರ ಆರಾಧಕರಲ್ಲೊಬ್ಬರಾದ 'ಒಲೋವ್' 'ಮಧುರವಾದ ಮೋಸಗಾರ' ಎಂದನ್ನುತ್ತಿದ್ದರು. ಇವರ ಜೊತೆಗೆ ಮೊದಲಿನ ಕರೋನಿನ್–ಪೆತ್ರೊಪಾಬ್ಲೊವಸ್ಕಿ, ಬೋರ್ ಹಿಡಿಸುವ ಜಸೋದಿಮ್‌ಸ್ಕಿ, ಬಾಜಿಸ್, ಮಿಖಾಯಿಲ್, ಮಾಮಿನ್ ಸಿಬಿಯಾಂಕ್, ಹಾಗೂ ಅನೇಕ ಕೆಳಮಟ್ಟದ ಕಾದಂಬರಿ ಗಳನ್ನು ಬರೆದ ದಾನಿಲೆವ್‌ಸ್ಕಿ ಇದ್ದರು. ಇನ್ನುಳಿದವರ ಹೆಸರನ್ನೇನು ಹೇಳುವುದು. ಇವರನ್ನೆಲ್ಲ ನನ್ನೊಬ್ಬನ ಹೊರತಾಗಿ ಬಹಳಷ್ಟು ಜನ ಮರೆತೂಬಿಟ್ಟಿದ್ದಾರೆ.

ಸಾಹಿತ್ಯ ಚರ್ಚ್‌ನ ಹಾನಿಕಾರಕ ಮತ್ತು ಸಂಪ್ರದಾಯಕ ಪ್ರಭಾವವನ್ನು ರಚನಾತ್ಮಕವಾಗಿ, ವಿಮರ್ಶಾತ್ಮಕವಾಗಿ ಪ್ರತಿಬಿಂಬಿಸುವುದರಲ್ಲಿ ಕೇವಲ ಅಸಮರ್ಥ ವಷ್ಟೇ ಆಗಿರಲಿಲ್ಲ. ಈ ಕೆಲಸ ಮಾಡಲು ಅದು ಇಚ್ಛಿಸುತ್ತಲೂ ಇರಲಿಲ್ಲ.

ಇವತ್ತು ಲೇಖನಕಾರ್ಯ ಮಾಡುತ್ತಿರುವ ಜನ ತಾವು ಇತರರಿಗಾಗಿ ಬರೆಯುತ್ತಿದ್ದೇವೆ ಎಂದು ಸಹ ದೂರುವಂತಿಲ್ಲ. ಆದರೆ ತಮ್ಮ ಆಸಕ್ತಿಗಳು ಜನಸಾಮಾನ್ಯರ ಆಸಕ್ತಿಗಳಿಗಿಂತ ಭಿನ್ನವಾಗಿವೆ ಎಂದು ಅವರು ಹೇಳಿಕೊಳ್ಳಬಹುದು. ಅದು ಯಾವಾಗ ಅಂದರೆ ಈ ಲೇಖಕರು ಜನತೆಯ ಕ್ರಾಂತಿಕಾರಿ ಉದ್ದೇಶಗಳನ್ನು ಮತ್ತು ಕಾರ್ಯ ಗಳನ್ನು ಅರ್ಥಮಾಡಿಕೊಳ್ಳದಿದ್ದಾಗ, ಜನತೆಗೆ ತಮ್ಮ ಹೃದಯವನ್ನು ಸಮರ್ಪಿಸದೇ ಇದ್ದಾಗ. ದುಡಿಯುವ ವರ್ಗ ತೇಜೋಪೂರ್ಣ ಶ್ರಮ ವಾಸ್ತವತೆಯಲ್ಲಿ ಬದಲಾಗಿ ಈ ಗುರಿ ಮತ್ತು ಉದ್ದೇಶಗಳು ಬದುಕನ್ನು ತೀವ್ರ ಪ್ರಭಾವಿತಗೊಳಿಸಿದೆಯಲ್ಲದೆ

ಅನವರತವಾಗಿ ಸೃಜನಾತ್ಮಕತೆಯನ್ನು ದಯಪಾಲಿಸಿವೆ ಹಾಗೂ ಅಸಂಖ್ಯವಾಗಿ ಹೊಸ ಸಿದ್ಧಾಂತಗಳಿಗೂ ಹೊಸ ವಿಷಯಗಳಿಗೂ ಜನ್ಮ ಕೊಟ್ಟಿವೆ.

ನಾವು ಎಂಥ ಯುಗದಲ್ಲಿ ಬದುಕುತ್ತಿದ್ದೇವೆಯೆಂದರೆ–ಶೋಷಕವರ್ಗ ತನ್ನ ವಾಸ್ತವವಾದಿ ಚಿಂತನೆಯ ಮೂಲಕ ತನ್ನದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಿದೆ. ಈ ಶೋಷಕ ವರ್ಗವೊಂದೇ ಪ್ರಪಂಚದ 'ಮೇಲಿನ ಶಕ್ತಿ'ಗಳನ್ನು ಗೆಲ್ಲುವ ಸಾಮರ್ಥ್ಯವನ್ನೂ ಹೊಂದಿದೆ ಹಾಗೂ ಇದು ಯಶಸ್ಸು ಪಡೆದ ನಂತರ ಸಾಮಂಜಸ್ಯ ಪೂರ್ಣವಾದ ವ್ಯಕ್ತಿತ್ವದ ಸ್ವತಂತ್ರ ವಿಕಾಸಕ್ಕಾಗಿ ಬೇಕಾದ ಸೂಕ್ತ ವಾತಾವರಣವನ್ನು ನಿರ್ಮಿಸುತ್ತದೆ.

# 1. ಎರಡು ಗ್ರಹಗಳು

ಮೂಲ : ಮುಹಮ್ಮದ್ ಇಕ್ಬಾಲ್
ಅನು : ಚಿಂತಾಮಣಿ ಕೊಡ್ಲೆಕೆರೆ

ಎರಡು ಗ್ರಹಗಳು ಒಮ್ಮೆ ಮುಖಾಮುಖಿಯಾದವು
ಒಂದು ಇನ್ನೊಂದರ ಬಳಿ ನಿಟ್ಟುಸಿರಿಟ್ಟಿತು :
ನಾವು ಹೀಗೇ ಎಂದೂ
ಅಪ್ಪಿಕೊಂಡು
ಒಂದಾಗಿ ಎಂದೆಂದೂ ಇರುವಂತಿದ್ದರೆ !
ಒಂದಾದ ಬೆಳಕನ್ನು ಸೂಸುವಂತಿದ್ದರೆ !
ಆ ದೇವರೂ ಹಾಗೇ ಕರುಣಿಸಿದ್ದರೆ—

ಒಂದಾಗುವ ಮಾತುಗಳು ಒಂದು ಕಡೆ
ಆಗಲೇ
ಬೀಳ್ಕೊಡುವ ಗಳಿಗೆ ಅದೋ ಸಮೀಪ ಬಂದಿದೆ
ನಕ್ಷತ್ರಗಳು ಸುತ್ತು
ಸುತ್ತುತ್ತಲೇ ಇವೆ
ಬದಲಾಗದ ಕಕ್ಷೆಗಳು
ಪ್ರತಿಯೊಂದನ್ನು ಬಂಧಿಸಿವೆ

ಶಾಶ್ವತ ಮಿಲನ ಒಂದು ಕನಸು ಮಾತ್ರ
ಅಗಲುವುದು ಜಗತ್ತಿನ ಅನಿವಾರ್ಯ ಸೂತ್ರ

# 2. ಹಾಳುಬಿದ್ದ ಶೀಬಾ

ಮೂಲ : ಎನ್. ಎಂ. ರಷೀದ್
ಅನು : ಚಿಂತಾಮಣಿ ಕೊಡ್ಲೆಕೆರೆ

ಮುಖ ಮುಚ್ಚಿ ಕುಳಿತಿದ್ದಾನೆ ಸೊಲೊಮನ್ :
ಶೀಬಾ ನಾಶವಾಗಿದೆ
ಅನಾಥ ಶೀಬಾ—
ಗಾಸಿಗೊಂಡ ನಾಡು, ವೇದನೆಗಳ ಮಡು
ಮರವಿಲ್ಲದ ಗಿಡವಿಲ್ಲದ ಹೂವಿಲ್ಲದ ಹಸುರಿಲ್ಲದ ನಾಡು
ಒಣಗಾಳಿ ಬಾಯಾರಿ ಮಳೆಗಾಗಿ ಸುಳಿವ ಸುಡುಗಾಡು
ಹಕ್ಕಿಗಳು ಕೊಕ್ಕುಗಳನ್ನು ರೆಕ್ಕೆಗಳಡಿ ಇಟ್ಟು ಕೂತಿವೆ
ಗಂಟಲೊಣಗಿ ಜನರು ನಿತ್ರಾಣರಾಗಿದ್ದಾರೆ

ಮುಖ ಮುಚ್ಚಿ ಕುಳಿತಿದ್ದಾನೆ ಸೊಲೊಮನ್ :
ಸೊಲ್ಲಡಗಿದ ಸೊಲೊಮನ್, ಭಗ್ನಹೃದಯಿ, ಕೆದರಿದ ಕೂದಲು :
ಆ ಶಕ್ತಿ, ಆ ಚೈತನ್ಯ ಎಲ್ಲವೂ ಸುಳ್ಳೆ ?
ಪ್ರೀತಿಯೂ ಅರೆನಿಮಿಷ ಭುಗ್ಗನುರಿದು ಆರಿಹೋಗುವ ಜ್ವಾಲೆಯೆ ?
ಬಯಕೆ ಕೂಡ ನೀರಮೇಲಿನ ಗುಳ್ಳೆಯೆ ?
ಬಿಡು–ಇವೆಲ್ಲಾ ಬದುಕಿನಲ್ಲಿ ಇದ್ದದ್ದೆ
ಆ ಕುರಿತು
ಎಷ್ಟು ಕಡಿಮೆ ಹೇಳಿದರೆ ಅಷ್ಟೂ ಒಳ್ಳೆಯದು

ಶೀಬಾ ನಾಶವಾಗಿ ಹೋಗಿದೆ
ಏನೂ ಉಳಿದಿಲ್ಲ
ಉಳಿದಿರುವುದು ದೋಚಿ ಹೋದವರ ಹೆಜ್ಜೆ ಗುರುತುಗಳು ಮಾತ್ರ
ಶೀಬಾ ಅಲ್ಲ ಶೀಬಾ ಇಲ್ಲ ಶೀಬಾದ ಸುರಸುಂದರಿ ರಾಣಿ ಕೂಡ ಇಲ್ಲ

ಮುಖ ಮುಚ್ಚಿ ಕುಳಿತಿದ್ದಾನೆ ಸೊಲೊಮನ್ :
ಕಾದಿದ್ದಾನೆ ಶಕುನದ ಹಕ್ಕಿಗೆ
ಬಂದೀತೇ ಅದೃಷ್ಟದ ಶುಭವಾರ್ತೆ ?
ತುಂಬುವುದೇ ಚೈತನ್ಯದಿಂದ ಕಾಲದ ಮಧುಪಾತ್ರೆ ?

## 3. ನಾನು ಏಕಾಂಗಿ

ಮೂಲ : ಐ ಆ್ಯಮ್ ಅಲೋನ್-ವಿ. ಭಾನಟ್
ಅನು : ಎಚ್. ಎಂ. ಚನ್ನಯ್ಯ

ನಾನು ಒಂಟಿತನಕ್ಕೆ ಜೀವಂತವಾಗಿದ್ದೇನೆ
ಅದರ ಖಿನ್ನತೆಯ ರಕ್ಷಣೆಯಿಂದಾವೃತನಾಗಿ
ಅದರ ತುಡಿವ ನೋವಿಗೆ ಹತ್ತಿರವಾಗಿ
ನಾನು ಒಂಟಿತನಕ್ಕೆ ಜೀವಂತನಾಗಿದ್ದೇನೆ.

ವ್ಯಕ್ತಿ ಮಾಡಲಾರದ ಪದಗಳ ಭಾರದಿಂದ ಜಗ್ಗಿದ ಮನಸ್ಸಿನಿಂದ
ನಷ್ಟದ ಉಸುಬಿನಲ್ಲಿ ಹೂತುಹೋದ ಭಾವನೆಗಳಿಂದ
ಪ್ರೀತಿಯ ಮರೀಚಿಕೆಯಲ್ಲಿ ನಾನೊಬ್ಬ ಏಕಾಂಗಿ.

ಬೆಳೆಯುತ್ತಿರುವ ಪೈರಿನಿಂದ ತುಂಬಿದ ಹೊಲಗಳು
ಉಕ್ಕೇರುತ್ತಿರುವ ಸ್ವರಮೇಳದಿಂದ ಬಿರಿಯುತ್ತಿವೆ :
ಮರಗಳು ಚೂಪಾಗಿ ಎತ್ತರಕ್ಕೆ ಬೆಳೆಯುತ್ತಿವೆ :

ನಾನು ಹರಿದು ಹೋಗುತ್ತಿದ್ದೇನೆ
ಎಲ್ಲಿ ಅಪರಿಚಿತ ಭೂಮಿ ಜೀವವನ್ನು
ಕೆಂಪಾಗಿ ಹೊಸದಾಗಿಸುತ್ತದೊ ಅಲ್ಲಿಗೆ.

# 4. ಬಣ್ಣದ ಹಕ್ಕಿ

ಮೂಲ : ಪೀಸಂಡ್ - ಜುಲ್ಫಿಕರ್ ಘೋಷ್
ಅನು : ಎಚ್. ಎಂ. ಚನ್ನಯ್ಯ

ಒಂದು ಬಣ್ಣದ ಹಕ್ಕಿ ಒಂದು ಪೊದೆಯ ಪಕ್ಕದಲ್ಲಿ ಕುಳಿತಿತ್ತು
ಕಂದು ತಾಮ್ರವರ್ಣದ ಬಿದ್ದ ಎಲೆಗಳನ್ನು ಕಂಡು
ತನ್ನ ರೆಕ್ಕೆಗಳ ಬಣ್ಣವನ್ನು ನೆನೆಯಿತು.
ಪುಕ್ಕಗಳು ನಡುಗಿ ಅದರ ಬೆದರಿದ ದೃಷ್ಟಿ ಅದರ ದೇಹದುದ್ದಕ್ಕೂ
ಕಂದುಬಣ್ಣದ ತಾಮ್ರದುಂಗುರಗಳನ್ನು ಸೃಷ್ಟಿಸಿತು.
ಅದು ಎಲೆಗಳ ಮೇಲಿನ ಪದಹತಿ ಸಪ್ಪಳಕ್ಕಾಗಿ
ಆಲಿಸಿತು.

ಆದರೆ, ಎಳೆಹುಂಜದ ಶಿಖೆಯನ್ನಾಗಲಿ ಬೆರ್‍ರಿಹಣ್ಣುಗಳನ್ನಾಗಲಿ
ಅಲುಗಿಸಬಲ್ಲ ಗಾಳಿಯೂ ಅಲ್ಲಿರಲಿಲ್ಲ. ಜವುಗುಸರಲ್ಲಿನ ಅದರ ಪಂಜ
ದೂರದ ಪಾದಗಳ ಬಡಿತದ ಕಂಪನವನ್ನು ಅರಿಯಲಿಲ್ಲ
ಆದರೂ ಪುಕ್ಕಗಳ ತರಂಗಗಳ ಕೆಳಗೆ, ಶಿಖೆಯ ಕೆಳಗೆ
ಅದರ ನೆತ್ತರು ಗಡುಸಾಯಿತು

ಅನಂತರ ಅದು ಗಟ್ಟಿನೆಲಕ್ಕೆ ನಡೆಯಿತು :
ಪಂಜಕ್ಕೆ ಬೆಚ್ಚಗಿದ್ದ ಹುಲ್ಲಿನ ಮೇಲೆ
ಅಡಿಯಿಟ್ಟು ನರ್ತಿಸಿತು ; ತನ್ನ ಬಾಲದ ಕಡೆ
ತಿರುಗಿ ನೋಡಿತು ; ಕೊಕ್ಕನ್ನು ಪುಕ್ಕದಲ್ಲಿ ಹುಗಿಯಿತು;
ತನಗಿಂತ ಸುಂದರ ಹಕ್ಕಿ ಇನ್ನೊಂದಿಲ್ಲ ಎಂದು ತಿಳಿಯಿತು.
ಬೆಚ್ಚನೆಯ ರೆಕ್ಕೆಗಳಲ್ಲಿ ಬಚ್ಚಿಟ್ಟುಕೊಂಡು
ಪಂಜದ ಸದ್ದನ್ನಲ್ಲದೆ ಇನ್ನಾವುದನ್ನೂ ಕೇಳಲಿಲ್ಲ.

ಈಗ ರಕ್ತಚಲನೆ ಸರಾಗವಾಗಿ
ಬಾಲದ ಪುಕ್ಕದಿಂದ ಹುಲ್ಲನ್ನು ಮೆಲ್ಲಗೆ ಬೀಸಿತು ;
ಈಗ ಬಂದೂಕವಾಗಲಿ
ಬಿಲ್ಲು ಬಾಣದ ಮಗುವಾಗಲಿ
ಮೂಸುವ ನಾಯಿಯಾಗಲಿ
ಅದರ ಕುಣಿತವನ್ನು ತಡೆಯಲಾರವು ;
ಬಿಲದಲ್ಲಿ ಬಂಧಿಸಲಾರವು ;
ಬಣ್ಣದ ಹಕ್ಕಿಗೀಗ ಯಾರ ರಕ್ಷೆಯೂ ಬೇಡ
ಪ್ರೀತಿಯೂ ಬೇಡ. ಅದು ಈಗ
ಯಾವ ಸರ್ಪದ ಬುಸುಗುಡುವ
ಹೆಡೆಗೂ ಹೆದರಲಾರದು.

## 5. ಉಪ್ಪರಿಗೆ ಬಳಿ

ಮೂಲ : ಎನ್. ಎಂ. ರಶೀದ್
ಅನು : ಮಹಾಬಲಮೂರ್ತಿ ಕೊಡ್ಲೆಕೆರೆ

ಮಲಗು ಕೋಣೆಯ ಮೋಹಕ ಬೆಳಕೆ
ಎದ್ದೇಳು ಏಳು
ಮೃದು ಕನಸುಗಳ ಸುಪ್ಪತ್ತಿಗೆಯನು
ಬೇಗನೆ ತೊರೆದೇಳು.
ಮುಗಿದ ರಾತ್ರಿಯ ಸುಖದನುಭವಗಳು
ಬಳಸಿವೆಯಾದರೂ ನಿನ್ನ
ಈ ಕಿಟಕಿಯ ಬಳಿಗೆ ಬಂದು ಬಿಡೆಂದು ನಾ
ಕರೆಯುವೆ ನಿನ್ನ.

ಮುಂಜಾವಿನ ಹದಿ ಕಿರಣಗಳು
ಮುದ್ದಿಸುತಲಿವೆ ಆ ಮಂದಿರದ ಕಂಭಗಳನ್ನು
ಪ್ರತಿ ಫಲಿಸುತ್ತಿವೆ ನನ್ನಯ ಬಯಕೆಗಳನ್ನು
ಎಚ್ಚರಿಸುತ್ತಿವೆ ಹೃದಯದಾಳದ ನವಿರು ಪ್ರೇಮ
ಸಂವೇದನೆಯನ್ನು
ನೀ ತೊರೆ, ಆ ನಿದ್ದೆಯ ತೆರೆ
ನೋಡಲು ಆ ಕಂಭಗಳನ್ನು, ಅವುಗಳ ಮೈ ನಿಲುವನ್ನು.

ಮುಂಜಾವಿನ ಉಲ್ಲಾಸದ ಕಿರಣ
ತೆನೆಸಿದ ಈ ನೆರಳುಗಳಲ್ಲಿ
ನೆನಪಿಸಿಕೊ ಕೊಳೆವಸ್ತ್ರದ ಆ ಪೂಜಾರಿ
ದೈವ ಮುಖವಾಡದ ಕಿರಾತಕ ಅವಾರಿ.

ಅಬ್ಬಾ !! ಇವು...
ಶತಮಾನಗಳ ದುಃಖ ನಾಚಿಕೆಯೇ ಸರಿ.

ತುಸು ಈ ಕಡೆ ನೋಡು
ಅಲಲಾ ಇದೆಂಥಾ ಕಾಡು ?

ಇದು ಸೂಡಿಯ ಹಿಡಿದು
ತಾಂಡವಿಸಿದಂತೆ
ಅಡಗಿ ಬೇಟೆಯ ಹುಡುಕಾಡುತ್ತಿದೆ
ಗುಪ್ತನೆಲೆಯಿಂದಿದು ಹೊರ ಹೊರಟಿದೆ.
ಧಾವಿಸುತ್ತಿದೆ...ಧಾವಿಸುತ್ತಿದೆ
ಜಂಗುಳಿಯು ಸಂತೆಯ ಬೀದಿಗಳಲ್ಲಿ
ಹುಚ್ಚೆದ್ದ ನೆರೆಯಂತೆ ಧಾವಿಸುತ್ತಿದೆ.

ಆದರೂ ಎಲ್ಲೋ
ಈ ಎಲ್ಲರ
ಹೃದಯದಿ
ಸೂಕ್ಷ್ಮವಾಗಿದ್ದರೂ ಅಹಂಭಾವ
ಅಂತರಾತ್ಮದಲ್ಲಿ ಸುಡು ಕಿಡಿಯಿದ್ದರೂ ಬೀರದಾಗಿದೆ
ಪ್ರಭಾವ
ಬಾರದುಳಿದಿದೆ ಧೈರ್ಯ ಯಾರಿಗೂ
ಸ್ಫೋಟಿಸಲು ಉರಿಜ್ವಾಲೆಯ ಸ್ವಭಾವ.

ಮುಗಿದಿಲ್ಲ ಇದು
ಇಲ್ಲಿಗೆ
ತುಸು ಆ ಕಡೆ ನೋಡಲ್ಲಿ
ಆ ಅರಲು ಭೂಮಿಯಲ್ಲಿ
ಹೊರಳಾಡಿಕೊಂಡ ಹೆಣಗಳು, ಬಡವರು
ಕ್ರೌರ್ಯವನ್ನೇ ಮುದ್ದಿಸುವ ದುರಾತ್ಮರು
ಈ ಶ್ವಪಚರ ಕುರಿತೂ ಅರಿತಿರು.

ಈ ನಾನು....
ಕೂಡ ಕಾಡುಮೃಗ

ಅರಿತಿರುವಿಯಾ ನೀನು ?
ಭಾರಗೊಂಡಿರುವೆ, ದಣಿದಿರುವೆ
ವೃದ್ಧಾಪ್ಯದಿಂದ ಕುಸಿದಿರುವೆ
ಭೀಕರ ಹಸಿವಿನ ಸವಾರಿ ನಡೆಸಿರುವೆ

ಇಷ್ಟಾದರೂ ಈ ನಗರದ
ಇತರರಂತೆಯೇ ನಾನು
ಬಳಸುತ್ತೇನೆ ಕಡು ರಾತ್ರಿಯ ಮೋಜನ್ನು
ತಲೆ ತಿರುಕನಂತೆ ವರ್ತನೆ
ಗೈದು ತಡಕುತ್ತೇನೆ ಪುಟ್ಟದೀ ಗುಡಿಸಲ ಕದವನ್ನು.

ನೋಡು...
ಮೋಹಕ ಬೆಳಕೆ
ಚೈತನ್ಯದ ಮೊಳಕೆ
ನೋಡು ನನ್ನ ಈ ಅಸಹಾಯಕ ಯಾತನೆ
ಚುಚ್ಚುತ್ತಲಿದೆ ಚೂಪು ಮೊನೆ.

ತಿರು ತಿರುಗಿ ಬರುತ್ತೇನೆ ಕಿಡಕಿಯ ಬಳಿ ಸಾರಿ
ಆ ಮಂದಿರದ ಕಂಭಗಳ
ಅಧರಗಳನ್ನು ಚುಂಬಿಸುತ್ತ
ಸಂಜೆಗಳು ವಿದಾಯಗೊಳ್ಳುವಾಗ ಜಾರಿ.

# 6. ಕವಿತೆ

ಮೂಲ : ತೊಫಿಕ್ ಅರಾಫತ್
ಅನು : ಮಹಾಬಲಮೂರ್ತಿ ಕೊಡ್ಲೆಕೆರೆ

ಪ್ರೀತಿಸುವ ಸಮಯ
ಇದು ಪ್ರೀತಿಸುವ ಸಮಯ
ಹಾಗೆಂದು ಕರೆದಾಗ ಹೃದಯ.

ಕೆಸರೇ ತುಂಬಿದ ಆಗಸ್ಟಾದರೇನಂತೆ
ಕಡು ಸೆಕೆಯು
ಏಪ್ರಿಲ್ ಎಂದು ಅದೇಕೆ ಚಿಂತೆ
ಸೋಲದ...
ಎಂದೂ ಸೋಲದ ಪ್ರೀತಿಗೆ, ಅದರ ಸುಂದರ ಪಾದಗಳಿಗೆ
ರುಚಿರ ತುತ್ತಿನ ತನಕವೂ
ವಿಜಯದ ನಡಿಗೆ
ಯಶಸ್ಸಿನ ಕಡೆಗೆ.

ಆಗಮಿಸಿದ ಚೈತ್ರ
ಎಳೆಯು ಬೇಕಾದರೆ ಚೆಲುವಿನ ಚಿತ್ರ
ನಮಗೆಂದು ನೀಡುತ್ತಿದೆ ಸುಂದರ ಪಾತ್ರ.

ಈ ನಾವು ಕಿನ್ನರ ಕವಿಗಳು
ದನಿ ತೆರೆದು ಹಾಡಲು ಬಯಸುತ್ತೇವೆ
ಹಸಿರೆಲೆಗಳ ಆಳೆತ್ತರ ಚಾಮರ ಬಯಸುತ್ತೇವೆ.

ಪ್ರೀತಿಯೆಂಬುದೇ ನಾಡು
ತನ್ನ ಋತುಚಕ್ರದ ಸಮೃದ್ಧತೆಯಲಿ
ಪ್ರೀತಿಯೇ ದೇಶದ ಪಾಡು.

# ಮೋಹನ ಮುರಲಿ

ಮೂಲ : ಬಾಲಕೃಷ್ಣ ಸಾಮ
ಅನು : ಎಚ್. ಎಸ್. ವೆಂಕಟೇಶಮೂರ್ತಿ

ಮೋಹನ ನುಡಿಸಿದ
ಮೋಹಕ ಮುರಳಿ ಮಧುರಾ ನಗರದಲಿ.
ಎಲ್ಲ ಮನೆಗಳಲಿ, ಎಲ್ಲ ಹೃದಯದಲಿ
ಅನುರಣಿಸುತ್ತಿದೆ ಕೊಳಲಿನುಲಿ.

ಕೊಳಲುಲಿಯೊಂದಿಗೆ ಸ್ಪಂದಿಸುತಿದೆ ಹಾ !
ಬೀಸುವ ತಂಗಾಳಿ
ಮೆಲುಕು ಹಾಕುವುದ ಮರೆತವು ಹಸುಗಳು
ಗರಿಕೆಯುದುರುತಿದೆ ಬಾಯಿಂದ
ಕೊಳಲ ನುಡಿಸುತಿರೆ ಗೋವಿಂದ.

ಹಾರುವ ನವಿಲುಗಳಗೊ ಅಗೊ ಆಗಸ
ದಿಂದುದುರಿಸುತ್ತಿವೆ ಗರಿಗಳನು
ಕೋಗಿಲೆಗಳು ಕೊಳಲಿಂಪಿಗೆ ಸೋತು
ಬಗೆದಿವೆ ಉಗುರಿಂದೆದೆಗಳನು.

ಗೋಪೀಸಖಿಯರು ಸುಖಾತಿಶಯದಿಂದಳುವರು
ಕೇಳುತ ಕೊಳಲುಲಿಯ
ಚಿತ್ರದಲ್ಲಿ ಬರೆದಂತಿರುವರು ಮಿಡಿ
ಗಲ್ಲವೂರಿ ಹೂಬೊಗಸೆಯಲಿ.

ಉಕ್ಕಿದೆ ಯಮುನೆ, ಬಾನೋ ಭೂಮಿಯ
ಚುಂಬಿಸುತಿದೆ ತನ್ನೆದೆಗೆತ್ತಿ
ಪಿಳ್ಳಂಗೋವಿಯ ನುಡಿಸುತ್ತಿರುವನು
ಗೋಪಾಲನು ಕೆಳತುಟಿಗೊತ್ತಿ

ಇರಾನ್

## ಭಯ

ಬಿ. ವೈ. ಲಲಿತಾಂಬ

ಹೆದರುವುದಿಲ್ಲ
ನಾನು
ಸಾವನ್ನು ಕಂಡು
ಅದು ಮತ್ತಷ್ಟು ಮುಂದಕ್ಕೆ
ಕೈ ಚಾಚಿದರೂ

ನಾನು ಹೆದರುವುದು
ಬರಿ
ಈ ಭೂಮಿಯಲ್ಲಿದ್ದು
ಸಾಯುವವರಿಗಾಗಿ.

ಕಾರಣ
ಇಲ್ಲಿ ಗುಳಿ ತೆಗೆದು
ಹೂಳುವವನಿಗೆ ಮಜೂರಿ
ಮನುಷ್ಯನ ಸ್ವಾತಂತ್ರ್ಯಕ್ಕಿಂತ ದುಬಾರಿ.

# ಸ್ನೇಹದ ಪ್ರತಿಜ್ಞೆ*

ಮೂಲ : ಪೊ ಚು-ಇ
ಅನು : ಕಾಳೇಗೌಡ ನಾಗವಾರ

ಪ್ರಿಯ ಮಿತ್ರ,
ಮುಂದೊಮ್ಮೆ—
ನೀನು ಕಮಾನುಗಾಡಿಯಲ್ಲಿ ಆರಾಮ ಚಲಿಸುತ್ತಿರುವಾಗ
ಕಡುಬಡವನಾಗಿ ನಾನಿನಗೆ ಎದುರಾಗಬಹುದು :
ಕೆಳಗಿಳಿದು ನನ್ನ ಕುಶಲ ವಿಚಾರಿಸು.

ಅಥವಾ
ಕೊಬ್ಬಿದ ಕುದುರೆಯನ್ನೇರಿ ನಾ ಸಾಗುತ್ತಿರುವಾಗ—
ಮುರುಕಲು ಕೊಡೆ ಹಿಡಿದು ಕಣ್ಮುಂದೆ ನೀ ಕಾಣಬಹುದು ;
ತಟಕ್ಕನಿಳಿದು ನಾ ನಿನ್ನೆಡೆಗೆ
ಮನತೆರೆದು ನಿಲ್ಲುತ್ತೇನೆ.

ಕೇಳು ಚೆಲುವ ಚೆನ್ನಿಗ
ಸದಾ ಕಾಲ ಅಚಲವಾಗಿ
ನಾನು ನಿನ್ನ ಗೆಳೆಯನು :

ಪರ್ವತಗಳೆಲ್ಲ ಸಮತಟ್ಟು ನೆಲವಾಗಿ
ಎಲ್ಲ ನದಿಗಳ ನೀರು ಬತ್ತಿ ಬರಡಾಗಿ
ಕೊರೆಕೊರೆವ ಹಿರಿಮಾಗಿ ಕೋಲ್ಮಿಂಚು—ಸಿಡಿಲುಗಳ ಹಡೆದು

* ತೀರಾ ಹಿಂದೆ, ಚೀಣಾದಲ್ಲಿ ಗೆಳೆಯರಿಗೆ-ಕೆಲವು ವಿಶಿಷ್ಟ ಆಚರಣೆಗಳ ಸಮೇತ ಬೋಧಿಸಲಾಗುತ್ತಿದ್ದ ಜನಬಳಕೆಯ ಪ್ರತಿಜ್ಞಾವಿಧಿ.

ಬಿರುಬೇಸಿಗೆಯು ಒಡಲು ಮಂಜು-ಮಳೆ ಕಂಡುಂಡು
ಭೂಮಿ ಸ್ವರ್ಗದ ಕೂಡೆ ಒಂದಾಗಿ ತೊನೆದರೂ
ನಾನಿನ್ನನಗಲಲಾರೆ.

## 2. ದೊಡ್ಡ ಹಚ್ಚಡ

ಬಡತನದ ದವಡೆಯು ಜನಕೋಟಿಯೆಲ್ಲ
ಹೀಗೆ, ಚಳವಳಿಯಲ್ಲಿ ಗಡಗಡ ನಡುಗುತ್ತಿರುವಾಗ—
ಇದರ ಪರಿಹಾರಕ್ಕೇನು ರಹದಾರಿ ?

ಯಾರೋ ಒಬ್ಬನನ್ನು ಮಾತ್ರ ಬೆಚ್ಚಗಿಟ್ಟರೆ
ಅದು ಅಸಾರ್ಥಕ.

ಇಡೀ ನಗರವನ್ನೆಲ್ಲ-ಅಂಗುಲಂಗುಲ ಬಿಡದೆ-
ಒಂದೇ ಹೊದಿಕೆಯಲ್ಲಿ ಕಾವು ಹುಟ್ಟಿಸಬಲ್ಲ
ಹತ್ತು ಸಾವಿರ ಅಡಿಗಳುದ್ದದ
ದೊಡ್ಡ ಹಚ್ಚಡಕ್ಕಾಗಿ
ಹಂಬಲಿಸುತ್ತೇನೆ ನಾನು.

## 3. ಮಗ ಹುಟ್ಟಿದಾಗ

ಮೂಲ : ಸು ಟುಂಗ್‌–ಪೊ
ಅನು : ಟಿ. ಸುಬ್ರಹ್ಮಣ್ಯಂ

ಮನೆತನಕ್ಕೊಬ್ಬ ಮಗ ಹುಟ್ಟಿದಾಗೆಲ್ಲ
ಹಂಬಲಿಸುವರು : "ಅವನಾಗಲಿ ವಿವೇಕಿ."
ಬುದ್ಧಿಜೀವಿಯಾಗಿ ಇಡೀ ಜೀವನವ ಛಿದ್ರಿಸಿಕೊಂಡ
ನನ್ನ ಹಂಬಲವಿಷ್ಟೇ : 'ಮಗನಾಗಲಿ ಅವಿವೇಕಿ.
ಮೂರ್ಖನಾಗಿರಲಿ ಎಂದೆಂದಿಗೂ.'

ಹೀಗಾದಲ್ಲಿ ಮಾತ್ರ ಅವನು ಸುಖಿಯಾಗಿ ಬಾಳುವನು
ರಾಜ್ಯ ಮಂತ್ರಿ ಮಂಡಳದಲ್ಲಿ ಸ್ಥಾನ ಪಡೆದು.

## 4. ಕೆಂಪು ಜುಟ್ಟಿನ ಗಿಣಿ

ಮೂಲ : ಪೊ-ಚು-ಐ
ಅನು : ಟಿ. ಸುಬ್ರಹ್ಮಣ್ಯಂ

ಉಡುಗೊರೆಯಾಗಿ ಬಂತೊಂದು
ಕೆಂಪು ಜುಟ್ಟಿನ ಗಿಣಿ.
ಹೂ ಬಿಟ್ಟ ಪೀಚ್ ವೃಕ್ಷದಂತ ವರ್ಣಮಯ
ಮಾನವರಂತೇ ಮಾತು, ಉದುರಿಸಿದ ಮುತ್ತು.

ಎಲ್ಲ ವಾಚಾಳಿ ಜ್ಞಾನಿಗಳಿಗೂ
ಯಾವಾಗಲೂ ಸಲ್ಲುತ್ತ ಬಂದಂತೆ ಪೂಜೆ,
ಸಂದಿತು ಅದಕ್ಕೂ ತಪ್ಪದಂತೆ.

ಗಟ್ಟಿ ಕಂಬಿಗಳುಳ್ಳ ಭದ್ರ ಪಂಜರದಲ್ಲಿ
ಒಳಗಿಕ್ಕಿ ಕೂಡಿದರು ಹೊರ ಹೋಗದಂತೆ !

## 5. ಹೆಂಡತಿ

---

ಮೂಲ : ಹುವಾಂಗ್ ಹುವ
ಅನು : ಆರ್ವಿಯಸ್. ಸುಂದರಂ

ನಾನು ನನ್ನ ವಾಕ್ಯವನ್ನು ಮುಗಿಸಿದೆ.
ನೀನು ಪ್ರಾರಂಭಿಸಿದೆ
ಈ ಎರಡರ ಸಂಯೋಗವೇ
ಒಂದು ಸಮಗ್ರ ಕವನ ಆಗಬಲ್ಲುದು.
ನಿನ್ನ ನೋಟದ ಹಸಿರು ನೆರಳಿನಲ್ಲಿ
ಚಿರಪರಿಚಿತ ದರಹಾಸವೊಂದು ಮಿಂಚಿತು—
ಮಾಗಿದ ಆತ್ಮೀಯತೆ ಮಾಧುರ್ಯವನ್ನು
ತುಂಬಿಸಿಕೊಂಡ ಮುತ್ತಿನಂಥ ದ್ರಾಕ್ಷಿಯ ಗೊಂಚಲಿನಂತೆ.

*　　*　　*

ಯಾವಾಗಲಾದರೂ ಸರಿ ನೀನು ನನಗೆ ಪ್ರತಿನಿಧಿಯಾಗಬಲ್ಲೆ
ನಾನು ನಿನಗೂ ಕೂಡ
ನಮ್ಮಿಬ್ಬರಿಗೂ ಆ ಹಕ್ಕು ಇದೆ
ಇದರಲ್ಲಿ ಕಳ್ಳತನ ಪೊಳ್ಳುತನ ಎಳ್ಳಷ್ಟೂ ಇಲ್ಲ
ಮುಂಗಡ ಒಪ್ಪಂದವೂ ಬೇಕಿಲ್ಲ
ಇಪ್ಪತ್ತೈದು ವರ್ಷದ ಅನುರಾಗದ ಮರ
ಅನುಬಂಧ ಫಲವ ನೀಡಿತು.

*　　*　　*

ನಮ್ಮ ನಡುವೆ ಮಾತು ಬಿಸಿಯಾದಾಗ
ಒಂದು ಬೆಂಕಿಯ ಕಿಡಿ ಹಾರಬಹುದೇನೋ

ಆದರೆ ಅದಕ್ಕೆ ಸುಡುವ ಸತ್ವವಿಲ್ಲ
ನೀನಾದರೂ ಕಿರುನಗೆ ಬೀರುವೆ
ನಾನಾದರೂ ಮೆತ್ತಗೆ ಸಂತೈಸುವೆ
ಮುನಿದು ಓಡಬೇಕೆಂದು
ನೀನೂ ಬಯಸುವುದಿಲ್ಲ, ನಾನೂ ಬಯಸುವುದಿಲ್ಲ
ನಮ್ಮಿಬ್ಬರ ವಿವಾಹದ ನಿಬಂಧನೆ
ಸಿಟ್ಟನ್ನು ಒಬ್ಬರೇ ಇಟ್ಟುಕೊಳ್ಳದಿರುವುದು.

*　　*　　*

ನಾವು ಹೆಜ್ಜೆ ಇಡುವಾಗ ನನ್ನನ್ನು ಹಸುಗೂಸಿನಂತೆ ಭಾವಿಸುವೆ
ಅಪಾಯುಗಳನ್ನೆಲ್ಲ ನಿನ್ನ ಹೆಗಲ ಮೇಲೆ ಹೊತ್ತು.
ಕೆಸರಿನಿಂದ ಅಂಟದ ನೆಲದತ್ತ
ಹೆಜ್ಜೆ ಹೆಜ್ಜೆಗೂ ನಡೆಸಿದ್ದೀಯೆ
ನಿನ್ನನ್ನು ನೀನೇ ರೈಲು ಹಳಿ ಮಾಡಿಕೊಂಡೆ
ನುಸಾದೆ ಜೀವನಚಕ್ರ
ಬದುಕಿಗೆ ಯಾವಾಗಲೂ ಹಸಿರು ದೀಪ ಕಾಣದು
ಆದರೇನು, ನನ್ನ ನಡೆಸು ನನ್ನ ನಡೆಸು.

*　　*　　*

ನಾವು ಅಗಲಿದಾಗ
ನಮ್ಮ ನಡುವೆ ಪತ್ರ ವ್ಯವಹಾರವಿರುವುದಿಲ್ಲ
ಮರೆತುಬಿಡುವೆವೆಂಬ ಭಯವೂ ನಮಗಿಲ್ಲ
ಬೆರಳಿಗೆ ಕೈಯ ವಿಷಯ ತಿಳಿಯದೇ ಗೆಳತಿ !
ರಕ್ತನಾಳಕ್ಕೆ ರಕ್ತದ ಬಗ್ಗೆ ತಿಳಿಯದೇ
ನಮ್ಮ ಹೃದಯಗಳು ಒಂದೇ ರೀತಿ ಸ್ಪಂದಿಸುವುವು
ಒಲವಿನ ಸುದ್ದಿಯನ್ನು ತಪ್ಪದೆ ಕಳಿಸುವುವು,

*　　*　　*

ಇಂದು ನಾನು
ಬಾಗಿಲು ಬಡಿಯಲು ಕೈಯೆತ್ತುವಷ್ಟರಲ್ಲೇ
ತುಂಬು ಸ್ವಾಗತ ಬಯಸುತ್ತಾ ಬಾಗಿಲು ತೆಗೆಯುವೆ.

ಹೇಮಂತದ ಗಾಳಿಯ ಕಿರುಕುಳದಿಂದ ನೀನು ನನ್ನ ಕಾಪಾಡಿದೆ
ಬೇಸಿಗೆಯ ಮಳೆಹನಿಗಳಿಂದ ನಾನು ನಿನ್ನ ಕಾಪಾಡಿದೆ
ನೀನು ತಡವರಿಸಿದರೆ ನಾನು ಕೈ ನೀಡುವೆ
ನಾನು ಎಡವಿದರೆ ನೀನು ಕೈಚಾಚುವೆ
ಆದರೂ ನಾವಿಬ್ಬರು ಸ್ವತಂತ್ರ ಮರಗಳು
ನಮ್ಮ ಬೇರುಗಳು ಮಾತ್ರ
ಬೆಚ್ಚನೆಯ ಬಾಳ ಮಣ್ಣೊಳಗೆ ಒಂದನ್ನೊಂದು ಅಪ್ಪಿಕೊಂಡೇ ಇವೆ.

# 1. ಜೈಲಿನ ದಿನಚರಿಯಿಂದ

ಮೂಲ : ಹೋಚಿಮಿನ್
ಅನು : ಜಿ. ಎಸ್. ಶಿವರುದ್ರಪ್ಪ

**ಜೈಲಿನ ದಾರಿಯಲ್ಲಿ :**

ಕೈ ಕಾಲುಗಳ ಬಿಗಿದು ಸಾಗಿಸುತ್ತಿದ್ದಾರೆ ಇವರು ನನ್ನನ್ನು ದೂರದ ಜೈಲಿಗೆ
ದಾರಿ ಬದಿ ಗುಡ್ಡಗಳಲ್ಲಿ ಹಕ್ಕಿ ಹಾಡುತ್ತಿವೆ ಅರಳಿವೆ ಹೂವು ಘಮ್ಮಗೆ
ಬಿಗಿದು ತಡೆಯಬಹುದೇ ಹೇಳಿ ನನ್ನ ಮನಸ್ಸನ್ನು ಈ ಎಲ್ಲ ಸೊಗಸಿಗೆ ?
ಬೇಸರದ ಪಯಣ ಹಗುರಾಗಿ, ಅನಿಸುತ್ತದೆ : ಆತ್ಮೀಯರಿದ್ದಾರೆ ಜತೆಗೆ.

**ಬದುಕಿನ ದಾರಿ ಸುಗಮ :**

ಬೆಟ್ಟದೆತ್ತರದಲ್ಲಿ ಕಣಿವೆಗಳ ತಳದಲ್ಲಿ ಸಂಚರಿಸಿ ಬಂದ ನನಗೆ
ಬಟ್ಟ ಬಯಲಲ್ಲಿಂಥ ಕಷ್ಟವೊದಗೀತೆಂದು ತಿಳಿದೀತು ಹೇಗೆ ?
ಹುಲಿ ಅಡ್ಡ ಬಂದರೂ ಆ ಬೆಟ್ಟದಲ್ಲಿ, ತೊಂದರೆಯಾಗಲಿಲ್ಲ ನನಗೆ
ಬಯಲಲ್ಲಿ ಎದುರು ಹಾಕಿಕೊಂಡೆ ಈ ಜನವ ; ತಳ್ಳಿದರು ಜೈಲಿಗೆ.

**ಜಿಂಗ್ಸಿ ಜೈಲನ್ನು ಪ್ರವೇಶಿಸಿದಾಗ :**

ಹಳೆಯ ಖೈದಿಗಳು ಸ್ವಾಗತಿಸುತ್ತಾರೆ. ಜೈಲಿಗೆ ಬರುವ ಹೊಸಬರನ್ನು
ಆಕಾಶದಲ್ಲಿ ಕಪ್ಪು-ಬಿಳಿ ಮೋಡಗಳು ಆಡುತಿವೆ ಜೂಟಾಟವನ್ನು
ಈಗ ಮೇಲಿನ ನೀಲಿಯಲ್ಲಿ ಎಲ್ಲವೂ ತೇಲಿ ಹೋಗಿವೆ ದೂರದೂರಕ್ಕೆ
ಭೂಮಿಯ ಮೇಲೆ ಸ್ವತಂತ್ರವಾಗಿರಬೇಕಾದ ನಾನು ಬಿದ್ದಿದ್ದೇನೆ ಬಂಧನಕ್ಕೆ.

**ಬೆಳಗಿನ ನೋಟ :**

ಪ್ರತಿ ದಿನವು ಮೂಡಿಬರುತ್ತಾನೆ ಸೂರ್ಯ ಆ ಬೆಟ್ಟಗಳ ಹಿಂದಿನಿಂದ,
ಹಬ್ಬಿಕೊಳ್ಳುತ್ತದೆ ಚೆಂಗುಲಾಬಿಯ ಬೆಳಕು ನಾಡಿನ ತುಂಬ ಚೆಲುವಿನಿಂದ.
ಕತ್ತಲೆಯೆ ಗುತ್ತಿಗೆ ಹಿಡಿದು ಕೂತಂತಿರುವ ಈ ಜೈಲಿನೊಳಗೆ
ಒಂದಾದರೂ ಸೂರ್ಯನ ಕಿರಣ ಬರುವುದಾದರು ಹೇಗೆ ನಮ್ಮ ಬಳಿಗೆ ?

**ಬೆಳಕುಗಳ ರಾತ್ರಿ :**

ಎಷ್ಟೊಂದು ಸುಂದರ ರಾತ್ರಿ ! ಈ ಹಾಳು ಜೈಲಿನ ಒಳಗೆ
ಹೂವೂ ಇಲ್ಲ, ಮಧುವೂ ಇಲ್ಲ ; ಹೇಳಿ ಏನು ಮಾಡೋಣ ?
ಕಿಟಕಿ ಕಂಬಿಯ ಬದಿಗೆ ನಿಂತು ನೋಡುತ್ತೇನೆ ಸುಮ್ಮನೆ ಹೊರಗೆ.
ಚಂದ್ರನೂ ನೋಡುತಿದ್ದಾನೆ ನನ್ನನ್ನು, ಚೆಲ್ಲುತ್ತ ಬೆಳ್ಳಿ ಕಿರಣ.

**ಶರತ್ಕಾಲದ ಹಬ್ಬದ ದಿನ :**

ದುಂಡನೆಯ ಕನ್ನಡಿಯಂಥ ಹಣ್ಣಿಮೆಚಂದ್ರ ಶರತ್ಕಾಲದಾಕಾಶದಲ್ಲಿ
ಥಳ ಥಳ ಹೊಳೆದು ಮುಳುಗಿಸಿದ್ದಾನೆ ನೆಲವನ್ನೆಲ್ಲ ಬೆಳ್ದಿಂಗಳಲ್ಲಿ
ಈ ಹೊತ್ತು ಹಬ್ಬದುತ್ಸವದೊಳಗೆ ಮನೆಮನೆಯಲ್ಲಿ ನಲಿಯುತ್ತಿರುವ
ಬಂಧುಗಳೆ ಇಲ್ಲಿ ಈ ಜೈಲಿನಲ್ಲಿರುವ ನಮ್ಮ ಕೊರಗೇನೆಂದು ತಿಳಿದೀತೆ ನಿಮಗೆ ?

**ಚಳಿಯಿರುಳು :**

ಶರದೃತು ; ತಣ್ಣಗೆ ಕೊರೆವ ರಾತ್ರಿ ; ಹಾಸಲಿಲ್ಲ, ಹೊದೆಯಲೂ ಇಲ್ಲ ;
ಮುದುರಿ ಮಲಗಿದ್ದೇನೆ ನನ್ನ ಕಾವಿಗೆ ನಾನೆ ; ನಿದ್ರೆಯಿಲ್ಲ
ಬಾಳೆ ತೋಟದ ಮೇಲೆ ಬೆಳ್ದಿಂಗಳಿಳಿದು, ಇನ್ನೂ ಛಳಿ.
ಕಿಟಕಿ ಕಂಬಿಗಳಾಚೆ ನೋಡುತ್ತೇನೆ, ಆಕಾಶದಲ್ಲಿ ಕೃತ್ತಿಕೆಯ ಥಳಿ !

**ಜೈಲಿನಲ್ಲಿ ತನ್ನ ಗಂಡನನ್ನು ಭೆಟ್ಟಿಯಾದಾಗ**

ಅತ್ತ ಕಡೆ ಅವನು, ಇತ್ತ ಕಡೆ ಇವಳು
ಇಬ್ಬರ ನಡುವೆ ಸೆರೆಮನೆಯ ಕಬ್ಬಿಣದ ಸರಳು

ವ್ಯತ್ಯಾಸವೋ ಕೆಲವೇ ಕೆಲವು ಅಂಗುಲ
ಆದರೂ ಭೂಮಿ ಆಕಾಶಗಳೆ ಅಗಲ.
ತುಟಿಗೆ ಬಾರದ್ದನ್ನು ಕಣ್ಣು ಹೇಳುವ ತವಕ ;
ಆದರೂ ಮಾತಿಲ್ಲ, ಬರಿಯ ಮೌನ. ತುಟಿತನಕ
ಬಂದ ಮಾತೆಲ್ಲವೂ ಬರಿಯ ಕಣ್ಣೀರು,
ಇವರ ಪಾಡನು ನೋಡಿ ಮರುಗದವರಾರು ?

**ನಿದ್ರೆಯಿಲ್ಲದ ರಾತ್ರಿಗಳಲ್ಲಿ :**

ನಿದ್ರೆಯಿರದ ಸುದೀರ್ಘ ರಾತ್ರಿಗಳ ಈ ಸೆರೆಮನೆಯ ವಾಸದೊಳಗೆ
ತೋಡಿಕೊಂಡಿದ್ದೇನೆ ನನ್ನ ಪಾಡನು ಕುರಿತು ನೂರಾರು ಕವಿತೆಯೊಳಗೆ.
ಒಂದೊಂದು ಚೌಪದಿಯ ಕೊನೆಗೂ ಬರೆಹವ ನಿಲಿಸಿ, ನೋಡಿದ್ದೇನೆ ಹೊರಗೆ
ಕಿಟಕಿ ಕಂಬಿಗಳಾಚೆ, ಸ್ವಾತಂತ್ರ್ಯದಂತಿರುವ ಸುವಿಶಾಲ ಗಗನದೆಡೆಗೆ.

## 2. ನಸುಕಿನಲ್ಲಿ ಪಯಣ

ಮೂಲ : ಹೋಚಿಮಿನ್
ಅನು : ರಾ. ಲಕ್ಷ್ಮೀನಾರಾಯಣ

೧

ಮುಂಜಾವದ ಕೋಳಿ
ಒಮ್ಮೆ ಮಾತ್ರ ಕೂಗಿದೆ
ರಾತ್ರಿ ಇನ್ನೂ ಮುಗಿಯದಿವೆ
ದೂರದಲ್ಲಿ
ಗಿರಿಯಮೇಲೆ
ತಾರೆಯೊಡನೆ ತಂಗದಿರನು
ಸಾಗುತಿರುವನು
ಸುದೂರ ಪಯಣಕೆ
ಸಜ್ಜಾಗಿಹನಿದೊ
ಯಾತ್ರಿಕನು
ಮುಖಕೆಲ್ಲಕು
ಮತ್ತೆ ಮತ್ತೆ
ಅಪ್ಪಳಿಸಿದೆ
ಹೇಮಂತದ ಹಿಮವು !

೨

ಪೂರ್ವ ದಿಗಂಗನೆ ಮೊಗ
ಕೆಂಪೇರಿದೆ
ಈ ಹೊಚ್ಚನೆ ಹೊಸ ಹಗಲಲಿ !
ನಿಶೆಯ ಕೊನೆಯ ತೆರೆಯದು
ಪೂರ್ಣ ಸರಿದಿದೆ

ಬಿತ್ತರದ ಬಾನೆದೆಯಲಿ
ಉಲ್ಲಾಸದ
ನಸುಬಿಸುಪಿನ
ಹೊಸಗಾಳಿಯು ಬೀಸಿದೆ
ಹಾದಿಯಲ್ಲಿ ಹೆಜ್ಜೆ ಸವೆಸಿ
ಸಾಗಿರುವವನ ಹೃದಯದಲ್ಲು
ಹೊಮ್ಮುತ್ತಿದೆ
ಕಾವ್ಯದ ಆವೇಶ !

## 3. ಮೋಡ ಕರಗಿದಂದು....

ಸೃಷ್ಟಿಯಲ್ಲಿ ಎಲ್ಲವೂ
ಕ್ರಮಗತಿಯಲಿ ಅರಳುವುದು
ಇರುವೆ ನಿಯತಿಯ ನಿಯಮವು !
ನಿಡುಗಾಲದ ಮಳೆಯು ಕಳೆದು
ಇದಿಗೊ ಬಂದಿದೆ
ಸೊಗದ ಸೊಬಗಿನ
ಹಗಲಿದು !
ಒಂದೆ ಕ್ಷಣದಲಿ
ತಿರೆಯು ತೊಯ್ದಿಹ
ವಸನ ತೊರೆದು
ತೊಟ್ಟಳಾಗಲೆ ಹೊಳೆವ
ಹೊನ್ನಿನ ಹಚ್ಚಡ !
ಎಳೆ ಬಿಸಿಲಿಗೆ
ಸುಳಿಗಾಳಿಗೆ
ಸುಮಗಳಿರಳಿನಗುತಿವೆ !
ಎತ್ತರಕ್ಕೆ
ಬೆಳೆದು ನಿಂತಹ
ಮರದ ಕೊಂಬೆಗಳಲ್ಲಿ ಆಗಲೆ

ಹಕ್ಕಿ ಹಾಡನು ಹಾಡಿವೆ !
ಹಿಗ್ಗು ತುಂಬಿದೆ
ವಿಶ್ವದೆಲ್ಲೆಡೆ
ಅಂತೆ ಮನುಜನ ಹೃದಯದಿ !
ಕಹಿಯು ಹಿಂದೆಯೆ
ಸಿಹಿಯು ಕಾಂಬುದು
ಇದುವೆ ನಿಯತಿಯ ರೀತಿಯು !

# ಟೋಬಾ ಟೇಕ್‌ಸಿಂಗ್

ಉರ್ದು ಮೂಲ : ಸಾದತ್ ಹಸನ್ 'ಮಂಟೋ'
ಅನುವಾದ : ಎಂ. ಎನ್. ವ್ಯಾಸರಾವ್

ಇಂಡಿಯಾ, ಪಾಕೀಸ್ತಾನ ವಿಭಜನೆಯಾದ ನಂತರ ಒಂದೆರಡು ವರ್ಷಗಳಲ್ಲೇ ಈ ಎರಡೂ ರಾಷ್ಟ್ರಗಳಿಗೂ ಒಂದು ಅದ್ಭುತವಾದ ಯೋಚನೆ ಹೊಳೆಯಿತು. ಭಾರತ ಹಾಗೂ ಪಾಕೀಸ್ತಾನದಲ್ಲಿದ್ದ ಸೆರೆಯಾಳುಗಳನ್ನು ಮತ್ತು ಮಾನಸಿಕ ರೋಗಿಗಳನ್ನು ಪರಸ್ಪರ ವರ್ಗಾಯಿಸಬೇಕೆಂದು ತೀರ್ಮಾನಿಸಿದವು. ಭಾರತದಲ್ಲಿರುವ ಮುಸ್ಲಿಮ್ ಹುಚ್ಚರನ್ನು ಪಾಕೀಸ್ತಾನಕ್ಕೂ, ಪಾಕೀಸ್ತಾನದಲ್ಲಿರುವ ಹಿಂದೂ ಮತ್ತು ಸಿಖ್ ಹುಚ್ಚರನ್ನು ಭಾರತಕ್ಕೂ ರವಾನಿಸಬೇಕೆಂದು ಒಪ್ಪಂದ ಮಾಡಿಕೊಂಡವು.

ಈ ರೀತಿಯ ಆಲೋಚನೆ ಎಷ್ಟರಮಟ್ಟಿಗೆ ಸಮಂಜಸವಾದದ್ದು ಎಂದು ನಿರ್ಣಯಿಸುವುದು ತುಂಬ ಕಷ್ಟ. ಆದರೆ ಈ ನಿರ್ಧಾರಕ್ಕೆ ಬರಬೇಕಾದರೆ ಸಾಕಷ್ಟು ಚರ್ಚೆಗಳು ಸಭೆಗಳು ನಡೆದಿದ್ದವು. ಎರಡೂ ರಾಷ್ಟ್ರಗಳ ಉನ್ನತ ಅಧಿಕಾರಿಗಳು ಭಾಗವಹಿಸಿ ಈ ನಿಲುವು ತೆಗೆದುಕೊಂಡಿದ್ದರು. ವರ್ಗಾಯಿಸುವ ದಿನ, ಹಾಗೂ ಅದರ ರೀತಿನೀತಿಗಳನ್ನೂ ಖಚಿತಪಡಿಸಿದ್ದರು. ಭಾರತದಲ್ಲೇ ನೆಲೆಸುತ್ತಿದ್ದು ಇಲ್ಲೇ ಮುಂದುವರಿಸಲು ಇಚ್ಛಿಸಿದ್ದ ಬಹಳಷ್ಟು ಮುಸ್ಲಿಮ್ ಕುಟುಂಬಗಳಿಗೆ ಸಂಬಂಧಿಸಿದಂತೆ ಅನೇಕ ಮನೋರೋಗಿಗಳು ಇದ್ದರು. ಇವರನ್ನೆಲ್ಲ ಆ ಸಂಬಂಧಿಕರ ವಶದಲ್ಲೇ ಬಿಡಬೇಕೆಂದೂ ನಿರ್ಣಯದ ಒಂದು ಭಾಗವಾಗಿತ್ತು. ಉಳಿದವರನ್ನು ಗಡಿಪ್ರದೇಶದವರೆಗೂ ಕರೆದುಕೊಂಡು ಹೋಗಿ ಅಲ್ಲಿ ಪರಸ್ಪರ ವರ್ಗಾಯಿಸುವ ಏರ್ಪಾಟು ನಡೆದಿತ್ತು. ಪಾಕೀಸ್ತಾನದಲ್ಲಿ ಇಲ್ಲಿಯದಕ್ಕಿಂತ ಭಿನ್ನವಾದ ಪರಿಸ್ಥಿತಿ ಇಷ್ಟೊತ್ತಿಗಾಗಲೇ ಉಂಟಾಗಿತ್ತು. ಬಹುಪಾಲು ಹಿಂದೂಗಳು, ಸಿಖ್ಖರು ಭಾರತಕ್ಕೆ ಬಂದು ಬಿಟ್ಟಿದ್ದರಿಂದ ಕೆಲವರನ್ನು ಮಾತ್ರ ವರ್ಗಾಯಿಸುವುದು ಬಾಕಿ ಇತ್ತು.

ಲಾಹೋರಿನ ಹುಚ್ಚರ ದೊಡ್ಡಿಗೆ ವರ್ಗಾವಣೆಯ ಸುದ್ದಿ ತಲುಪಿದಾಗ ಅವರಿಗೆ ಭಾರತದಲ್ಲಿರುವವರ ಪ್ರತಿಕ್ರಿಯೆ ಏನು ಎಂಬುದು ಗೊತ್ತಿರಲಿಲ್ಲ. ಇದರಿಂದಾಗಿ ಹುಚ್ಚರ ದೊಡ್ಡಿಯಲ್ಲಿ ಕೋಲಾಹಲವೆ ಎದ್ದಿತು. ಕಟುವಾಗಿ ಟೀಕಿಸುತ್ತಿದ್ದ

'ಜಮೀನ್ದಾರ್' ಎನ್ನುವ ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದ ಒಬ್ಬ ಮುಸ್ಲಿಮ್ ಹುಚ್ಚನನ್ನು ಒಂದು ಪ್ರಶ್ನೆ ಕೇಳಿದರು—"ಪಾಕೀಸ್ತಾನ್ ಎಂದರೇನು ?" ಅದಕ್ಕೆ ಆ ಹುಚ್ಚ ಬಹಳ ಹೊತ್ತು ಯೋಚಿಸಿ ಹೀಗೆ ಉತ್ತರಿಸಿದ ; "ಇಂಡಿಯಾದಲ್ಲಿ ಅದೊಂದು ಕೊರಳು ಕೊಯ್ಯುವ ಅಸ್ತ್ರಗಳನ್ನು ತಯಾರಿಸುವ ಜಾಗ."

ಅವನ ಅಭಿಪ್ರಾಯವನ್ನು ಕೇಳಿದ ಉಳಿದ ಹುಚ್ಚರು ಸ್ವತಹ ಕಂಡಷ್ಟೇ ಹಿಗ್ಗಿದರು.

ಒಬ್ಬ ಸಿಖ್ ಹುಚ್ಚ ಇನ್ನೊಬ್ಬ ಸಿಖ್ ಹುಚ್ಚನನ್ನು ಕೇಳಿದ : "ಸರ್‌ದಾರ್‌ಜಿ ನಮ್ಮನ್ನೇಕೆ ಇಲ್ಲಿಂದ ಭಾರತಕ್ಕೆ ಕಳುಹಿಸುತ್ತಿದ್ದಾರೆ ? ನಮಗೆ ಆ ದೇಶದ ಭಾಷೆಯೇ ಗೊತ್ತಿಲ್ಲ."

ಅದಕ್ಕೆ ಆ ಹುಚ್ಚ ನಗುತ್ತಾ ಹೇಳಿದ : "ನನಗೆ ಆ 'ಹಿಂದೂಸ್ತರಾಸ್' ಭಾಷೆ ಚೆನ್ನಾಗಿ ಗೊತ್ತು. ಈ ದೆವ್ವಗಳೆಲ್ಲ ತಾವೇ ಈ ಭೂಮಿಯ ಒಡೆಯರು ಅನ್ನೋಹಾಗೆ ಮೆರೀತಾ ಇವೆ" ಎಂದ.

ಒಂದು ದಿನ ಒಬ್ಬ ಮುಸ್ಲಿಮ್ ಹುಚ್ಚ ಸ್ನಾನ ಮಾಡ್ತಾ ಇದ್ದಾಗ, "ಪಾಕೀಸ್ತಾನ್ ಜಿಂದಾಬಾದ್" ಎಂದು ಕೂಗುತ್ತಿದ್ದ. ಅವನು ಎಷ್ಟು ಉತ್ಸಾಹದಿಂದ ಕೂಗ್ತಾ ಇದ್ದಾಂದ್ರೆ ಕಾಲು ಜಾರಿದ್ದೂ ಗೊತ್ತಾಗ್ಲಿಲ್ಲ. ಬಹಳ ಹೊತ್ತಿನತನಕ ಅವನು ಕಾಣದೆ, ಕಡೆಗೆ ಹುಡುಕಿದರೆ, ಬಚ್ಚಲಲ್ಲಿ ಆಯತಪ್ಪಿ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದು ಗೊತ್ತಾಯಿತು.

ಹಾಗೆ ನೋಡಿದರೆ ಅಲ್ಲಿದ್ದವರೆಲ್ಲರೂ ಹುಚ್ಚರೇನಲ್ಲ. ಬುದ್ಧಿ ಚೆನ್ನಾಗಿದ್ದವರೂ ಆರೋಗ್ಯ ಹೊಂದಿದ ದೃಢಕಾಯಿಗಳೂ ಇದ್ದರು. ಆದರೆ ಅವರೆಲ್ಲ ಕೊಲೆಗಡುಕರು ! ಕೊಲೆ ಮಾಡಿದ ಆರೋಪದ ಮೇಲೆ, ಗಲ್ಲುಗಂಬಕ್ಕೆ ಏರಲಿದ್ದ ಅವರನ್ನು ಆ ಶಿಕ್ಷೆಯಿಂದ ಅವರ ಸಂಬಂಧಿಕರು ತಪ್ಪಿಸಿದ್ದರು. ಅಧಿಕಾರಿಗಳಿಗೆ ಸಾಕಷ್ಟು ಲಂಚ ತಿನ್ನಿಸಿದ್ದರಿಂದ ಅವರುಗಳೆಲ್ಲ ಶಿಕ್ಷೆಯಿಂದ ಬಚಾವಾಗಿದ್ದರು. ಅವರುಗಳನ್ನು ಈ 'ಹುಚ್ಚರ ದೊಡ್ಡಿಗೆ' ತಳ್ಳಿದ್ದರು. ಇವರುಗಳಿಗೆ ಪಾಕೀಸ್ತಾನ ಎಲ್ಲಿದೆ ? ಇಂಡಿಯಾ ಒಡೆದಿದ್ದೇಕೆ ಎಂಬುದರ ಅಸ್ಪಷ್ಟ ಕಲ್ಪನೆ ಇದ್ದಿತ್ತಾದರೂ, ಸದ್ಯದ ಪರಿಸ್ಥಿತಿಯಿಂದಾಗಿ ತೆಪ್ಪಗಿದ್ದರು.

ಈ ವಿಚಾರದಲ್ಲಿ ಪತ್ರಿಕೆಗಳೂ ಪ್ರಯೋಜನಕ್ಕೆ ಬರಲಿಲ್ಲ. ಕಾವಲು ಪಡೆಯವರು ದಡ್ಡರೇನಾಗಿರಲಿಲ್ಲ. ಓದುಬರಹ ತಿಳಿದವರೆ. ಆದರೆ ಇದರ ಬಗ್ಗೆ ತಿಳಿವಳಿಕೆ ಇರಲಿಲ್ಲ. ತಮಗೆ ಆಗಾಗ ಸುದ್ದಿ ಮುಟ್ಟಿಸುತ್ತಿದ್ದ ಜನರೂ ಸಹ ಹೇಳಲಿಲ್ಲ. ಯಾವೋನೊ ಒಬ್ಬ ಒಂದುಸಲ ಹೇಳಿದ್ದ. "ಮೊಹಮದ್ ಆಲಿ ಜಿನ್ನಾನೋ ಅಥವಾ ಖಯಾದ್-ಎ-ಅಜಾಮ್ ಎನ್ನುವನೋ ಮುಸ್ಲಿಮ್ ಜನಕ್ಕೋಸ್ಕರ ಬೇರೆ ದೇಶಾನೇ ಕಟ್ತಾನಂತೆ. ಅದರ ಹೆಸರು ಪಾಕೀಸ್ತಾನವಂತೆ" ಎಂದಿದ್ದ.

ಆದರೆ ಈ ಪಾಕೀಸ್ತಾನ ಎಲ್ಲಿದೆ ? ಎಂಬುದು ಮಾತ್ರ ಯಾರಿಗೂ ಗೊತ್ತಿರಲಿಲ್ಲ. ಹೀಗಾಗಿ ಒಳಗಿದ್ದ ಹುಚ್ಚರಿಗೆ ಹಾಗೂ ಅರೆಹುಚ್ಚರಿಗೆ ತಾವಿರುವುದು ಭಾರತದಲ್ಲೋ ಅಥವಾ ಪಾಕೀಸ್ತಾನದಲ್ಲೋ ಎಂಬುದು ಕರಾರುವಾಕ್ಕಾಗಿ ತಿಳಿದಿರಲಿಲ್ಲ. ತಾವು ಭಾರತದಲ್ಲೇ ಇದ್ದೀವಿ ಎಂದು ಹೇಳುವುದಾದರೆ, ಈ ಭೂಮಿಮೇಲೆ ಆ ಪಾಕೀಸ್ತಾನ ಎಲ್ಲಿದೆ ? ಒಂದು ವೇಳೆ ತಾವು ಇರೋದು ಪಾಕೀಸ್ತಾನವಾದರೆ ನಿನ್ನೆ ಮೊನ್ನೆತನಕ ಅದು ಹೇಗೆ ಭಾರತವಾಗಿತ್ತು ?

ಒಬ್ಬ ಹುಚ್ಚನಿಗೆ ಈ ಇಂಡಿಯಾ-ಪಾಕೀಸ್ತಾನ್, ಪಾಕೀಸ್ತಾನ್-ಇಂಡಿಯಾ ಒಗಟು ಎಷ್ಟು ತಲೆ ತಿಂದಿತ್ತೂಂದ್ರೆ, ಅವನು ಒಂದ್ಸಲ ದಿನ ತಾನು ಗುಡಿಸ್ತಾ ಇದ್ದ ಕಸಬರಿಕೆಯನ್ನೂ ಎಸೆದು ಹೊರಗೆ ಓಡಿ ಒಂದು ಮರ ಹತ್ತಿ ಕೂತುಬಿಟ್ಟ ! ಅಲ್ಲಿಂದಲೇ ಸುಮಾರು ಎರಡು ಗಂಟೆತನಕ ಒಂದೇಸಮ ಇಂಡಿಯಾ-ಪಾಕೀಸ್ತಾನ್ ಬಗ್ಗೆ ಭಾಷಣ ಬಿಗೀತಾ ಕೂತ. ಕಾವಲುಗಾರರು ಅವನನ್ನು ಕೆಳಗೆ ಇಳಿಯೋದಿಕ್ಕೆ ಹೇಳಿದರು. ಪ್ರಯೋಜನವಾಗಲಿಲ್ಲ. ಬದಲು ಇನ್ನೂ ಎರಡು ಕೊಂಬೆ ಮೇಲೇರಿದ. ಅವನಿಗೆ ಶಿಕ್ಷೆಯ ಬೆದರಿಕೆ ಹಾಕಿದರು. ಅವನು ಅಲ್ಲಿಂದಲೇ ಕೂಗಿ ಹೇಳಿದ : "ನನಗೆ ಇಂಡಿಯಾನೂ ಬೇಡ. ಪಾಕೀಸ್ತಾನಾನೂ ಬೇಡ. ನಾನು ಈ ಮರದ ಮೇಲೇ ಇರ್ತೀನಿ."

ಬಹಳ ಹೊತ್ತು ಅವನನ್ನು ಪುಸಲಾಯಿಸಿ ಕಡೆಗೆ ಕೆಳಗಿಳಿಸಿದರು. ಇಳಿದ ಕೂಡಲೆ ಅವನು ತನ್ನ ಹಿಂದೂ ಹಾಗೂ ಸಿಖ್ ಸ್ನೇಹಿತರನ್ನು ತಬ್ಬಿಕೊಂಡು ಗಳಗಳ ಅತ್ತುಬಿಟ್ಟ. ಏಕೆಂದರೆ ಅವರಿಬ್ಬರೂ ಅವನಿಂದ ದೂರವಾಗಿ, ಭಾರತಕ್ಕೆ ಹೋಗುವವರಿದ್ದರು.

ಎಂ.ಎಸ್‌ಸಿ ಮಾಡಿದ ಮುಸ್ಲಿಮ್ ಇಂಜಿನಿಯರ್ ಒಬ್ಬ ಯಾರ ಜೊತೆಗೂ ಬೆರೆಯುತ್ತಿರಲಿಲ್ಲ. ಅವನು ಇಡೀ ದಿನ ತನ್ನ ಪಾಡಿಗೆ ತಾನು ಒಂಟಿಯಾಗಿ ಇರುತ್ತಿದ್ದ. ಕಾಂಪೋಂಡಿನ ವಿಶಾಲವಾದ ಬಯಲಿನಲ್ಲಿ ಆ ತುದಿಯಿಂದ ಈ ತುದಿಯವರೆಗೂ ಒಬ್ಬನೇ ವಾಕ್ ಮಾಡಿಕೊಳ್ಳುತ್ತಿದ್ದ. ಆದರೆ ಅವನಿಗೆ ಸದ್ಯದ ಚರ್ಚೆ ಎಷ್ಟು ಗೊಂದಲವೆಬ್ಬಿಸಿತ್ತೆಂದರೆ ಇದ್ದಕ್ಕಿದ್ದ ಹಾಗೆ ತನ್ನ ಬಟ್ಟೆಗಳನ್ನೆಲ್ಲ ಬಿಚ್ಚಿ ಗಂಟುಕಟ್ಟಿ ಅದನ್ನು ಕೆಲಸಗಾರನಿಗೆ ಒಪ್ಪಿಸಿ, ಅಲ್ಲಿಂದ ಪಾರ್ಕಿನ ಕಡೆಗೆ ಬತ್ತಲಾಗಿ ಓಡಿದ !

ಚನಿಯೋಟ್‌ನಿಂದ ಬಂದಿದ್ದ ಮುಸ್ಲಿಮ್ ಹುಚ್ಚನೊಬ್ಬ ಅಖಿಲ ಭಾರತ ಮುಸ್ಲಿಮ್ ಲೀಗಿನ ಒಂದು ಕಾಲದ ನಿಷ್ಠಾವಂತ ಕಾರ್ಯಕರ್ತನಾಗಿದ್ದವನು. ಅವನಿಗೆ ಸ್ನಾನ ಮಾಡುವುದೇ ಒಂದು ಗೀಳು. ದಿನಕ್ಕೆ ಏನಿಲ್ಲಾ ಎಂದರೂ ಹದಿನೈದು ಹದಿನಾರು ಸಲ ಸ್ನಾನ ಮಾಡುತ್ತಿದ್ದ. ಅಂತಹ ಕಟ್ಟಾ ಸ್ನಾನದಾಳು ಇದ್ದಕ್ಕಿದ್ದಂತೆ ಸ್ನಾನಮಾಡುವುದನ್ನು ನಿಲ್ಲಿಸಿಬಿಟ್ಟು ಎಲ್ಲರ ಮುಂದೆ ನಿಂತು ಘೋಷಿಸಿದ : "ನನ್ನ ಹೆಸರು ಮೊಹಮದ್ ಆಲಿ. ಅಂದರೆ ಖಯಾದ್-ಎ-ಆಜಾಮ್ ಮೊಹಮದ್ ಆಲಿ

ಜಿನ್ನಾ" ಎಂದು. ಇದನ್ನು ಕೇಳಿಸಿಕೊಂಡ ಒಬ್ಬ ಸರ್ದಾರ್ಜಿಗೆ ಸಿಟ್ಟು ಬಂತು. ಅವನು ಅದಕ್ಕೆ ಪ್ರತಿಯಾಗಿ ಕೂಗಿಕೊಂಡ : "ನನ್ನ ಹೆಸರು ಮಾಸ್ಟರ್ ತಾರಾಸಿಂಗ್. ನಾನು ಸಿಖ್ ಜನಾಂಗದ ನಾಯಕ." ಈ ಇಬ್ಬರ ನಾಯಕತ್ವಗಳನ್ನು ಬೆಂಬಲಿಸುವ ಹುರುಪು ಉಳಿದವರಿಗೆ ಎಷ್ಟಿತ್ತೆಂದರೆ ಪರಸ್ಪರ ದೂಷಿಸುತ್ತಾ, ಹೊಡೆದಾಡುತ್ತಾ ಒಬ್ಬರಿಗೊಬ್ಬರು ಚೆಚ್ಚತೊಡಗಿದರು. ಇದ್ದಕ್ಕಿದ್ದ ಹಾಗೆ ಉಂಟಾದ ಗಲಭೆ ಹುಚ್ಚರ ದೊಡ್ಡಿಯಲ್ಲಿ ಕೋಲಾಹಲವೆಬ್ಬಿಸಿದ್ದಲ್ಲದೆ ಎರಡು ಕೋಮುಗಳ ನಡುವೆ ದ್ವೇಷದ ಕಿಚ್ಚು ಹೊತ್ತಿಕೊಂಡು ದೊಡ್ಡ ಕಾಳಗ ನಡೆಯಿತು. ತಕ್ಷಣ ಎಚ್ಚೆತ್ತ ಅಧಿಕಾರಿಗಳು ಪರಿಸ್ಥಿತಿಯನ್ನು ಹತೋಟಿಗೆ ತಂದು ಅವರನ್ನೆಲ್ಲ ಹಿಡಿದು ಬೇರೆಬೇರೆ ಕೋಣೆಗಳಲ್ಲಿ ತಳ್ಳಿಕೂಡಿ ಹಾಕಿದರು.

ಅಲ್ಲೊಬ್ಬ ಯುವಕ ವಕೀಲನಿದ್ದ. ಲಾಹೋರಿನಿಂದ ಬಂದಿದ್ದ. ಅವನೊಬ್ಬ ಭಗ್ನಪ್ರೇಮಿ. ಬುದ್ಧಿಭ್ರಮಣೆಗೆ ಒಳಗಾಗಿದ್ದ. ಅವನಿಗೆ ಅಮೃತಸರ ಭಾರತಕ್ಕೆ ಸೇರಿಹೋಗಿದ್ದ ವಿಷಯ ತಿಳಿದುಹೋಗಿತ್ತು. ತನ್ನ ಆ ಹುಚ್ಚಿನಲ್ಲೂ ಅವನಿಗೆ ಪ್ರೇಯಸಿಯ ನೆನಪಾಗಿ ಒದ್ದಾಡತೊಡಗಿದ. ಕಾರಣ ಅವನ ಪ್ರೇಯಸಿ ಅಮೃತಸರದಲ್ಲಿದ್ದಳು. ಆ ಕ್ಷಣದಿಂದ ಅವನು ಎರಡೂ ಕಡೆಯ ನಾಯಕರುಗಳನ್ನು ಎದ್ವಾತದ್ವಾ ಬೈಯಲಾರಂಭಿಸಿದ. ಅವರ ಸ್ವಾರ್ಥದಿಂದಾಗಿ ತಾನೊಂದು ಕಡೆ ಪಾಕಿಸ್ತಾನದಲ್ಲೂ, ತನ್ನ ಪ್ರೇಯಸಿ ಇನ್ನೊಂದು ಕಡೆ ಭಾರತದಲ್ಲೂ ಬೇರೆ ಬೇರೆ ಉಳಿಯಬೇಕಾಯಿತಲ್ಲ ಎಂದು ಚಿಂತೆಗೆ ಒಳಗಾಗಿದ್ದ,

ಹುಚ್ಚರ ದೊಡ್ಡಿಗೆ, ಪರಸ್ಪರ ವರ್ಗಾಯಿಸುವ ಸುದ್ದಿ ಮುಟ್ಟಿದಾಗ ಅವನ ಗೆಳೆಯರು ಅವನ ಹತ್ತಿರ ಬಂದು, "ಇನ್ನೇನು ಭಯವಿಲ್ಲ ನಿನ್ನನ್ನು ನಿನ್ನ ಪ್ರೇಯಸಿ ಇರುವ ಅಮೃತಸರಕ್ಕೆ ಕಳಿಸುತ್ತಾರೆ ಎಂದು ಹೇಳಿದರು." ಅದುವರೆವಿಗೂ ತನ್ನ ಪ್ರೇಯಸಿಯ ಚಿಂತೆಯಲ್ಲೇ ಇದ್ದ ಆ ವಕೀಲ ಅವರಿಗೆ ಈ ರೀತಿ ಉತ್ತರಿಸಿದ. "ಯಾಕೆ ನನ್ನನ್ನು ಲಾಹೋರ್‌ನಿಂದ ಬಿಟ್ಟು ಓಡಿಸಬೇಕು ? ಇಲ್ಲೇ ನನ್ನ ವಕೀಲಿ ವೃತ್ತಿ ಚೆನ್ನಾಗಿ ನಡೀತಿದೆ. ಅಮೃತಸರಕ್ಕೆ ಹೋದರೆ ಮತ್ತೆ ಮೊದಲಿನಿಂದ ನಾನು ಪ್ರಾರಂಭಿಸಬೇಕು. ಉಹ್ಞೂಂ ನಾನು ಲಾಹೋರ್ ಬಿಟ್ಟು ಎಲ್ಲೂ ಹೋಗಲ್ಲ" ಎಂದು ಹಟ ಹಿಡಿದು ಕೂತ.

ಯೂರೋಪಿಯನ್ ವಾರ್ಡಿನಲ್ಲಿ ಇಬ್ಬರು ಆಂಗ್ಲೋ-ಇಂಡಿಯನ್ ಹುಚ್ಚರಿದ್ದರು. ಬ್ರಿಟೀಷರು ಭಾರತಕ್ಕೆ ಸ್ವಾತಂತ್ರ್ಯ ನೀಡಿ, ಭಾರತವನ್ನು ಬಿಟ್ಟು ಹೋಗುತ್ತಾರೆ ಎನ್ನುವ ಸುದ್ದಿ ಅವರಿಗೆ ತಿಳಿದಾಗ ಅವರಿಬ್ಬರೂ ಇಡೀ ದಿನ ಗುಸುಗುಸು ಮಾತನಾಡುತ್ತಲೇ ಇದ್ದರು. ಮುಂದಾಗುವ ಬದಲಾವಣೆಯಿಂದ ತಮ್ಮ ಸ್ಥಿತಿ ಅಧೋಗತಿಗೆ ಇಳಿಯುತ್ತದೆ ಎಂದು ಹೆದರಿದ್ದರು. ಭಾರತ ಸ್ವಾತಂತ್ರ್ಯ ಪಡೆದ ನಂತರ, ತಮ್ಮನ್ನು ಯೂರೋಪಿಯನ್ ವಾರ್ಡಿನಲ್ಲೇ ಇಡುತ್ತಾರೋ ಇಲ್ಲ ಆ ವಾರ್ಡನ್ನೇ ಕಿತ್ತುಹಾಕುತ್ತಾರೊ ಎನ್ನುವ ಅನುಮಾನ ಕಾಡುತ್ತಿತ್ತು. ಜೊತೆಗೆ,

ತಮಗೆ ಇದುವರೆವಿಗೂ ಸಿಗುತ್ತಿದ್ದ ಬೆಳಗಿನ ಉಪಹಾರ ಮುಂದೆಯೂ ಸಿಕ್ಕುತ್ತದೊ ಅಥವಾ ಎಲ್ಲರಂತೆ ತಾವು ಆ ದರಿದ್ರ ಚಪಾತಿಯನ್ನೇ ತಿನ್ನಬೇಕೋ ಎನ್ನುವುದು ಅವರ ಕೊರಗು.

ಹುಚ್ಚರ ದೊಡ್ಡಿಯಲ್ಲಿ ಮತ್ತೊಬ್ಬ ಸಿಖ್ ಹುಚ್ಚನಿದ್ದ. ಕಳೆದ ಹದಿನೈದು ವರ್ಷಗಳಿಂದಲೂ ಅವನು ಹುಚ್ಚರದೊಡ್ಡಿಯಲ್ಲೇ ಕೊಳೆಯುತ್ತಿದ್ದ. ಅವನು ಮಾತ ನಾಡುತ್ತಿದ್ದುದು ಯಾರಿಗೂ ಅರ್ಥವಾಗುತ್ತಿರಲಿಲ್ಲ. ವಿಚಿತ್ರವಾದ ಶಬ್ದಗಳು ಹೊರಬರುತ್ತಿದ್ದವು :

"ಅಲ್ಲಿರುವುದು ನಮ್ಮ ಮನೆ. ಇಲ್ಲಿ ಬಂದೆ ಸುಮ್ಮನೆ. ಅಲ್ಲಿ ಇಲ್ಲಿ ಎಲ್ಲಾ ಒಂದೇನೇ..."

ಈ ಮಾತುಗಳನ್ನು ಕೇಳಿದ ಉಳಿದವರಿಗೆ, ಕಾವಲು ಪಡೆಯುವರು ಆತನ ಬಗ್ಗೆ ಅನುಕಂಪದಿಂದ ಹೇಳುತ್ತಿದ್ದರು. "ಪಾಪ, ಅವನು ಹದಿನೈದು ವರ್ಷದಿಂದ ಒಂದು ಕ್ಷಣಾನೂ ಮಲಗೇ ಇಲ್ಲ. ಒಂದೊಂದು ಸಲ ಗೋಡೆಗೆ ಒರಗಿ ನಿಂತಿರೋದು ಬಿಟ್ರೆ ಉಳಿದ ಸಮಯವೆಲ್ಲ ಹೀಗೇ ನಿಂತಿರ್ತಾನೆ. ನೋಡಿ ಅವನ ಎರಡು ಕಾಲು ಹೇಗೆ ಊದಿಕೊಂಡಿವೆ. ಅದರ ಬಗ್ಗೆ ಅವನಿಗೆ ಜ್ಞಾನಾನೇ ಇಲ್ಲ" ಎಂದು. ಇತ್ತೀಚೆಗೆ, ಭಾರತ-ಪಾಕೀಸ್ತಾನಗಳ ನಡುವೆ ಆಗಲಿರುವ ಹುಚ್ಚರ ವರ್ಗಾವಣೆಯ ವಿಷಯವನ್ನು ಅವನೂ ಕೇಳಿಸಿಕೊಂಡಿದ್ದ. ಕೆಲವರು ಅವನ ಅಭಿಪ್ರಾಯ ಕೇಳಿದರು. ಅದಕ್ಕೆ ಅವನು ಅವಧೂತನಂತೆ ಉದ್ಗರಿಸಿದ್ದ, "ಅಲ್ಲಿರುವುದು ನಮ್ಮ ಮನೆ. ಇಲ್ಲಿ ಬಂದೆ ಸುಮ್ಮನೆ. ಪಾಕೀಸ್ತಾನ ಯಾರ ಮನೆ ? ಎಲ್ಲಿರುವುದು ತೌರುಮನೆ ?"

ಕಡೆಗೂ ಪಾಕೀಸ್ತಾನದ ಸರ್ಕಾರವನ್ನು 'ಟೋಬಾ ಟೇಕ್‌ಸಿಂಗ್' ಸರ್ಕಾರ ಬದಲಾಯಿಸಿತು. 'ಟೋಬಾ ಟೇಕ್‌ಸಿಂಗ್' ಪಂಜಾಬಿನ ಒಂದು ಸಣ್ಣ ಗ್ರಾಮ. ಆ ಸಿಖ್ ಹುಚ್ಚ ಈ ಗ್ರಾಮಕ್ಕೆ ಸೇರಿದವನು. ಅವನು ಎಲ್ಲರನ್ನೂ ಕೇಳುತ್ತಿದ್ದುದು ಒಂದೇ ಪ್ರಶ್ನೆ : ಟೋಬಾ ಟೇಕ್‌ಸಿಂಗ್ ಎಲ್ಲಿದೆ ? ಭಾರತದಲ್ಲೆ ? ಪಾಕೀಸ್ತಾನದಲ್ಲೆ ?" ಇದರ ಬಗ್ಗೆ ಯಾರಿಗೂ ಗೊತ್ತಿಲ್ಲದಿದ್ದರಿಂದ ಯಾರೂ ಉತ್ತರಿಸಲಿಲ್ಲ.

ಈ ಒಗಟನ್ನು ಯಾರೇ ಬಿಡಿಸಹೊರಟರು ಅವರಿಗೆ ನಿರಾಶೆಯೇ ಕಾದಿರು ತ್ತಿತ್ತು. ಜೊತೆಗೆ ಹೊಸ ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುತ್ತಿದ್ದವು. ಭಾರತದಲ್ಲೇ ಇದ್ದ ಸಿಯಾಲ್‌ಕೋಟ್ ಈಗ ಪಾಕೀಸ್ತಾನಕ್ಕೆ ಸೇರಿಹೋಗಿತ್ತು. ಲಾಹೋರ್ ಬಗ್ಗೆ ಯಾರೇ ಊಹಿಸಬಹುದಿತ್ತು. ಸದ್ಯಕ್ಕೆ ಪಾಕೀಸ್ತಾನದಲ್ಲಿದ್ದರೂ, ಯಾವ ಕ್ಷಣದಲ್ಲಾ ದರೂ ಅದು ಭಾರತದ ಕಡೆ ಜಾರಿಕೊಳ್ಳಬಹುದು. ಇಡೀ ಭಾರತದ ಉಪಖಂಡವೇ ಪಾಕೀಸ್ತಾನವಾದರೂ ಹೆಚ್ಚೇನಲ್ಲ. ಅಷ್ಟೇ ಯಾಕೆ ? ಭಾರತ-ಪಾಕೀಸ್ತಾನಗಳೇ ಜಗತ್ತಿನ ಭೂಪಟದಿಂದ ಅಳಿಸಿಹೋಗೊಲ್ಲಾಂತ ಯಾರು ಹೇಳಬಲ್ಲರು ?

ಆ ಸಿಖ್ ಮುದಿಯನ ತಲೆಗೂದಲೆಲ್ಲ ಉದುರಿ ಹೆಚ್ಚೂ ಕಡಿಮೆ ಬೋಳಾ ಗಿತ್ತು. ಉಳಿದಿದ್ದ ಅಷ್ಟು ಇಷ್ಟು ಕೂದಲು ಗಡ್ಡದ ಜೊತೆ ಬೆರೆತುಹೋಗಿತ್ತು.

ನೋಡುವುದಕ್ಕೆ ವಿಚಿತ್ರವಾಗಿ ಕಾಣಿಸುತ್ತಿದ್ದ. ಭಯಂಕರವಾಗಿದ್ದ. ಹಾಗಿದ್ದರೂ ಆತ ನಿರುಪದ್ರವಿ. ಯಾರ ಜೊತೆಗೂ ಸೇರುತ್ತಿರಲಿಲ್ಲ. ಜಗಳ ಕಾಯುತ್ತಿರಲಿಲ್ಲ. ಹುಚ್ಚರ ದೊಡ್ಡಿಯ ಹಳೆಯ ಹಿರಿಯ ಜವಾನರಿಗೆ ಅವನ ಬಗ್ಗೆ ತಿಳಿದಿತ್ತು. ಅವನು ಟೋಬಾ ಟೇಕ್‌ಸಿಂಗ್ ಗ್ರಾಮದ ಬಹುದೊಡ್ಡ ಜಮೀನ್ದಾರನಾಗಿದ್ದ. ಇದ್ದಕ್ಕಿದ್ದ ಹಾಗೆ ಹುಚ್ಚು ಹಿಡಿದಿತ್ತು. ಅವನ ಮನೆಯವರು ಹೆಡೆಮುರಿ ಕಟ್ಟಿ ಎಳೆದುಕೊಂಡು ಬಂದು ಇಲ್ಲಿಗೆ ಸೇರಿಸಿದ್ದರು. ಇದೆಲ್ಲ ನಡೆದದ್ದು ಹದಿನೈದು ವರ್ಷಗಳ ಹಿಂದೆ.

ತಿಂಗಳಿಗೊಮ್ಮೆ ಕೆಲವರು ಅವನನ್ನು ಕಾಣಲು ಬರುತ್ತಿದ್ದರು. ಪಂಜಾಬಿನಲ್ಲಿ ಇತ್ತೀಚೆಗೆ ನಡೆದ ಕೋಮುಗಲಭೆಯಿಂದಾಗಿ ಈಗ ಯಾರೂ ಬರುತ್ತಿಲ್ಲ. ಅವನ ನಿಜವಾದ ಹೆಸರು ಬಿಷನ್‌ಸಿಂಗ್. ಆದರೆ ಎಲ್ಲರೂ ಅವನನ್ನು 'ಟೋಬಾ ಟೇಕ್‌ಸಿಂಗ್' ಎಂದೇ ಕರೆಯುತ್ತಿದ್ದರು. ಅವನಿಗೆ ವಿಪರೀತ ಮರೆವು. ದಿನ, ವಾರ ತಿಂಗಳು ಯಾವುದೂ ಗೊತ್ತಾಗದ ಸ್ಥಿತಿಯಲ್ಲಿ ಅವನು ಬದುಕಿದ್ದ. ಇಲ್ಲಿಗೆ ಬಂದು ಎಷ್ಟು ವರ್ಷಗಳಾಯಿತು ಎಂಬುದೂ ಅವನಿಗೆ ಗೊತ್ತಿರಲಿಕ್ಕಿಲ್ಲ. ಆದರೆ ಅವನಿಗೆ ವಿಚಿತ್ರವಾದ ಸೂಚನೆಗಳು ಕಾಣಿಸಿಕೊಳ್ಳುತ್ತಿದ್ದವು. ಅವನ ಆರನೇ ಇಂದ್ರಿಯದ ಅನುಭವ ನಿಜಕ್ಕೂ ಅದ್ಭುತವಾದದ್ದು. ತನ್ನನ್ನು ಕಾಣಲು ಯಾರೋ ಬರುತ್ತಾರೆ ಎಂಬುದು ಅವನಿಗೆ ಹೊಳೆಯುತ್ತಿತ್ತು. ಆದಿನ ಅವನು ಸೋಪುಹಚ್ಚಿ ಸ್ನಾನಮಾಡಿ ಒಗೆದ ಬಟ್ಟೆ ತೊಟ್ಟುಕೊಳ್ಳುತ್ತಿದ್ದ. ಬಂದವರೊಡನೆ ಮಾತನಾಡುತ್ತಿರಲಿಲ್ಲ. ಆದರೆ ಯಥಾಪ್ರಕಾರ ಅವನ ಬಾಯಿಂದ ಹೊರಡುತ್ತಿದ್ದ ಮಾತುಗಳೆಂದರೆ, "ಅಲ್ಲಿರುವುದು ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ..." ಇತ್ಯಾದಿ.

ಹದಿನೈದು ವರ್ಷದ ಹಿಂದೆ ಅವನನ್ನು ಇಲ್ಲಿಗೆ ಸೇರಿಸುವಾಗ ಅವನಿಗೆ ಹೆಣ್ಣು ಮಗುವೊಂದಿತ್ತು. ಈಗ ಅವಳಿಗೆ ಹದಿನೈದು ವರ್ಷ ತುಂಬಿ ಸುಂದರವಾಗಿ ಬೆಳೆದಿದ್ದಾಳೆ. ಯಾವಾಗಲಾದರೂ ಒಮ್ಮೆ ಆ ಹುಡುಗಿ ಇಲ್ಲಿಗೆ ಬರುತ್ತಾಳೆ. ಬಂದವಳೇ ತನ್ನ ತಂದೆಯ ಎದುರು ಕುಳಿತುಕೊಳ್ಳುತ್ತಾಳೆ. ಅವನು ಅವಳನ್ನು ಮಾತನಾಡಿಸುವುದಿಲ್ಲ. ತನ್ನದೇ ಪ್ರಪಂಚದಲ್ಲಿ ಮುಳುಗಿರುತ್ತಾನೆ. ಅವಳಿಗೆ ದುಃಖ ಒತ್ತರಿಸಿ ಬಂದು ಬಿಕ್ಕುತ್ತಾಳೆ. ಕೆನ್ನೆಯಮೇಲೆ ನೀರು ಇಳಿಯುತ್ತದೆ. ಆದರೆ ಆ ತಂದೆಗೆ ಮಗಳ ಮೇಲಿನ ಅರಿವೇ ಇಲ್ಲದಂತೆ ಸುಮ್ಮನೆ ನಿಂತಿರುತ್ತಾನೆ. ಆ ಹುಡುಗಿ ಮತ್ತಷ್ಟು ದುಃಖತಪ್ತಳಾಗಿ ಅಪ್ಪನನ್ನೇ ನೋಡುತ್ತಾ ಕೂತಿರುತ್ತಾಳೆ.

ಇಂಡಿಯಾ-ಪಾಕೀಸ್ತಾನ ಎನ್ನುವ ಕಗ್ಗಂಟಿನಿಂದ ಉಂಟಾದ ಗೊಂದಲದಿಂದಾಗಿ ಅವನು, ತನ್ನನ್ನು ಕಾಣಲು ಬಂದ ಎಲ್ಲರನ್ನೂ ಟೋಬಾಟೇಕ್‌ಸಿಂಗ್ ಎಲ್ಲಿದೆ ? ಎಂದು ಕೇಳದ ದಿನವೇ ಇಲ್ಲ. ಯಾರಿಂದಲೂ ಅವನಿಗೆ ಸರಿಯಾದ ಉತ್ತರ ಸಿಕ್ಕಿಲ್ಲ. ಯಾಕೆಂದರೆ ಅವರಿಗೇ ಗೊತ್ತಿರಲಿಲ್ಲ. ಈಗೀಗ ಬರುತ್ತಿದ್ದವರೂ ಬರುತ್ತಿಲ್ಲ. ಅವನ ಚಡಪಡಿಕೆ ಜಾಸ್ತಿಯಾಗಿದೆ. ಆರನೇ ಇಂದ್ರಿಯದ ಅನುಭವವೂ ಕ್ಷೀಣಿಸುತ್ತಿದೆ. ಹಾಗಾಗಿ ಇದ್ದಲ್ಲೇ ವಟಗುಟ್ಟುತ್ತಾ ಇರುತ್ತಾನೆ.

ಅವನ ಕುಟುಂಬದವರೂ ಬರುತ್ತಿಲ್ಲ. ಅವರು ತರುತ್ತಿದ್ದ ಅಂಗಿ, ವಸ್ತ್ರ ತಿಂಡಿ ಎಲ್ಲವೂ ಅಲ್ಲಿಗೆ ನಿಂತುಹೋಯಿತು. ಅವರು ತೋರುತ್ತಿದ್ದ ಸಹಾನುಭೂತಿ, ಪ್ರೀತಿ ಯಾವುದೂ ಈಗ ಸಿಗುತ್ತಿಲ್ಲ. ಅವನಿಗೆ ಇದ್ದ ಒಂದೇ ಒಂದು ಆಸೆ ಎಂದರೆ, ಅವರೇನಾದರೂ ಬಂದರೆ, ಖಂಡಿತಾ ಟೋಬಾಟೇಕ್‌ಸಿಂಗ್ ಎಲ್ಲಿದೆ ಎಂಬುದನ್ನು ತನಗೆ ತಿಳಿಸೇ ತಿಳಿಸುತ್ತಾರೆ ಎಂದು. ಎಷ್ಟಾದರೂ ಅದು ತನ್ನ ಊರು. ಹೀಗೇ ದಿನಗಳು ಕಳೆಯುತ್ತಿವೆ.

ಹುಚ್ಚರ ದೊಡ್ಡಿಯಲ್ಲಿ ಒಬ್ಬ ಹುಚ್ಚ ತನ್ನನ್ನು 'ದೇವರು' ಎಂದು ಕರೆದು ಕೊಳ್ಳುತ್ತಿದ್ದ. ಅವನನ್ನು ಬಿಷನ್ ಕೇಳಿದ. "ನೀನು ದೇವರಾದರೆ ನನ್ನ ಟೋಬಾ ಟೇಕ್‌ಸಿಂಗ್ ಪಾಕೀಸ್ತಾನದಲ್ಲಿದೆಯೋ, ಇಂಡಿಯಾದಲ್ಲಿದೆಯೋ ಹೇಳು" ಎಂದ. ಅದಕ್ಕವನು ಈ ರೀತಿ ಅಪ್ಪಣೆ ಕೊಟ್ಟ: "ಅದು ಪಾಕೀಸ್ತಾನದಲ್ಲೂ ಇಲ್ಲ. ಇಂಡಿಯಾ ದಲ್ಲೂ ಇಲ್ಲ. ಯಾಕಂದ್ರೆ ನಾವಿನ್ನೂ ಅದರ ಬಗ್ಗೆ ಯಾವ ಆಜ್ಞೆಯನ್ನೂ ಹೊರಡಿಸಿಲ್ಲ."

ಬಿಷನ್‌ಸಿಂಗ್ ದೇವರಿಗೆ ಬೇಗ ಆಜ್ಞೆ ನೀಡುವಂತೆ ಬೇಡಿಕೊಂಡ. ಆದರೆ ಅವನಿಂದ ಯಾವ ಉತ್ತರವೂ ಬರದಿದ್ದಾಗ ಇವನು ನಿರಾಶೆಗೊಳಗಾದ. 'ದೇವರು' ಬೇರೆ ಬೇರೆ ವಿಷಯಗಳಲ್ಲಿ ಮುಳುಗಿಹೋಗಿದ್ದರಿಂದ ಮೌನವಹಿಸಿದ್ದ. ಬಿಷನ್‌ಸಿಂಗ್‌ಗೆ ಕೋಪ ನೆತ್ತಿಗೇರಿತು. ತನ್ನ ವಿಚಿತ್ರ ಭಾಷೆಯಲ್ಲಿ ಅವನನ್ನು ತರಾಟೆಗೆ ತೆಗೆದುಕೊಂಡ. "ಅಲ್ಲಿ ಮೇಲೆ ಕೂತು ಏನು ಮಾಡುವೆ ಹೇಳು ನೀನೂ ಒಬ್ಬ ದೇವರೆ. ನನ್ನ ದೇವರೆ? ನಿನ್ನ ದೇವರೆ ? ಹೇಳಲಾರದಂಥ ಪಾಪಿ ದೇವರೆ..." ಎಂದು ಒಂದೇ ಸಮನೆ ಒದರಿದ. ಸತ್ಯಸಂಗತಿ ಎಂದರೆ ಬಿಷನ್‌ಸಿಂಗ್ ನಿಜವಾಗಲೂ ಹೇಳಬೇಕೆಂದಿದ್ದುದು, "ನೀನು ನನ್ನ ಪ್ರಾರ್ಥನೆಗೆ ಓಗೊಡುತ್ತಿಲ್ಲ. ಯಾಕೆಂದರೆ ನೀನು ಮುಸ್ಲಿಮ್ ದೇವರು. ನೀನೇ ಸಿಖ್ ದೇವರಾಗಿದ್ದಿದ್ದರೆ ಎಲ್ಲವನ್ನೂ ಹೇಳಿಬಿಡುತ್ತಿದ್ದಿ" ಎಂದು.

* * *

ಹುಚ್ಚರನ್ನು ವರ್ಗಾಯಿಸುವ ದಿನಕ್ಕೆ ಸ್ವಲ್ಪ ದಿನಗಳ ಮುಂಚೆ ಬಿಷನ್‌ಸಿಂಗ್‌ನ ಮುಸ್ಲಿಮ್ ಗೆಳೆಯನೊಬ್ಬ ಅವನನ್ನು ಕಾಣಲು ಬಂದಿದ್ದ. ಕಳೆದ ಹದಿನೈದು ವರ್ಷ ಗಳಲ್ಲಿ ಇದೇ ಮೊದಲ ಸಲ ಅವನು ಬಂದಿದ್ದು. ಬಿಷನ್‌ಸಿಂಗ್ ಅವನನ್ನು ನೋಡು ತ್ತಲೆ ಬೆನ್ನು ತಿರುಗಿಸಿ ನಿಂತ. ಕಾವಲಿದ್ದವನೊಬ್ಬ ಬಿಷನ್‌ಸಿಂಗ್ ಹತ್ತಿರ ಬಂದು, "ಬಿಷನ್, ಇವನು ನಿನ್ನ ಸ್ನೇಹಿತ ಫಜಲ್‌ದಿನ್. ನಿನ್ನನ್ನು ನೋಡೋದಕ್ಕೋಸ್ಕರ ಬಹಳ ದೂರದಿಂದ ಬಂದಿದ್ದಾನೆ" ಎಂದು ಹೇಳಿದ. ಬಿಷನ್ ಅವನನ್ನು ನೋಡಿ ಏನೋ ಗೊಣಗಿಕೊಂಡ. ಫಜಲ್‌ದಿನ್ ತನ್ನ ಗೆಳೆಯನ ಹತ್ತಿರ ಬಂದು ಅವನ ಭುಜವನ್ನು ಆತ್ಮೀಯವಾಗಿ ಹಿಡಿದು, "ಬಿಷನ್ ನಾನು ಫಜಲ್ ನೆನಪಿದ್ಯಾ. ನಿಮ್ಮೂ ರಿಂದ ಬಂದಿದ್ದೀನಿ. ನಿನಗೆ ಒಳ್ಳೆ ಸುದ್ದಿ ತಂದಿದ್ದೀನಿ. ನಿಮ್ಮನೇಲೆಲ್ಲ ಚೆನ್ನಾಗಿದ್ದಾರೆ. ಯಾವ ಕಷ್ಟಕ್ಕೂ ಸಿಕ್ಕದೆ ಅವರೆಲ್ಲ ಭಾರತಕ್ಕೆ ಹೋಗಿದ್ದಾರೆ. ಸ್ನೇಹಿತನಾಗಿ ನಾನೇನು

ಮಾಡಬಹುದಿತ್ತೊ ಅಷ್ಟನ್ನೂ ಮಾಡಿದ್ದೀನಿ. ಅವರಿಗೆ ಇನ್ನೇನೂ ತೊಂದರೆ ಇಲ್ಲ ಎಲ್ಲಾ ಸುಖವಾಗಿದ್ದಾರೆ. ನಿನ್ನ ಮಗಳು ರೂಪಾ ಕೌರ್" ಎಂದು ತನ್ನ ಮಾತನ್ನು ಕ್ಷಣ ತಡೆದು ನಂತರ "ಅವಳೂ ಅಷ್ಟೆ. ಈಗ ಭಾರತದಲ್ಲಿದ್ದಾಳೆ. ತುಂಬಾ ಚೆನ್ನಾಗಿ ದ್ದಾಳೆ" ಎಂದ.

ಬಿಷನ್ ಮಾತಾಡಲಿಲ್ಲ. ಫಜಲ್ ಮುಂದುವರೆಸಿದ. "ನೀನು ಹೇಗಿದ್ದೀಯೋ ನೋಡ್ಕೊಂಡು ಬಾ ಅಂತ ನಿಮ್ಮ ಮನೆಯವರೇ ನನ್ನನ್ನು ಇಲ್ಲಿಗೆ ಕಳಿಸಿದ್ದು. ಅವರಿಗೆಲ್ಲ ನಿನ್ನದೇ ಯೋಚನೆ. ಅದಕ್ಕೇ ನಾನು ಇಲ್ಲಿಗೆ ಬಂದೆ. ನೀನೇನು ಯೋಚಿಸಬೇಡ. ಸದ್ಯದಲ್ಲಿ ನೀನು ಭಾರತಕ್ಕೆ ಹೊರಟುಹೋಗ್ತೀಯಾ. ಇನ್ನೇನು ಹೇಳಲಿ ? ಅಂದ ಹಾಗೆ ಬಲ್‌ಬೀರ್‌ಸಿಂಗ್, ವಿಧವಾಸಿಂಗ್ ಮತ್ತು ಅಮೃತ್ ಕೌರ್ ಹೇಗಿದ್ದಾರೆ ? ಅವರೆಲ್ಲರಿಗೂ ನನ್ನ ನೆನಪು ಕೊಡು. ಬಲ್‌ಬೀರ್‌ಗೆ ಹೇಳು ನಾನು ದೇವರದಯದಿಂದ ಚೆನ್ನಾಗಿದ್ದೀನೀಂತ. ಅವನ ಎಗಡು ಹಸುಗಳಿದ್ವಲ್ಲ...ಕಂದುಬಣ್ಣದ್ದು. ಅವೆರಡೂ ಕರುಹಾಕಿವೆ. ಒಂದು ಕರು ಹುಟ್ಟಿದ ಆರನೇ ದಿನಕ್ಕೇ ಸತ್ತೋಯ್ತು. ಇನ್ನೊಂದು ಚೆನ್ನಾಗಿ ಬೆಳೆದಿದೆ. ಅವರನ್ನೆಲ್ಲ ಯಾವಾಗ್ಲೂ ಜ್ಞಾಪಿಸ್ಕೋತಿರ್ತೀನೀಂತ ಮರೀದೆ ಹೇಳು. ಅವರಿಗೆ ಏನು ಬೇಕಾದ್ರೂ ಒಂದು ಸಾಲು ಪತ್ರ ಬರೆಯೋಕೆ ಹೇಳು. ನನ್ನ ಕೈಲಾದದ್ದನ್ನು ಮಾಡ್ತೀನಿ. ತಗೋ. ನಿನಗೋಸ್ಕರ ಅಕ್ಕಿರೊಟ್ಟಿ ತಂದಿದ್ದೀನಿ ತಿನ್ನು" ಎಂದು ಅವನ ಕೈಗೆ ಬುತ್ತಿ ಗಂಟುಕೊಟ್ಟ. ಬಿಷನ್‌ಸಿಂಗ್ ಅದನ್ನು ತೆಗೆದು ಕೊಂಡು ಆಳಿನ ಕೈಗೆ ಕೊಟ್ಟು ಫಜಲ್ ಕಡೆ ತಿರುಗಿ, ಕೇಳಿದ.

"ಟೋಬಾಟೇಕ್‌ಸಿಂಗ್ ಎಲ್ಲಿದೆ ?"

"ಎಲ್ಲಿದೇ ಅಂದ್ರೆ ? ಮೊದಲು ಎಲ್ಲಿತ್ತೋ ಅಲ್ಲೇ ಇದೆ."

"ಇಂಡಿಯಾದಲ್ಲೋ ? ಪಾಕೀಸ್ತಾನದಲ್ಲೊ ?"

"ಇಂಡಿಯಾದಲ್ಲಿ...ಅಲ್ಲ ಅಲ್ಲ. ಪಾಕೀಸ್ತಾನದಲ್ಲಿ."

ಅದನ್ನು ಕೇಳುತ್ತಿದ್ದಂತೆ ಬಿಷನ್ ಅವನಿಂದ ದೂರ ಹೋಗಿ ನಿಂತುಕೊಂಡ. ಮತ್ತೆ ತನ್ನಷ್ಟಕ್ಕೆ ಗೊಣಗಿಕೊಳ್ಳತೊಡಗಿದ. "ಅಲ್ಲಿರುವುದು ನಮ್ಮ ಮನೆ. ಇಲ್ಲಿ ಬಂದೆ ಸುಮ್ಮನೆ. ಹಿಂದೂಸ್ತಾನ ಪಾಕೀಸ್ತಾನ ಕೂಗುತ್ತಿವೆ ನಿಮ್ಮನ್ನೆ...."

ಫಜಲ್‌ದಿನ್ ಅವನನ್ನೇ ನೋಡುತ್ತ ಅಸಹಾಯಕ ನೋಟ ಬೀರಿದ.

ಇಷ್ಟರ ವೇಳೆಗೆ ಹುಚ್ಚರ ವರ್ಗಾವಣೆಯ ಸಿದ್ಧತೆಗಳು ಭರದಿಂದ ಸಾಗಿದ್ದವು. ಹುಚ್ಚರ ಪಟ್ಟಿ ಸಿದ್ಧವಾಯಿತು. ದಿನ ನಿಗದಿಯಾಯಿತು. ಚಳಿಗಾಲದ ಒಂದು ಸಂಜೆ ಹಿಂದೂ ಮತ್ತು ಸಿಖ್ ಹುಚ್ಚರನ್ನು ತುಂಬಿಕೊಂಡ ಬಸ್ಸುಗಳು ಲಾಹೋರನ್ನು ಬಿಟ್ಟು ವಾಗ್ಹಾಗೆ ತೆರಳಿದವು, ಸಶಸ್ತ್ರ ಪೋಲೀಸರೂ, ವರ್ಗಾಯಿಸುವ ಜವಾಬ್ದಾರಿ ಹೊತ್ತ ಅಧಿಕಾರಿಗಳೂ ಬಸ್ಸಿನಲ್ಲಿದ್ದರು. ವಾಗ್ಹಾ, ಇಂಡಿಯಾ ಪಾಕೀಸ್ತಾನವನ್ನು ಬೇರ್ಪಡಿಸುವ ಆಯುಕಟ್ಟಿನ ಗಡಿ ಪ್ರದೇಶ. ಎರಡೂ ಕಡೆಯ ಅಧಿಕಾರಿಗಳು ಅಲ್ಲಿ ಜಮಾಯಿಸಿದ್ದರು. ಬಸ್ಸುಗಳು ತಂಡತಂಡವಾಗಿ ಬಂದುನಿಂತವು. ವರ್ಗಾವಣೆಗೆ

ಸಂಬಂಧಪಟ್ಟ ಪತ್ರಗಳನ್ನು ಹುಚ್ಚರ ಪಟ್ಟಿಯನ್ನು ಕೂಲಂಕಷವಾಗಿ ನೋಡಿ ಸಹಿ ಮಾಡಿ ಪರಸ್ಪರ ಬದಲಾಯಿಸಿಕೊಂಡರು.

ಹುಚ್ಚರನ್ನು ಬಸ್ಸಿನಿಂದ ಇಳಿಸುವುದೇ ದೊಡ್ಡ ಸಮಸ್ಯೆಯಾಯಿತು. ಯಾರೂ ಇಳಿಯಲಿಲ್ಲ. ಹೆದರಿಕೆ ಬೆದರಿಕೆ ಯಾವುದಕ್ಕೂ ಜಗ್ಗಲಿಲ್ಲ. ಹಾಗೂ ಹೀಗೂ ಕಷ್ಟ ಪಟ್ಟು ಕೆಳಗೆ ಇಳಿಸಿದರೆ, ಇಳಿದಿದ್ದೇ ತಡ ದಿಕ್ಕಾಪಾಲಾಗಿ ಓಡತೊಡಗಿದರು. ಕೆಲವರಂತೂ ಬಟ್ಟೆಗಳನ್ನು ಕಿತ್ತೆಸೆದು ಬತ್ತಲಾಗಿ ನಿಂತರು. ಅದನ್ನು ತಡೆಗಟ್ಟಲು ಹೋರಾಡಿದ್ದೆಲ್ಲ ವ್ಯರ್ಥವಾಯಿತು. ಏಕೆಂದರೆ ಬಿಚ್ಚಿದ ಬಟ್ಟೆಗಳನ್ನು ಹರಿದು ಚಿಂದಿ ಚಿಂದಿ ಮಾಡಿ ಎಸೆದುಬಿಟ್ಟಿದ್ದರು. ಕೆಲವರು ಕೆಟ್ಟಕೆಟ್ಟದಾಗಿ ಬೈಯ್ಯುತ್ತಿದ್ದರು. ಕೆಲವರು ಜೋರಾಗಿ ಕಿರುಚಿ ಹಾಡುತ್ತಿದ್ದರು. ಇನ್ನು ಕೆಲವು ಹುಚ್ಚರು ತಾರಕಸ್ವರದಲ್ಲಿ ಅಳುತ್ತಿದ್ದರು. ಎಷ್ಟೋ ಜನ ರಚ್ಚೆಹಿಡಿದಿದ್ದರು. ಕೆಲವರಂತೂ ಜುಟ್ಟು ಹಿಡಿದು ಮುಖಮೂತಿ ನೋಡದೆ ಹೊಡೆದಾಡುತ್ತಿದ್ದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಧಿಕಾರಿಗಳಿಗೆ ಚಳ್ಳೆಹಣ್ಣು ತಿನ್ನಿಸುತ್ತಿದ್ದರು. ಸ್ತ್ರೀಮನೋರೋಗಿಗಳ ಆರ್ಭಟ ಪುರುಷರ ಗದ್ದಲವನ್ನೂ ಮೀರಿಸಿತ್ತು. ಆ ಛಳಿಯ ಭಯಂಕರತೆ ಎಲ್ಲರನ್ನೂ ನಡುಗಿಸಿತ್ತು.

ಅಧಿಕಾರಿಗಳು ತಮ್ಮನ್ನು ಬಲವಂತವಾಗಿ ಗಡಿಯಾಚೆಗೆ ದಬ್ಬುತ್ತಿದ್ದುದು ಕೆಲವು ಹುಚ್ಚರಿಗೆ ಸಿಟ್ಟುತರುತ್ತಿತ್ತು. ಜೊತೆಗೆ ಅವರು ತಮ್ಮನ್ನೇಕೆ ಗಡಿಹೊರಗೆ ಅಟ್ಟುತ್ತಿದ್ದಾರೆ ಎಂಬುದು ಅರ್ಥವಾಗಲಿಲ್ಲ. ಸಿಕ್ಕ ಸಿಕ್ಕ ಕಡೆಗೆ, ಪೊದೆಗಳ ಮೇಲೆ ಅಪರಿಚಿತ ಪ್ರದೇಶಕ್ಕೆ ಮನಬಂದಂತೆ ಎಸೆಯುತ್ತಿದ್ದರು. ನೂಕಿ ವಾಪಸ್ ಬರದಂತೆ ಅಡ್ಡಗಟ್ಟಿ ಮತ್ತೆ ದಬ್ಬುವಾಗ, ಹುಚ್ಚರು "ಪಾಕೀಸ್ತಾನ್ ಜಿಂದಾಬಾದ್ ಪಾಕೀಸ್ತಾನ್ ಮುರ್ದಾಬಾದ್" ಎಂದು ಘೋಷಣೆ ಕೂಗಲಾರಂಭಿಸಿದರು. ಅದರ ಹಿಂದೆಯೇ ಬಿರುಸಾದ ಹೊಡೆದಾಟ, ಕಲ್ಲು ತೂರಾಟ, ಚೀರಾಟ ತುಂಬಿಕೊಂಡಿತು.

ಬಿಷನ್‌ಸಿಂಗ್ ಸರದಿ ಬಂದಾಗ ದಾಖಲು ಪುಸ್ತಕ ಹಿಡಿದು ಕೂತಿದ್ದ ವ್ಯಕ್ತಿ ಅವನನ್ನು ಕೇಳಿದ : "ನಿನ್ನ ಹೆಸರೇನು ?" ಬಿಷನ್ ಉತ್ತರಿಸುವ ಬದಲು ಆ ಅಧಿಕಾರಿಯನ್ನೇ ಕೇಳಿದ : "ಟೋಬಾ ಟೇಕ್‌ಸಿಂಗ್ ಎಲ್ಲಿದೆ ? ಪಾಕೀಸ್ತಾನದಲ್ಲೋ ಇಂಡಿಯಾದಲ್ಲೋ ?"

"ಪಾಕೀಸ್ತಾನ" ಎಂದು ಮುಖ ಸೊಟ್ಟಮಾಡಿ ನಕ್ಕ ಆ ಅಧಿಕಾರಿ. ಬಿಷನ್‌ಸಿಂಗ್ ತಕ್ಷಣ ಓಡತೊಡಗಿದ. ಅವನನ್ನು ಬೆನ್ನಟ್ಟಿದ ಇಬ್ಬರು ಹಿಡಿದು ಎಳೆದ್ಕೊಂಡುಬಂದರು. ಗಡಿಯ ಗೆರೆ ಪ್ರದೇಶದಲ್ಲಿ ಅವನನ್ನು ನಿಲ್ಲಿಸಿ ಭಾರತದ ಕಡೆ ನೂಕಲು ಪ್ರಯತ್ನಿಸಿದರು. ಅವನು ಅಲುಗಾಡಲಿಲ್ಲ. ಬದಲು ನಿಂತಲ್ಲಿಂದಲೇ ಕೂಗಿಕೊಂಡ : "ಇದೇ ಟೋಬಾ ಟೇಕ್‌ಸಿಂಗ್. ಮೇಲಿಲ್ಲ ಕೆಳಗಿಲ್ಲ. ಹಿಂದಿಲ್ಲ ಮುಂದಿಲ್ಲ. ಒಳಗಿಲ್ಲ ಹೊರಗಿಲ್ಲ. ಕಬಳಿಸ್ತಾನ್, ಪಾಕಿಸ್ತಾನ್, ಹಿಂದೂಸ್ತಾನ್–ಮುಂದೂಸ್ತಾನ್" ಎಂದು.

ಅಧಿಕಾರಿಗಳು ಅವನಿಗೆ, ತೋಬಾ ಟೇಕ್‌ಸಿಂಗ್ ಭಾರತಕ್ಕೆ ಸೇರಿಹೋಗಿದೆ ಎಂದು ವಿವರಿಸಲು ಪ್ರಯತ್ನಿಸಿದರು. ಆದರೆ ಅದು ಬಿಷನ್‌ಸಿಂಗ್ ಮೇಲೆ ಎಳ್ಳಷ್ಟೂ ಪರಿಣಾಮಕಾರಿಯಾಗಲಿಲ್ಲ. ಕಾವಲು ಪಡೆಯುವರು ಅವನ ಮೇಲೆ ಬಲ ಪ್ರಯೋಗಿಸಿದರು. ಅವನು ಮಿಸುಕಾಡದೆ ನೆಲಕಚ್ಚಿ ನಿಂತಿದ್ದ. ಅವನ ಸ್ಥಿತಿಗೆ ಮರುಗಿದವರಂತೆ ತಮ್ಮ ಕೈ ಸಡಲಿಸಿದರು.

ಗಡಿಗಳ ನಡುವಿನ ಯಾರಿಗೂ ಸೇರದ ನಿರ್ಜನಪ್ರದೇಶದಲ್ಲಿ ಬಿಷನ್‌ಸಿಂಗ್ ತನ್ನ ಊದಿದ ಕಾಲುಗಳನ್ನು ಊರಿ ನಿಂತಿದ್ದ. ಬೃಹತ್ ವಿಗ್ರಹದಂತೆ ಮಿಸುಕಾಡದೆ ನಿಂತುಬಿಟ್ಟ.

ಅವನೊಬ್ಬ ನಿರುಪದ್ರವಿಯಾದ್ದರಿಂದ ಯಾರೂ ಅವನನ್ನು ಹಿಂಸಿಸಲಿಲ್ಲ. ಬಲವಂತದಿಂದ ಇಂಡಿಯಾದ ಕಡೆ ದಬ್ಬಲು ಇಚ್ಛಿಸಲಿಲ್ಲ. ಅವನನ್ನು ಅಲ್ಲೇ ನಿಂತಿರಲು ಬಿಟ್ಟು, ಉಳಿದವರನ್ನು ಗಡಿಯಾಚೆ ದಾಟಿಸಲು ಪ್ರಯತ್ನಿಸುತ್ತಿದ್ದರು. ಇರುಳು ಕವಿಯತೊಡಗಿತು.

ನಸುಕಿಗೂ ಮುಂಚೆ ಇದ್ದಕ್ಕಿದ್ದಹಾಗೆ ಭಯಾನಕವಾಗಿ ಚೀರಿದ ಸದ್ದಿಗೆ ಗಡಿಯ ಎರಡೂ ಬದಿಯ ಅಧಿಕಾರಿಗಳು ಓಡಿಬಂದರು. ಹದಿನೈದು ವರ್ಷಗಳ ಕಾಲ ಸತತವಾಗಿ ನಿಂತುಕೊಂಡೇ ಆಯುಷ್ಯವನ್ನು ಸವೆಸಿದ್ದ ಬಿಷನ್‌ಸಿಂಗ್ ಚೀರಿಕೊಂಡು ಕುಸಿದು ಬಿದ್ದಿದ್ದ. ಅವನು ಬಿದ್ದಿದ್ದ ಕಡೆಗೆ ಅಧಿಕಾರಿಗಳು ಧಾವಿಸಿಬಂದರು.

ಆ ಕಡೆ ಮುಳ್ಳಿನ ತಂತಿಯಾಚೆ ಇಂಡಿಯಾ. ಈ ಕಡೆ ಹಲವಾರು ತಂತಿಗಳ ಹಿಂದೆ ಪಾಕೀಸ್ತಾನ. ಇವೆರಡರ ನಡುವೆ ಯಾರಿಗೂ ಸೇರದ ಶೂನ್ಯಭೂಮಿ. ಅದಕ್ಕೆ ಯಾವ ಹೆಸರೂ ಇಲ್ಲ. ಅಲ್ಲೇ ತೋಬಾ ಟೇಕ್‌ಸಿಂಗ್ ಇರುವುದು.

# ಪರಿಹಾರ

ಮೂಲ : ಅಜೀಜ್‌ನೆ ಸಿನ್

ಅನು : ಡಾ॥ ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ಹಿಂದೆ ಭೂಮಂಡಲದಲ್ಲಿ ಒಂದು ದೇಶ ಇತ್ತಂತೆ. ಆದರೆ ಅದರ ಬಗ್ಗೆ ಇಂದು ಯಾವ ಭೂಗೋಳದಲ್ಲಾಗಲಿ, ಚರಿತ್ರೆಯಲ್ಲಾಗಲಿ ಸಿಗುವುದಿಲ್ಲ.

ಒಂದು ಸಾರಿ ಆ ದೇಶದ ಎಲ್ಲ ಜನರ ಶರೀರದ ಆಕೃತಿ ನೋಡು ನೋಡುತ್ತಿದ್ದಂತೆ ಬದಲಾವಣೆ ಆಗುತ್ತಿತ್ತಂತೆ. ಮೊದಲು ಜನರ ತಲೆಗಳು ಅದುರತೊಡಗಿದವು. ಅದುಗುತ್ತಾ, ಅದುಗುತ್ತಾ ಹೆಗಲ ಮಧ್ಯೆ ಹೇಗೆ ಕುಸಿದು ಹೋದವೆಂದರೆ ಕುತ್ತಿಗೆ ಪೂರ್ಣವಾಗಿ ಲೋಪುಗೊಂಡುವು. ನಂತರ ಪ್ರತಿಯೊಬ್ಬ ವ್ಯಕ್ತಿಯ ಸೊಂಟ ಗೂನಾಗತೊಡಗಿತು. ಹಾಗೆ ಮುಂದುವರಿದು ಇಡೀ ರಾಷ್ಟ್ರದ ಸೊಂಟವನ್ನು ಇಮ್ಮಡಿ ಮಾಡಿಬಿಟ್ಟಿತು. ಕೊನೆಗೆ ಜನರಿಗೆ ಹೆಜ್ಜೆ ಎತ್ತಿಟ್ಟು ನಡೆಯುವುದು ಕಷ್ಟವಾಯಿತು. ಆಗ ಅವರು ನೆಲದ ಮೇಲೆ ಕಾಲನ್ನು ಎಳೆದುಕೊಂಡು ನಡೆಯತೊಡಗಿದರು. ನೋಡುವವರಿಗೆ ದೇಶದ ಇಡೀ ಜನಸಂಖ್ಯೆ ಯಾವುದೋ ಅಸಾಧಾರಣ ಹೊರೆಯಿಂದ ಬಗ್ಗಿ ಹೋಗಿದೆ ಅನ್ನಿಸುತ್ತಿತ್ತು. ಜನರ ಕಾಲುಗಳನ್ನು ದಪ್ಪ ಸರಪಳಿಗಳಿಂದ ಬಿಗಿದಿದೆಯೋ ಅನ್ನಿಸುತ್ತಿತ್ತು. ಹೆಚ್ಚೇನು ದಿನಗಳು ಕಳೆದಿರಲಾರವು. ಚಿಕ್ಕವರು ದೊಡ್ಡವರು, ಹೆಂಗಸರು ಗಂಡಸರು ಎಲ್ಲರೂ ನರಳಲಾರಂಭಿಸಿದರು. ಎಲ್ಲರ ಬಾಯಲ್ಲೂ ಇದೇ ಮಾತು—"ಉಶ್ ! ಇನ್ನು ಎಳೆಯಲಾರೆವು ಕಾಲು ! ಅಯ್ಯೋ ! ಇನ್ನು ಎತ್ತಿಡಲಾರೆವು ಕಾಲು". ಕ್ರಮೇಣ ಈ ಮಾತುಗಳು ಕಿರುಚಾಟ ಕೂಗಾಟದಲ್ಲಿ ಪರ್ಯವಸಾನಗೊಂಡವು.

ಜನಗಳ ನರಳುವ ಧ್ವನಿ ಏಳನೇ ಆಕಾಶಕ್ಕೂ, ಮುಟ್ಟತೊಡಗಿದಾಗ ಆಗಿನ ಆಳುತ್ತಿದ್ದವರ ಕಿವಿಗೂ ಈ ಕರುಣಾರ್ದ್ರ ಸ್ವರಗಳು ಮುಟ್ಟಿದವು. ಆ ದೊರೆ ಉದ್ವಿಗ್ನನಾಗಿ ಮಂತ್ರಿಗಳನ್ನು ಕೇಳಿದ–"ನಮ್ಮ ಸುಖ ನಿದ್ರೆಯನ್ನು ಕೆಡಿಸುವ ಈ ಆರ್ತ ಧ್ವನಿ ಎಲ್ಲಿಂದ ಕೇಳಿ ಬರುತ್ತಿದೆ ?"

ನಿವೇದಿಸಿದರು–"ಮಹಾರಾಜರೇ ! ಇದು ತಮ್ಮ ಪ್ರಜೆಗಳ ಕರುಣಾರ್ದ್ರ ಸ್ವರಗಳು. ಮೊದಲು ಈ ಸ್ವರಗಳನ್ನು ನಮ್ಮ ಕಿವಿಗಳು ಕೇಳಿದರೂ ನಾವು ಗಾಳಿಯ

ಸರ್ ಸರ್ ಧ್ವನಿಯೆಂದು ತಿಳಿದು ಗಮನಿಸಿರಲಿಲ್ಲ. ಶೀಘ್ರವೇ ಆ ಸರ ಸರ ಧ್ವನಿ ಗುಜು ಗುಜು ಧ್ವನಿಯಾದಾಗಲೂ ನಾವದನ್ನು ಗಮನಿಸಲಿಲ್ಲ. ಆ ಗುಜು ಗುಜು ಗದ್ದಲಾಗಿ ಪರಿಣಮಿಸಿದಾಗ ನಾವು ನಮ್ಮ ಕಿವಿಗಳಿಗೆ ಬೆರಳಿಟ್ಟುಕೊಂಡೆವು. ಬಹುಶಃ ಹೀಗೆ ಈ ಗದ್ದಲದಿಂದ ಮುಕ್ತಿ ಸಿಕ್ಕೀತೆಂದು. ಈಗ ಕ್ರಮಶಃ ಈ ಗದ್ದಲವೇ ಗಲಭೆಯ ರೂಪ ತಾಳಿದೆ. ಮಹಾರಾಜರು ಅಪ್ಪಣೆ ಕೊಡಿಸಿದರೆ ಪ್ರತಿಯೊಬ್ಬ ವ್ಯಕ್ತಿಯ ಗಂಟಲ ಕೆಲವು ಧ್ವನಿ ತಂತಿಗಳನ್ನು ಕತ್ತರಿಸಿ ಹಾಕುವೆವು. ಅದರಿಂದ ಅವರ ಕೂಗಾಟದಿಂದ ಮಹಾರಾಜರಿಗೆ ಶಾಂತಿ ಭಂಗ ಆಗುವುದು ತಪ್ಪೀತು.

ದೊರೆ ಗದ್ದರಿಸಿ ಹೇಳಿದ– ನಾವು ಮಧ್ಯ ಯುಗದಲ್ಲಿಲ್ಲ. ನಾವು ವರ್ತಮಾನ ಯುಗದವರು. ನೀವು ಹಿಂದಿನ ಕಾಲದಂತೆ ಮಾತಾಡಬೇಡಿ – ಇಂದಿನ ದಿನಗಳು ನಮ್ಮ ಮುಂದಿವೆ. ಆದ್ದರಿಂದ ನೆನ್ನ ದಿನಗಳು ಹೂತು ಹೋದವು. ನಾವು ಹಿಂದಿನಿಂದ ಬಂದ ಪರಿಹಾರಗಳನ್ನೇ ಪ್ರಸ್ತಾಪ ಮಾಡುವ ಬದಲು ದೇಶದಲ್ಲಿ ಘೋಷಣೆ ಮಾಡಿ– "ಪ್ರಜೆಗಳೆಲ್ಲ ರಾಜಧಾನಿಯ ದೊಡ್ಡ ಮೈದಾನದಲ್ಲಿ ಸೇರಲಿ. ಅಲ್ಲಿ ರಾಜ ಅವರನ್ನು ವಿಚಾರಿಸಲು ಅನುಕೂಲವಾದೀತು".

ಮಾರನೇ ದಿನವೇ ಪ್ರಜೆಗಳು ಮೈದಾನದಲ್ಲಿ ಸೇರಿದರು. ರಾಜ ಮೊದಲ ಬಾರಿ ಪ್ರಜೆಗಳ ತಲೆ ಹೆಗಲ ಮಧ್ಯೆ ಕುಸಿದು ಹೋಗಿರುವುದನ್ನು ಮತ್ತು ಬಾಗಿದ ಸೊಂಟಗಳನ್ನು ನೋಡಿದ. ವಿಸ್ಮಯಗೊಂಡು ಸಹಾನುಭೂತಿ ತೋರುತ್ತಾ ಕೇಳಿದ– "ಹೇಳಿ. ನಿಮಗೆ ಏನು ಕಷ್ಟ ಬಂದಿದೆ?" ಅಲ್ಲಿ ನೆರೆದಿದ್ದ ಪ್ರಜೆಗಳೆಲ್ಲಾ ಒಂದೇ ವಾಕ್ಯವನ್ನು ಪುನರುಚ್ಚಿಸಿದರು–"ನಾವು ಇನ್ನು ಕಾಲುಗಳನ್ನು ಎಳೆಯಲಾರೆವು!"

ಆ ರಾಜ ಪ್ರಜೆಗಳಲ್ಲಿದ್ದ ಕೆಲವು ವಿದ್ವಾಂಸರನ್ನು ಕರೆಸಿ ಕೇಳಿದ - ವಿವರವಾಗಿ ಹೇಳಿ. ಏನು ನಡೆಯಿತು ? ನೀವು ಏನನ್ನು ಎಳೆಯಲಾರಿರಿ ? ವಿದ್ವಾಂಸರು ಹೇಳಿದರು– "ಮಹಾರಾಜರೇ, ನಮಗೇ ಗೊತ್ತಿಲ್ಲ ನಮಗೇನಾಗುತ್ತಾ ಇದೆ ಎಂದು. ನಮ್ಮ ಕಾಲುಗಳಿಗೆ ತೂಕದ ಸರಪಳಿಗಳನ್ನು ಬಿಗಿದಿವೆಯೋ ಅನ್ನಿಸುತ್ತದೆ. ಅದರ ಅಸಹ್ಯ ಹೊರೆಯಿಂದಾಗಿ ನಾವು ಕಾಲುಗಳನ್ನು ಎತ್ತಿಡುವುದು, ನಡೆಯುವುದು ಕಷ್ಟವಾಗಿದೆ. ಈ ರಹಸ್ಯಪೂರ್ಣವಾದ ಸರಪಳಿಗಳು ದಿನಕಳೆದಂತೆ ಭಾರಿ ತೂಕದ್ದಾಗುತ್ತಿವೆ. ಇದೇ ಸ್ಥಿತಿ ಮುಂದುವರಿದರೆ ಇನ್ನು ಕೇಲವೇ ದಿನಗಳಲ್ಲಿ ಇಡೀ ರಾಷ್ಟ್ರ ಚಲನೆಯನ್ನು ಕಳೆದುಕೊಳ್ಳಬಹುದು."

ರಾಜ ನಗುತ್ತಾ ಕೇಳಿದ–"ಅರ್ಥವಾಯಿತು ಬಿಡಿ. ಈ ಜನ ಏನನ್ನು ಎಳೆಯಲಾರರು ಎಂದು. ಆದರೆ ನೀವುಗಳು ಇನ್ನೊಂದು ಘೋಷಣೆ ಕೂಗುತ್ತಿರುವಿರಲ್ಲಾ, ಅದೇನು ಹೇಳಿ ನೀವು ಎತ್ತಲಾಗದಿರುವುದು ?"

"ಮಹಾರಾಜರೇ, ನಮ್ಮ ತಲೆಯ ಮೇಲೆ ಯಾವುದೋ ರಹಸ್ಯಪೂರ್ಣ ಹೊರೆ ಹೊರಿಸಲಾಗಿದೆಯೋ ಅನ್ನಿಸುತ್ತದೆ."

ಪ್ರಜೆಗಳ ಮಾತುಗಳನ್ನು ಆಲಿಸಿ ರಾಜ ಹೇಳಿದ– ನನ್ನ ಪ್ರಿಯ ಪ್ರಜೆಗಳೇ, ನೀವು ಏನೂ ಚಿಂತಿಸಬೇಡಿ. ನಾವು ಇಂದೇ ಯೋಗ್ಯ ವಿಶೇಷಜ್ಞರ ಒಂದು ಕಮಿಟಿ ನೇಮಿಸುತ್ತೇವೆ. ಅವರು ನಿಮ್ಮ ಕಾಲುಗಳ ಸರಪಳಿ ಮತ್ತು ನಿಮ್ಮ ತಲೆ ಮೇಲಿನ ರಹಸ್ಯ ಹೊರೆಯ ರಹಸ್ಯವನ್ನು ಪತ್ತೆ ಹಚ್ಚುವರು.

ಪ್ರಜೆಗಳ ಮುಖ ಅರಳಿದವು. ಎಲ್ಲರೂ ಸಂತೋಷದಿಂದ ಕಾಲೆಳೆಯುತ್ತಾ ತಮ್ಮ ತಮ್ಮ ಮನೆಗೆ ತೆರಳಿದರು. ಇತ್ತ ರಾಜನು ನಲ್ವತ್ತು ಯೋಗ್ಯ ವಿಶೇಷಜ್ಞರನ್ನು ಸೇರಿಸಿ ಅವರಿಗೆ ಹೇಳಿದ–"ನಮ್ಮ ಪ್ರಜೆಗಳು ಏನು ಕಷ್ಟ ಅನುಭವಿಸುತ್ತಿದ್ದಾರೆ ಅದರ ಅರಿವು ನಿಮಗಾಗಿರಬಹುದು. ಅಂತಹ ವಿಷಮ ಪರಿಸ್ಥಿತಿ ಎದುರಿಸಲೆಂದೇ ನಾವು ಅನೇಕ ವರ್ಷಗಳಿಂದ ನಿಮ್ಮಂಥಾ ವಿಶೇಷಜ್ಞರನ್ನು ಸಾಕುವ ಹೊರೆ ಹೊತ್ತಿದ್ದೇವೆ. ಈಗ ಕಾಲ ಬಂದಿದೆ. ನೀವು ನಮ್ಮ ಉಪಕಾರದ ಋಣ ಸ್ವಲ್ಪವಾದರೂ ತೀರಿಸಬಹುದು. ಈಗ ನೀವು ಆ ರಹಸ್ಯಪೂರ್ಣ ಹೊರೆ ಯಾವುದು ಎಂಬುದನ್ನು ಕಂಡು ಹಿಡಿಯಿರಿ. ಆ ಹೊರೆ ಹೊರಲು ನಮ್ಮ ಪ್ರಜೆಗಳೇಕೆ ಅಶಕ್ಯರು. ಈ ಹೊರೆ ಕಡಿಮೆ ಮಾಡುವ ಉಪಾಯ ಕಂಡು ಹಿಡಿಯಿರಿ. ಆದರೆ ಎಚ್ಚರ! ನಮಗೆ ತೊಂದರೆಯಾಗಬಹುದಾದಂತಹ ಯಾವ ಉಪಾಯವನ್ನೂ ಹೇಳಬೇಡಿ. ನಿಮ್ಮ ಮೊಟ್ಟಮೊದಲ ಕರ್ತವ್ಯ ರಾಜನ ಅಧಿಕಾರವನ್ನು ರಕ್ಷಿಸುವುದು ತಾನೆ?"

ವಿಶೇಷಜ್ಞರು ಉತ್ತರಿಸಿದರು–"ಮಹಾರಾಜರೇ, ನಿಮ್ಮ ಆದೇಶವನ್ನು ಶಿರಸಾ ವಹಿಸುತ್ತೇವೆ. ನಮ್ಮ ಪ್ರಾರ್ಥನೆ ಎಂದರೆ ನಮಗೆ ನಲ್ವತ್ತು ದಿನಗಳ ಅವಕಾಶ ಕೊಡಿ. ಈ ನಲ್ವತ್ತು ದಿನಗಳೂ ನಮಗೆ ನಲ್ವತ್ತು ಚೀಲ ದ್ವಿಪ ದ್ರಾಕ್ಷಿ ಮತ್ತು ಬಾದಾಮಿ ತಿನ್ನಲು ಕೊಡಬೇಕು. ಆದರಿಂದ ನಮ್ಮ ಬುದ್ಧಿಶಕ್ತಿ ಪ್ರಖರವಾಗಬಹುದು. ನಲ್ವತ್ತೊಂದನೆ ದಿನ ನಾವು ಮಹಾರಾಜರ ಬಯಕೆಯಂತೆ ಪ್ರಜೆಗಳ ಹೊರೆ ಏನು ಮತ್ತು ಅದನ್ನು ಕಡಿಮೆ ಮಾಡಲು ಉಪಾಯವನ್ನೂ ತಿಳಿಸುತ್ತೇವೆ."

ವಿಶೇಷಜ್ಞರು ತಮ್ಮ ಅಮೂಲ್ಯವಾದ ಸಮಯವನ್ನು ಹಾಳುಮಾಡದಿರಲಿ ಎಂದು ರಾಜ ಅವರನ್ನು ಒಂದು ದೊಡ್ಡ ಕೊಠಡಿಯಲ್ಲಿ ಕೂಡಿಹಾಕಿ ಹೊರಗಿನಿಂದ ಬೀಗ ಹಾಕಿಸಿದ, ಪ್ರತಿ ಬೆಳಗ್ಗೆ ದ್ವಿಪ ದ್ರಾಕ್ಷಿ ಮತ್ತು ಬಾದಾಮಿಯ ಮೂಟೆಯನ್ನು ಕೊಠಡಿಯೊಳಗೆ ತಳ್ಳಿ ಮತ್ತೆ ಬಾಗಿಲಿಗೆ ಬೀಗ ಹಾಕುತ್ತಿದ್ದರು.

ಇತ್ತ ವಿಶೇಷಜ್ಞರು ದ್ವಿಪದ್ರಾಕ್ಷಿ ಮತ್ತು ಬಾದಾಮಿಯನ್ನು ತಿಂದೂ ತಿಂದೂ ಕೊಠಡಿಯೊಳಗೆ ಬಹಳ ಖುಷಿಯಾಗಿ ಇರುತ್ತಿದ್ದರು. ಅತ್ತ ಪ್ರಜೆಗಳ ಕೂಗು ಮತ್ತೆ ರಾಜನ ಕಿವಿಗೆ ಮುಟ್ಟುತ್ತಿತ್ತು. ರಾಜ ಅಶಾಂತನಾಗಿ ಕೊಠಡಿಯೊಳಗೆ ಗೋಡೆಯಲ್ಲಿ ರಂಧ್ರ ಕೊರೆದು ನೋಡುತ್ತಾನೆ. ವಿಶೇಷಜ್ಞರು ದ್ವಿಪದ್ರಾಕ್ಷಿ ಮತ್ತು ಬಾದಾಮಿ ತಿನ್ನುವುದರಲ್ಲೇ ಮಗ್ನರಾಗಿದ್ದಾರೆ. ನಂತರ ಮನೋರಂಜನೆ, ಲಾಗ ಹಾಕುವ ಅನೇಕ ರೀತಿಯ ಆಟ ಆಡುತ್ತಿದ್ದಾರೆ.

ಕೊನೆಗೆ ನಲ್ವತ್ತೊಂದನೇ ದಿನ ರಾಜ ವಿಶೇಷಜ್ಞರನ್ನು ಕೊಠಡಿಯಿಂದ ಹೊರ ತಂದ. ಸರ್ವಶ್ರೇಷ್ಠ ವಿಶೇಷಜ್ಞ ರಾಜನಿಗೆ ಹೇಳಿದ–"ಮಹಾರಾಜರೇ, ನಾವು ನಲ್ವತ್ತು ದಿನ, ನಲ್ವತ್ತು ರಾತ್ರಿ ಬಹಳ ಕಷ್ಟಪಟ್ಟು ತಲೆಕೆಡಿಸಿಕೊಂಡು ಪ್ರಜೆಗಳ ಕಷ್ಟದ ಬಗ್ಗೆ ಪತ್ತೆ ಮಾಡಿದ್ದೇವೆ. ನಾವು ಕಂಡು ಹಿಡಿದಿದ್ದೇನೆಂದರೆ, ಈ ದೇಶದ ಪ್ರಜೆಗೆ ಬಾಧಿಸುತ್ತಿರುವ ರಹಸ್ಯಪೂರ್ಣ ಹೊರೆ; ಅದು ಅವನ ನೆರಳಿನ ಹೊರೆ, ಜನರ ನೆರಳು ಯಾವ ರೀತಿಯಿಂದಲೂ ಅವರನ್ನು ಹಿಂಬಾಲಿಸದೇ ಬಿಡುವುದಿಲ್ಲ. ಅದು ಯಾವಾಗಲೂ ಅವನ ಕಾಲಿಗೆ ಅಂಟಿಕೊಂಡೇ ಇರುತ್ತದೆ. ಆದ್ದರಿಂದಲೇ ಜನ ಸಲೀಸಾಗಿ ಕಾಲು ಎತ್ತಲಾರರು.

ರಾಜ ತನ್ನ ವಿಶೇಷಜ್ಞರು ಹೇಳಿದ ರೋಗದ ಕಾರಣಗಳನ್ನು ಕೇಳಿ ಸಂತಸ ಪಟ್ಟ. ಅವರ ಬುದ್ಧಿವಂತಿಕೆ ಮತ್ತು ಪಾಂಡಿತ್ಯವನ್ನು ಪ್ರಶಂಸಿಸಿದ. ಮತ್ತೆ ಆದೇಶಿಸಿದ– ವಿಶೇಷಜ್ಞರ ಈ ಅಭಿಪ್ರಾಯವನ್ನು ಎಲ್ಲ ಪ್ರಜೆಗಳಿಗೂ ತಿಳಿಸಿ ಮತ್ತು ಈ ರಹಸ್ಯಪೂರ್ಣ ಹೊರೆಯಿಂದ ಮುಕ್ತರಾಗಬೇಕಿದ್ದರೆ ತಮ್ಮ ನೆರಳಿನಿಂದ ಮುಕ್ತರಾಗುವ ಉಪಾಯ ಯೋಚಿಸಲಿ.

ರಾಜಾದೇಶವನ್ನು ಎಲ್ಲ ಪ್ರಜೆಗಳಿಗೂ ತಿಳಿಸಲಾಯಿತು. ಪ್ರಜೆಗಳ ಮುಖ ಮತ್ತೆ ಪ್ರಸನ್ನಗೊಂಡವು. ಅಂದಿನಿಂದಲೇ ಇಡೀ ದೇಶದಲ್ಲಿ ಮನುಷ್ಯ ಮತ್ತು ಅವನ ನೆರಳಿನ ಮಧ್ಯೆ ಕೊನೆಯಿಲ್ಲದ ಯುದ್ಧ ಪ್ರಾರಂಭವಾಯಿತು. ಜನ ತಮ್ಮ ನೆರಳಿನಿಂದ ಮುಕ್ತರಾಗಲು ವೇಗವಾಗಿ ಓಡುತ್ತಿದ್ದರು. ಕೊನೆಗೆ ಸುಸ್ತಾಗಿ ನೆಲದ ಮೇಲೆ ಬೀಳುತ್ತಿದ್ದರು. ಎದ್ದರೆ ನೆರಳು ನಿರಂತರ ಪಾದಕ್ಕೆ ಅಂಟಿಕೊಂಡಿರುವುದು ಕಾಣುತ್ತಿತ್ತು. ಎಷ್ಟೇ ಪ್ರಯತ್ನಿಸಿದರೂ ಮನುಷ್ಯ ನೆರಳಿನಿಂದ ಮುಕ್ತನಾಗಲು ಸಮರ್ಥನಾಗಲಿಲ್ಲ. ಜನರು ಟಾಂಗಾ ಗಾಡಿಗಳಲ್ಲಿ ತಮ್ಮ ನೆರಳಿನಿಂದ ಓಡಿಹೋಗುವ ಪ್ರಯತ್ನ ಮಾಡುತ್ತಿದ್ದರು. ಆದರೆ ಗುರಿ ತಲುಪುತ್ತಲೇ ನೆರಳು ಮತ್ತೆ ಜೊತೆಯಾಗುತ್ತಿತ್ತು. ಬೆಳಗ್ಗೆ ನಿದ್ದೆಯಿಂದ ಎಚ್ಚೆತ್ತರೆ ನೆರಳು ಪಶ್ಚಿಮದ ಕಡೆಗಿರುತ್ತಿತ್ತು. ಆದ್ದರಿಂದ ಜನ ಪೂರ್ವದ ಕಡೆಗೆ ಓಡುತ್ತಿದ್ದರು. ಮಧ್ಯಾಹ್ನದವರೆಗೆ ಪೂರ್ವಕ್ಕೆ ಓಡುತ್ತಿದ್ದವರು ಮಧ್ಯಾಹ್ನದ ನಂತರ ನೆರಳು ಅವರ ಮುಂದಾಗಲು ಆಗ ನೆರಳನ್ನು ಹಿಂದೆ ಬಿಟ್ಟು ಪಶ್ಚಿಮದ ಕಡೆಗೆ ಮುಖ ಮಾಡಿಕೊಳ್ಳುವರು.

ಹುಚ್ಚರಂತೆ ಪೂರ್ವದಿಂದ ಪಶ್ಚಿಮದ ಕಡೆಗೆ ಮತ್ತೆ ಪಶ್ಚಿಮದಿಂದ ಪೂರ್ವದ ಕಡೆಗೆ ಓಡುವ ಈ ರಾಷ್ಟ್ರದ ಕೆಲವು ನಾಯಕರು ಜನರಿಗೆ ಯಾವಾಗಲೂ ಬೆಳಗ್ಗೆ ಹೀಗೆ ಹೇಳುತ್ತಿದ್ದರು–"ಪ್ರಿಯ ದೇಶವಾಸಿಗಳೇ, ನಮ್ಮ ಮುಕ್ತಿ ಪೂರ್ವದ ಕಡೆಗೆ ಬನ್ನಿ ಪೂರ್ವದ ದಿಕ್ಕಿಗೆ ಹೋಗೋಣ."

ಮಧ್ಯಾಹ್ನದ ನಂತರ ಕೆಲವು ನಾಯಕರು ಹೀಗೆ ಭಾಷಣ ಬಿಗಿಯುತ್ತಿದ್ದರು– "ಸೋದರರೇ, ನಮ್ಮ ಮುಕ್ತಿ ಪಶ್ಚಿಮದಲ್ಲಿದೆ. ಬನ್ನಿ ಪಶ್ಚಿಮ ದಿಕ್ಕಿಗೆ ತಿರುಗುವ. ಎಲ್ಲರೂ ಪಶ್ಚಿಮಕ್ಕೆ ಓಡೋಣ."

ನಾಯಕರ ಸಲಹೆಯಂತೆ ಬಡಜನತೆ ಪೂರ್ವಕ್ಕೆ ಓಡಲಿ, ಪಶ್ಚಿಮಕ್ಕೆ ಮುಖ ತಿರುಗಿಸಲಿ ಆದರೆ ಅವರಿಗೆ ನೆರಳಿನಿಂದ ಮುಕ್ತಿ ಮಾತ್ರ ದೊರೆಯಲಿಲ್ಲ ಮತ್ತು ನೆರಳಿನ ರಹಸ್ಯಪೂರ್ಣ ಹೊರೆಯೂ ಇಳಿಯಲಿಲ್ಲ.

ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ತಮ್ಮ ಮುಕ್ತಿಗೆ ಪ್ರಯತ್ನ ನಡೆಸಿದರೂ ಜನರ ಸಮಸ್ಯೆಗೆ ಉತ್ತರ ಸಿಗಲಿಲ್ಲ. ಆಗ ಪ್ರಜೆಗಳ ನಾಯಕರ ಮೂರನೇ ದಳ ಮುಂದೆ ಬಂತು. ಅವರು ಜನತೆಗೆ ಹೊಸ ಸಲಹೆ ಕೊಡತೊಡಗಿದರು—"ಸ್ನೇಹಿತರೇ, ನಿಮಗೆ ಪೂರ್ವ ಅಥವಾ ಪಶ್ಚಿಮದ ದಾರಿ ತೋರಿಸುವವರು ವಿದ್ರೋಹಿಗಳು. ನಮ್ಮ ಮಾತು ಕೇಳಿ, ಪೂರ್ವಕ್ಕೂ ಓಡಬೇಡಿ, ಪಶ್ಚಿಮಕ್ಕೂ ಓಡಬೇಡಿ. ನಿಮ್ಮ ಮುಕ್ತಿ ಸರಿಯಾಗಿ ಪೂರ್ವ ಮತ್ತು ಪಶ್ಚಿಮಗಳ ಮಧ್ಯದಲ್ಲಿದೆ. ಜನ ಈಗ ಈ ಸಲಹೆಯಂತೆ ನಡೆಯತೊಡಗಿದರು. ಮಧ್ಯಾಹ್ನ ಅವರ ನೆರಳುಗಳು ಚಿಕ್ಕವಾಗುತ್ತ ಮುಗಿಯುತ್ತಿದ್ದಂತೆ ಜನ ಸಂತೋಷದಿಂದ ಕಿರುಚಾಡುತ್ತಿದ್ದರು—"ವಾಹ್! ಈಗ ಈ ಅಮಂಗಳ ನೆರಳಿನಿಂದ ಮುಕ್ತಿ ಸಿಕ್ಕಿತು." ಆದರೆ ಆ ಬಡಪಾಯಿಗಳ ಸಂತೋಷ ಚಿರಸ್ಥಾಯಿಯಲ್ಲ (ಮಧ್ಯಾಹ್ನ ಕಳೆಯುತ್ತಿದ್ದಂತೆ ನೆರಳು ಮತ್ತೆ ಉದ್ದವಾಗುತ್ತಿತ್ತು.) ಈಗ ಅವರು ವಿಧಿಯಿಲ್ಲದೆ ಪಶ್ಚಿಮದ ಕಡೆಗೆ ಓಡುತ್ತಿದ್ದಾರೆ. ಯಾರೂ ತಮ್ಮ ನೆರಳಿನಿಂವ ಮುಕ್ತರಾಗಲಿಲ್ಲ. ಮೂರು ರಾಜನೈತಿಕ ದಳಗಳ ಸಮರ್ಥಕರ ನಡುವೆ ಜಗಳ, ಹೊಡೆದಾಟ ನಡೆಯುತ್ತಿತ್ತು. ಜನರು ದಿನನಿತ್ಯದ ಒದರಾಟದಿಂದ ಬೇಸತ್ತು ಹೊಸ ರೀತಿಯಲ್ಲಿ ಕೂಗಾಡತೊಡಗಿದರು–"ಉಫ್! ಇನ್ನು ನಮ್ಮಿಂದ ಎಳೆಯಲಾಗೋಲ್ಲ. ಅಯ್ಯೋ ! ನಾವು ಎತ್ತಲಾರೆವು !"

ರಾಜನ ಮಹಲಿನೊಳಗೆ ನುಗ್ಗಿ ಈ ಸ್ವರಗಳು ರಾಜನ ಕಿವಿ ತಲುಪಿದವು. ರಾಜ ಈ ಆರ್ತನಾದದಿಂದ ಅತಿಯಾಗಿ ವಿಚಲಿತನಾದ. ಅವನು ರೇಗಿ ಕೇಳಿದ—"ಮತ್ತೇಕೆ ಈ ಕೋಲಾಹಲ ನಮ್ಮ ನಿದ್ದೆ ಕೆಡಿಸಲು."

ದರಬಾರಿಗಳು ಹೇಳಿದರು—ಮಹಾರಾಜರೇ ! ಇದು ನಿಮ್ಮ ಪ್ರಜೆಗಳ ಕೂಗು. ಅವರಿಗೆ ಪೂರ್ವದಿಕ್ಕಿಗೆ ಓಡುವುದರಿಂದಲೂ ತಮ್ಮ ನೆರಳಿನಿಂದ ಮುಕ್ತಿ ಸಿಕ್ಕಿಲ್ಲ, ಪಶ್ಚಿಮ ದಿಕ್ಕಿಗೆ ಓಡುವುದರಿಂದಲೂ ಪ್ರಯೋಜನವಾಗಿಲ್ಲ. ತಮ್ಮ ತಮ್ಮ ಜಾಗದಲ್ಲಿ ನಿಲ್ಲುವುದರಿಂದಲೂ ಪ್ರಯೋಜನವಾಗಿಲ್ಲ.

ರಾಜ ತನ್ನ ನಲ್ವತ್ತೂ ವಿಶೇಷಜ್ಞರನ್ನು ಮತ್ತೆ ಸೇರಿಸಿದ. ಬಹಳ ಉದ್ವಿಗ್ನನಾಗಿ ಹೇಳಿದ-"ಕಷ್ಟದಲ್ಲಿ ನೆರವಾಗಲೆಂದಲ್ಲವೇ ನಿಮ್ಮನ್ನು ವರ್ಷಗಳಿಂದ ಸಾಕಿ ಸಲಹಿರೋದು ! ಇಂದು ನಿಮಗೆ ನಿಮ್ಮ ಜ್ಞಾನಶಕ್ತಿಯನ್ನು ಪ್ರದರ್ಶಿಸಲು ಕೊನೆ ಅವಕಾಶ ಕೊಡುತ್ತೇವೆ. ಎಲ್ಲರೂ ಸೇರಿ ನಮ್ಮ ಪ್ರಜೆಗಳು ತಮ್ಮ ನೆರಳಿನಿಂದ ಪೂರ್ಣವಾಗಿ ಮುಕ್ತರಾಗುವಂತಹ ಉಪಾಯ ಹುಡುಕಿ."

ವಿಶೇಷಜ್ಞರು ಉತ್ತರಿಸಿದರು—"ಮಹಾರಾಜರ ಆಜ್ಞೆಯನ್ನು ಶಿರಸಾ ವಹಿಸುತ್ತೇವೆ. ಆದರೆ ನಮ್ಮದೊಂದು ಶರತ್ತು. ಅದೇನೆಂದರೆ ನಮಗೆ ನಲ್ವತ್ತು ದಿನಗಳ

ಅವಕಾಶ ಬೇಕು. ಈ ನಲ್ವತ್ತು ದಿನಗಳೂ ನಲ್ವತ್ತು ಮೂಟೆ ದ್ವೀಪದ್ರಾಕ್ಷಿ ಮತ್ತು ಬಾದಾಮಿ ತಿನ್ನಿಸಬೇಕು. ಅದರಿಂದ ನಮ್ಮ ಬುದ್ಧಿ ಇನ್ನೂ ಪ್ರಖರವಾಗಲಿ. ನಾವು ನಲ್ವತ್ತೊಂದನೇ ದಿನ ಮಹಾರಾಜರ ಇಚ್ಛೆಯಂತೆ ಅವರನ್ನು ನೆರಳಿನಿಂದ ಪಾರು ಮಾಡುವ ವಿಧಿಯನ್ನು ಹೇಳುವೆವು."

ರಾಜ ವಿಶೇಷಜ್ಞರ ಶರತ್ತನ್ನು ಒಪ್ಪಿದ. ಆಗಾಗ್ಗೆ ರಾಜನಿಗೆ ವಿಶೇಷಜ್ಞರನ್ನು ಪರೀಕ್ಷಿಸುವ ಆಸೆಯಾಗುತ್ತಿತ್ತು. ಆಗ ಬೀಗದ ಕಂಡಿಯಿಂದ ಒಳಗೆ ನೋಡುತ್ತಿದ್ದ. ವಿಶೇಷಜ್ಞರು ಯಾವಾಗಲೂ ದ್ವೀಪದ್ರಾಕ್ಷಿ ಮತ್ತು ಬಾದಾಮಿ ತಿನ್ನುವುದರಲ್ಲಿ ಮಗ್ನರಿರುತ್ತಿದ್ದರು. ಮತ್ತೆ ಆಟ, ವಿನೋದದಲ್ಲಿ. ನಲ್ವತ್ತು ದಿನಗಳ ನಂತರ ಹೊರಬಂದು ಎಲ್ಲರಿಗಿಂತ ಹಿರಿಯ ವಿಶೇಷಜ್ಞ ಕೈಜೋಡಿಸಿ ಹೇಳಿದ–"ಮಹಾರಾಜರೇ! ದ್ವೀಪ ದ್ರಾಕ್ಷಿ ಮತ್ತು ಬಾದಾಮಿ ತಿಂದು ನಮ್ಮ ಬುದ್ಧಿ ಪ್ರಖರವಾಗಿದೆ. ತಮ್ಮ ಆಜ್ಞೆ ಯಂತೆ ಪ್ರಜೆಗಳು ತಮ್ಮ ನೆರಳಿನಿಂದ ಮುಕ್ತರಾಗಲು ಉಪಾಯ ಕಂಡು ಹಿಡಿದಿದ್ದೇವೆ."

ರಾಜ ಆಜ್ಞಾಪಿಸಿದ—"ಉಪಾಯವೇನೆಂದು ಹೇಳಿ?"

ಹಿರಿಯ ವಿಶೇಷಜ್ಞ ಹೇಳಿದ—"ಮಹಾರಾಜರೇ, ತಮಗೆ ಗೊತ್ತೇಯಿದೆ ರಾತ್ರಿಯಾಗುತ್ತಲೇ ನೆರಳು ಲೋಪ ಹೊಂದುತ್ತದೆ. ಆದ್ದರಿಂದ ನಮ್ಮ ಸಣ್ಣ ಸಲಹೆಯೇನೆಂದರೆ ಜನರನ್ನು ತಮ್ಮ ನೆರಳಿನಿಂದ ಮುಕ್ತಗೊಳಿಸಲು ರಾತ್ರಿ ಕತ್ತಲಿನ ವ್ಯವಸ್ಥೆ ಮಾಡಲೇಬೇಕು."

ರಾಜ ಈ ಸಲಹೆ ಕೇಳಿ ರೇಗಿ ಹೇಳಿದ—"ಆದರೆ ಮೂರ್ಖರೇ ಹಗಲ ಪ್ರಕಾಶದಲ್ಲಿ ರಾತ್ರಿಯ ಕತ್ತಲನ್ನು ತರುವುದಾದರೂ ಹೇಗೆ!"

"ಮಹಾರಾಜರೇ! ನಾವು ಹಗಲ ಪ್ರಕಾಶವನ್ನು ರಾತ್ರಿಯಕತ್ತಲ ಮೇಲೆ ಬಳಿದು ಬಿಡುತ್ತೇವೆ. ಇದಕ್ಕಾಗಿ ತಾವು ಒಂದು ಕೆಲಸ ಮಾಡಿ. ಒಂದು ಕತ್ತಲು ಕೋಣೆಯನ್ನು ನಿರ್ಮಿಸಿ. ಅಲ್ಲಿಗೆ ಸೂರ್ಯನ ಒಂದು ಕಿರಣವೂ ಪ್ರವೇಶಿಸದಿರಲಿ. ಪ್ರಜೆಗಳಲ್ಲಿ ಯಾರ ಬಾಯಿಂದ ದೂರು ಬಂದು ರಾಜನ ಶಾಂತಿಗೆ ಭಂಗ ಬರುವುದೋ ಅಂತಹವನನ್ನು ಕತ್ತಲ ಕೋಣೆಗೆ ಹಾಕಿ ಬಿಡಿ. ಕತ್ತಲೆಕೋಣೆ ಪ್ರವೇಶಿಸುತ್ತಲೇ ಅವನಿಗೆ ತನ್ನ ನೆರಳಿನಿಂದ ಮುಕ್ತಿ ಸಿಗುತ್ತದೆ. ಅವನು ಅದರ ಹೊರೆಯಿಂದ ಮುಕ್ತನಾಗಿ ಕೂಗಾಡುವುದನ್ನು ನಿಲ್ಲಿಸುತ್ತಾನೆ."

ರಾಜ ವಿಶೇಷಜ್ಞರ ಸಲಹೆಯಂತೆ ಕತ್ತಲೆ ಕೋಣೆಯನ್ನು ನಿರ್ಮಿಸಿದ. ಅದರಲ್ಲಿ ಸೂಜಿಯಷ್ಟೂ ರಂಧ್ರವನ್ನು ಬಿಡಲಿಲ್ಲ. ಯಾರಾದರೂ ಕೂಗಾಡುವುದು ಕಂಡರೆ ಅವರನ್ನು ಕತ್ತಲೆ ಕೋಣೆಗೆ ದಬ್ಬುತ್ತಿದ್ದರು. ನೆರಳಿನಿಂದ ಬಿಡುಗಡೆ ಸಿಗುತ್ತಲೇ ಇವರ ಕೂಗಾಟವಿರಲಿ, ಧ್ವನಿಯೇ ನಿಂತುಹೋಗುತ್ತಿತ್ತು. ಈ ರೀತಿ ಕತ್ತಲ ಕೋಣೆಯೊಳಗಿನವರಿಗೆ ತಮ್ಮ ನೆರಳಿನಿಂದ ಮುಕ್ತಿ ಸಿಗುತ್ತಿತ್ತು. ಹೊರಗಿನವರು. ಬೆಳಗಾಗುತ್ತಲೆ ಮೊದಲಿನಂತೆ ನರಳುತ್ತಿದ್ದರು.

ಎಷ್ಟು ಜನ ಅಂತ ಕತ್ತಲು ಕೋಣೆಯಲ್ಲಿ ತುರುಕಲು ಸಾಧ್ಯ. ಸ್ವಲ್ಪ ಸಮಯದಲ್ಲೇ ಕತ್ತಲೆ ಕೋಣೆ ತುಂಬಿಹೋಯಿತು. ರಾಜನ ಆದೇಶದಂತೆ ಕತ್ತಲು ಕೋಣೆಯನ್ನು ದೊಡ್ಡದು ಮಾಡಲಾಯಿತು. ಹೆಚ್ಚು ಸಮಯ ಕಳೆದಿಲ್ಲ ಮತ್ತೆ ಕೋಣೆಯಲ್ಲಿ ಎಳ್ಳಷ್ಟೂ ಜಾಗವಿಲ್ಲದಾಯ್ತು. ರಾಜ ಮತ್ತೆ ಅದನ್ನು ದೊಡ್ಡದು ಮಾಡಿಸಿದ. ಈ ಕಾರ್ಯ ಹೀಗೇ ಮುಂದುವರೆಯಿತು. ಇಡೀ ದೇಶ ಇಂದು ವಿಶಾಲವಾದ ಕತ್ತಲ ಕೋಣೆಯಲ್ಲಿ ಪರ್ಯವಸಾನವಾಯಿತು.

ಸೂರ್ಯನ ಪ್ರಕಾಶ ಈಗ ಕೆಲವೇ ಪ್ರದೇಶಗಳ ಮೇಲೆ ಬೀಳುತ್ತಿತ್ತು. ಅಲ್ಲಿ ರಾಜ, ಅರಮನೆ ಊಳಿಗದವರು, ದರಬಾರಿಗಳು ಮತ್ತು ವಿಶೇಷಜ್ಞರಲ್ಲದೆ ಕತ್ತಲ ಕೋಣೆಯಲ್ಲಿ ತುರುಕಲ್ಪಟ್ಟ ಲಕ್ಷಾಂತರ ಜನರ ನೆರಳುಗಳೂ ಬೀಳುತ್ತಿದ್ದವು. ಈ ನೆರಳುಗಳು ರಾತ್ರಿಯಲ್ಲಿ ಕಾಣಿಸುತ್ತಿರಲಿಲ್ಲ. ಆದರೆ ಬೆಳಗಾಗುತ್ತಲೇ ನೆಲದ ಮೇಲೆ ಹರಿದಾಡುತ್ತಿದ್ದವು. ವರ್ಷಗಟ್ಟಲೆ ಮನುಷ್ಯನ ನೆರಳಿನ ಪಾತ್ರ ವಹಿಸುತ್ತಾ ಮನುಷ್ಯರೊಂದಿಗೆ ಜೀವನ ನಡೆಸುತ್ತಾ ಈಗ ನೆರಳುಗಳೂ ಮನುಷ್ಯರಂತೆಯೇ ಕಾಣತೊಡಗಿದವು. ಆದರೆ ಇವುಗಳಲ್ಲಿ ಮನುಷ್ಯರಂತೆ ತಮ್ಮ ಕಾಲ ಮೇಲೆ ನಿಲ್ಲುವ ಸಾಮರ್ಥ್ಯ ಇರಲಿಲ್ಲ. ಅಲ್ಲಿಗೆ ಪ್ರಜೆಗಳಲ್ಲಿ ಕೆಲವು ಜನ ಮಾತ್ರ ಈಗ ಕತ್ತಲ ಕೋಣೆಯಿಂದ ಹೊರಗಿದ್ದರು. ಆದರೆ ಅವರು ಕತ್ತಲು ಕೋಣೆ ಸೇರುವ ಭಯದಿಂದ ತಮ್ಮ ಬಾಯಿಗೆ ಬೀಗ ಹಾಕಿಕೊಂಡಿದ್ದರು. ಯಾರಿಗೂ ಈಗ ನಾವು ಎಳೆಯಲಾರೆವು ಅಥವಾ ನಾವು ಕಾಲು ಎತ್ತಲಾರೆವು ಎಂದು ಹೇಳುವ ಧೈರ್ಯವಿರಲಿಲ್ಲ. ಕೆಲವು ವೇಳೆ ಕೇಳುವುದಕ್ಕೆ ಮೊದಲೇ ತಮಗೆ ತಾವೇ ಪ್ರಾಯಃ ಹೀಗೆ ಹೇಳುತ್ತಿದ್ದರು— "ಈಗ ನಮಗೆ ಅಭ್ಯಾಸವಾಗಿಬಿಟ್ಟಿದೆ. ಈಗ ನಾವು ಕಾಲು ಎಳೆಯಲೂ ಬಲ್ಲೆವು, ಎತ್ತಿಡಲೂ ಬಲ್ಲೆವು."

ಆ ನಂತರ ಆ ದೇಶದಲ್ಲಿ ಎಂದೂ ಜನತೆಯ ಕೂಗು ಕಿರುಚಾಟ,ಅಳು-ಆಕ್ರಂದನ ರಾಜನ ಕಿವಿಗೆ ಬೀಳಲಿಲ್ಲ. ಮತ್ತೆ ರಾಜನ ನಿದ್ರೆಗೆ ಎಂದೂ ಭಂಗಬರಲಿಲ್ಲ.

# ಹುಚ್ಚಾದವ

ಮೂಲ : ಕಿಶೋರನೇಪಾಲ್
ಅನು : ಡಾ|| ಟಿ. ಜಿ. ಪ್ರಭಾಶಂಕರ 'ಪ್ರೇಮಿ'

ಎಂಬತ್ತು ದಿನಗಳು ಕಳೆದುಹೋಗಿವೆ. ಈ ಎಂಬತ್ತು ದಿನಗಳು ಕಳೆದು ಹೋದರೂ ಏನೂ ಪ್ರಯೋಜನವಾಗಿಲ್ಲ. ದೊಡ್ಡಮ್ಮನ ಕಾಯಿಲೆ ಇಳಿದೂ ಇಲ್ಲ, ಏರೂ ಇಲ್ಲ. ಆದರೆ ನರಳುವುದು ಸ್ವಲ್ಪ ಹೆಚ್ಚಾಗಿದೆ. ಒಂದರ್ಧ ಗ್ಲಾಸ್ ಹಾರ್ಲಿಕ್ಸ್ ಕುಡಿಯುತ್ತಾರೆ. ಆಗಾಗ್ಗೆ ನರಳುವುದು ಬಿಟ್ಟು ಹಣ್ಣುಗಳು ಬೇಕೆನ್ನು ತ್ತಾರೆ. ಆದರೆ ಈ ಬೇಡಿಕೆ? ಅವನ ಮೇಲೆ ಯಾವ ಪರಿಣಾಮವನ್ನೂ ಬೀರು ವುದಿಲ್ಲ. ಆದರೆ ದೊಡ್ಡಮ್ಮ ಮೊದಲ ಸಲ ಕಾಯಿಲೆ ಬಿದ್ದಿದ್ದಾಗ ಅವರ ಸೇವೆಯಲ್ಲಿ ಆಸಕ್ತಿ ವಹಿಸಿದ್ದ. ಕಟುಕ ಹೃದಯದ ಆಫೀಸರನ ಮುಂದೆ ಕಾಡಿ ಬೇಡಿ ಮುಂಗಡ ಸಂಬಳದ ಹಣ ತಂದಿದ್ದ. ಆದರೆ ಈಗ ಏನೂ ಮಾಡಲು ಶಕ್ತನಾಗಿರಲಿಲ್ಲ. ಸಾಲದ ಹೊರೆಯಿಂದ ಎಷ್ಟು ಕುಗ್ಗಿದ್ದಾನೆಂದರೆ ಇನ್ನೂ ಕುಗ್ಗುವುದು ಸಾಧ್ಯವೇ ಇರಲಿಲ್ಲ. ಆದ್ದರಿಂದಲೇ ಹೆಂಡತಿ ಬೆಳಗ್ಗೆ ಮಾಟಗಾರನಲ್ಲಿಗೆ ಹೋಗಲು ಐದು ರೂಪಾಯಿ ಕೇಳಿ ದಾಗ ಹೇಳಿದ್ದು - "ನನಗೆ ಈ ಮಾಟಗಾರರಲ್ಲಿ ವಿಶ್ವಾಸವೂ ಇಲ್ಲ, ನನ್ನ ಹತ್ತಿರ ಹಣವೂ ಇಲ್ಲ."

ನೆರೆಮನೆಯ ಮಾಲತಕ್ಕನಿಂದ ಸಾಲ ತೆಗೆದುಕೊಂಡು ನನ್ನ ಹೆಂಡತಿ ಆ ಮಾಟ ಗಾರನಲ್ಲಿಗೆ ಹೋಗಿದ್ದಳಂತೆ. ಈ ವಿಷಯ ಆಮೇಲೆ ತಿಳಿಯಿತು. ಅಲ್ಲಿಂದ ಬಂದು ಹೇಳುತ್ತಿದ್ದಳು. ದೊಡ್ಡಮ್ಮನಿಗೆ ಏನೂ ಆಗಿಲ್ಲ. ನನಗೂ ಭೂತ ಪ್ರೇತವೇನು ಹಿಡಿದಿಲ್ಲ, ಕೇವಲ ನಿಶ್ಶಕ್ತಿ ಇದೆ. ಇದು ಇವನಿಗೆ ಮೊದಲೇ ತಿಳಿದಿತ್ತು. ಹೆಂಡತಿಗೆ ಎನಿಮಿಕ್ ಎಂದು. ಅವಳ ರಕ್ತಹೀನ ಮುಖ ನೋಡಿ ಯಾರಾದರೂ ಹೇಳಬಹು ದಿತ್ತು,

ಕಟ್ಮಂಡೂನಲ್ಲಿ ಮನೆ ಹೊಂದುವುದು ಒಂದು ಸಂತೋಷದ ಸಂಗತಿ. ಆದರೆ ಆ ಹೆಸರಿಗೆ ಮಾತ್ರ ಮನೆಯಾಗಿದ್ದಾಗ, ಅದರಲ್ಲಿ ವಾಸಿಸುವುದು ಕುಲುಮೆಯಲ್ಲಿ ಎಸೆ ದಂತಾದಾಗ ಅಂಥಾ ಮನೆ ಇರುವುದು ಇಲ್ಲದಿರುವುದೂ ಎರಡೂ ಒಂದೇ. ಮೂರು ಕೋಣೆಯ ಈ ಮನೆಯ ಕೆಳಕೋಣೆಯಲ್ಲಿ ತನಗಾಗಿ ಒಂದು ಮಂಚ ಹಾಕಿಕೊಂಡಿದ್ದ.

ದೊಡ್ಡಮ್ಮ ಕಾಯಿಲೆ ಬಿದ್ದಿದ್ದರಿಂದ ಅವರನ್ನು ಅಲ್ಲೇ ಮಲಗಿಸಿದ್ದ. ಏಕೆಂದರೆ ಆ ಹಿಂದೂ ದೊಡ್ಡಮ್ಮ ಮನೆಯ ಮೇಲಿನ ಅಂತಸ್ತಿನ ಕೋಣೆಯಲ್ಲಿ ಸಾಯಲು ಇಷ್ಟಪಡುವುದಿಲ್ಲ. ಅದರಿಂದಾಗಿ ಸಾಕಷ್ಟು ಬೇಸತ್ತಿದ್ದ. ತೊಂಬತ್ತೊಂಬತ್ತು ವರ್ಷ ವಯಸ್ಸಿನಲ್ಲೂ ಅವರಲ್ಲಿರುವ ಜೀವನದ ಆಸಕ್ತಿ ಆಶ್ಚರ್ಯ ಹುಟ್ಟಿಸುವಂತಿತ್ತು. ಆದರೆ ದೊಡ್ಡಮ್ಮ ಸಾಯುವುದಿಲ್ಲ. ಇದರಲ್ಲಿ ದೊಡ್ಡಮ್ಮನದೇನು ತಪ್ಪು. ಕಾಯಿಲೆ ಪ್ರಾರಂಭವಾದ ದಿನಗಳಲ್ಲಿ ದೊಡ್ಡಮ್ಮನ ಹತ್ತಿರ ಹೋದರೆ ನರಳುತ್ತಾ ಹೇಳುತ್ತಿದ್ದರು - "ನನಗೆ ಒಂದು ಸ್ವಲ್ಪ ವಿಷ ಕೊಟ್ಟುಬಿಡೊ."

ಹೀಗಾಗಿ ಎಂಬತ್ತು ದಿನಗಳಿಂದ ಅವನು ಸ್ಟೋರ್ ರೂಮಿನಲ್ಲಿ ಮಲಗುತ್ತಿದ್ದ. ಇಲ್ಲದಿದ್ದರೂ ಅವನು ಮಡದಿ-ಮಕ್ಕಳ ಜೊತೆ ಮಲಗುತ್ತಿರಲಿಲ್ಲ. ಮನೆಯಲ್ಲಿ ಸೊಳ್ಳೆಪರದೆ ಇರುವುದೇ ಎರಡು. ಒಂದು ದೊಡ್ಡಮ್ಮನಿಗೆ ಮತ್ತೊಂದು ಹೆಂಡತಿ ಮಕ್ಕಳಿಗೆ. ಆದ್ದರಿಂದ ಅವನು ಸೊಳ್ಳೆನಾಶಕ ಬತ್ತಿ ಹತ್ತಿಸಿ ಮಲಗಲು ಯತ್ನಿಸುತ್ತಿದ್ದ. ಆದರೆ ಇಡೀ ರಾತ್ರಿ ಅವನಿಗೆ ನಿದ್ರೆ ಬರುತ್ತಿರಲಿಲ್ಲ. ಮತ್ತೆ ಬೆಳಗ್ಗೆ ಮಕ್ಕಳ ಗಲಾಟೆಯಿಂದಾಗಿ ಬೇಗ ಎಚ್ಚರಾಗುತ್ತಿತ್ತು. ಅವನು ಸುಮ್ಮನೆ ಹಾಸಿಗೆ ಮೇಲೆ ಬಿದ್ದಿರುತ್ತಿದ್ದ. ಹತ್ತು ಹೊಡೆಯುತ್ತಲೇ ಎರಡು ತುತ್ತು ಅನ್ನ ತಿಂದು ಆಫೀಸಿಗೆ ಹೋಗುತ್ತಿದ್ದ.

"ಉಫ್! ಏನು ಸೆಕೆ!" ಆಫೀಸಿಗೆ ಹೋಗುತ್ತಲೆ ನೀರು ಕೇಳುತ್ತಿದ್ದ. ಕುರ್ಚಿ ಮೇಲೆ ಕುಸಿದು ದಣಿವಾರಿಸಿಕೊಳ್ಳುತ್ತಿದ್ದ. ಅಷ್ಟರಲ್ಲೆ ಇಂಟರ್‌ಕಾಮ್‌ನಲ್ಲಿ ಕರ್ಕಶ ಧ್ವನಿಯಲ್ಲಿ ಕೂಗು – "ಹಲೋ! ಹ್ಞಾ ಆದಿತ್ಯನೇ ಮಾತಾಡೋದು. ಎಸ್ ಸಾರ್! ಏನು ಬರೀಬೇಕು. ಎಸ್ ಸಾರ್ ಐ ಅಂಡರ್‌ಸ್ಟ್ಯಾಂಡ್. ಓ.ಕೇ. ಸರ್, ಓಹ್, ನೋ ಸರ್....!"

ಅವನಿಗೋ ನಗು. ಈ ಮೇಲಿನ ಅಧಿಕಾರಿಗಳು ಎಷ್ಟು ದಿನ ಹೀಗೆ ಸುಳ್ಳು ಹೇಳುತ್ತಾ ಇರ್ತಾರೆ! ಈಗ ಸಾಹೇಬರು, ಸ್ಥಿರ ಮೂಲ್ಯಸ್ಥಿತಿ ಮತ್ತು ನೇಪಾಳಿ ಮಾರ್ಕೆಟ್ ವ್ಯವಸ್ಥೆ ಬಗ್ಗೆ ಒಂದು ವರ್ಕಿಂಗ್ ಪೇಪರ್ ಬರೆಯಲು ಹೇಳಿದ್ದಾರೆ. ಹೇಳುತ್ತಾರೆ – "ಸಂಖ್ಯೆಗಳ ತುಂಬಿಬಿಡು." ಆದರೆ ಇದು ನಿಜಸ್ಥಿತಿಯೇ! ಇಲ್ಲದಿದ್ದರೆ ಅವರಿಗೇನು? ಈ ಸಂಬಳದಾರರಿಗೆ ಮೂಲ್ಯಸ್ಥಿತಿ ಕಟ್ಟಿಕೊಂಡು ಏನಾಗಬೇಕಾಗಿದೆ! ಸ್ವಲ್ಪ ದಿನದ ಹಿಂದೆ ಒಬ್ಬ ಪತ್ರಕರ್ತ ಹೇಳುತ್ತಿದ್ದ. ಅಕ್ಕಿಯ ಬೆಲೆಯಲ್ಲಿ ಶೇಕಡ ನೂರರಷ್ಟು ವೃದ್ಧಿಯಾಗಿದೆ. ಇದರಲ್ಲಿ ಮುಚ್ಚುಮರೆಯೇನು! ಸ್ವತಃ ಅವನಿಗೂ ಗೊತ್ತು. ಆದರೆ ಈ ಸತ್ಯ ಸಾಹೇಬರ ವರ್ಕಿಂಗ್ ಪೇಪರ್‌ನಲ್ಲಿ ಬರಬಾರದು. ಸತ್ಯ ಸತ್ಯವೇ ಅಲ್ಲವೇ! ಆದ್ದರಿಂದ ಕಟ್ಟಿದ ಸುಳ್ಳನ್ನು ಸತ್ಯವೆಂದು ಸಾಬೀತು ಪಡಿಸಲು ಸಮ್ಮೇಳನ ಕರೆಯಬೇಕಾಗುತ್ತೆ. ಅವನು ಪೆನ್ನು ಕಾಗದ ಸರಿಪಡಿಸಿಕೊಂಡು ಬರೆಯುತ್ತಾನೆ – ನೆರೆದಿರುವ ಮಹನೀಯರೇ ಮತ್ತು ಮಹಿಳೆ

ಯರೇ – "ನಮ್ಮಲ್ಲಿ ಹಿಂದಿನ ಐದು ವರ್ಷ ಮೂಲ್ಯದ ದೃಷ್ಟಿಯಿಂದ ಗ್ರಾಹಕರಿಗೆ......" ಟೆಲಿಫೋನ್ ಗಂಟೆ ಬಾರಿಸುತ್ತದೆ.

"ಹ್ಲಾ ! ನಾನೇ ಮಾತಾಡೋದು ! ಏನಾಯ್ತು?... ಹಾ ! ಈಗಲೇ ಬಂದೆ."

ಟೆಲಿಫೋನ್ ಇಡುತ್ತಾ ಸ್ವಲ್ಪ ನಗುತ್ತಾನೆ. ಅವನ ಒಳಗೆ ಒಂದು ಕ್ಷೀಣ ನಗು ಮತ್ತು ಕ್ಷೀಣ ಸಂತೋಷ. ಸಾಹೇಬರ ಕೋಣೆಗೆ ಹೋಗುತ್ತಾನೆ.

"ಅದು ಸರಿ ! ಆದರೆ ವರ್ಕಿಂಗ್ ಪೇಪರ್ ಗತಿಯೇನು ಮಿಸ್ಟರ್ ಆದಿತ್ಯ !"

"ನಾನು ತಯಾರು ಮಾಡಿಬಿಡುತ್ತೇನೆ ಸರ್. ನಾಳೆ ಬೆಳಗ್ಗೆ ನಿಮ್ಮ ಮನೆಗೆ ಕೊಟ್ಟು ಹೋಗ್ತೇನೆ. ನೀವು ಚೆಕ್ ಮಾಡಿಬಿಡಿ."

"ಓಹ್ ! ಇಲ್ಲ ಆದಿತ್ಯ. ಆ ಮುದುಕಿ ಸತ್ತೇಹೋದರೆ ?"

"ಶೇಖರ್‌ನಿಗೆ ಹೇಳಲೇ ಸರ್."

"ಬೇಡ ! ಹೀ ಕಾಂಟ್ ರಾಯಿಟ್ ಮೈ ಬಾಯ್."

"ಹಾಗಾದರೆ ! ನಾನು ಅಲ್ಲಿಗೆ ಹೋಗುವುದು ಎಷ್ಟು ಅವಶ್ಯಕ ಅನ್ನೋದು ತಮಗೆ ಅನ್ನಿಸಿದೆ."

"ಅದು ಸರಿಯೆ. ಆದರೆ, ಒಂದು ಕೆಲಸ ಮಾಡಿ. ಯಾರಾದರೂ ಪ್ಯೂನನ್ನು ಮನೆಗೆ ಕಳುಹಿಸಿ. ನಿಮಗೇನು ಟೈಮ್ ಹಿಡಿಯೋದಿಲ್ಲ, ಐ ಥಿಂಕ್, ಯೂ ವಿಲ್ ಕಂಪ್ಲೀಟ್ ಇಟ್ ವಿಥಿನ್ ಟೂ ಹವರ್ಸ್. ಇಟ್ ಇಜ್ ಎ ಕೊಶ್ಚನ್ ಆಫ್ ಪ್ರೆಸ್ಟೀಜ್ ಆದಿತ್ಯ."

ಅವನು ತನ್ನ ಜಾಗಕ್ಕೆ ಬಂದು ಬರೆಯತೊಡಗುತ್ತಾನೆ – 'ಇತ್ತೀಚೆಗೆ ಆಗಿರುವ ಮೂಲ್ಯವೃದ್ಧಿಯನ್ನು ನಾವು ಪರ್‌ಕ್ಯಾಪಿಟಾ ಇಂಕಮ್ ಜೊತೆ ಸೇರಿಸಿ ನೋಡಿದರೆ ಈ ವೃದ್ಧಿ ಏನೇನೂ ಅಲ್ಲ ಅನ್ನೋದು ಗೊತ್ತಾಗುತ್ತದೆ.'

ರಾಮುಮಾನ್ ಒಂದು ಕಾಫಿ ತಂದಿಡುತ್ತಾನೆ. ಸಾಹೇಬರು ಕಳ್ಸಿದ್ರು ಅಂತ. ಕಾಫಿ ಕುಡಿದು ಮತ್ತೆ ಬರೆಯುತ್ತಾನೆ. ಸುಮಾರು ಒಂದು ಗಂಟೆಯಲ್ಲಿ ಅವನು ವರ್ಕಿಂಗ್ ಪೇಪರಿನ ಪ್ರಿಲಿಮಿನರಿ ಡ್ರಾಫ್ಟ್ ಸಿದ್ಧಪಡಿಸಿ ಟೈಪಿಸ್ಟ್‌ಗೆ ಕೊಟ್ಟು ಹೊರಡುತ್ತಾನೆ.

ಮನೆಗೆ ಬಂದು ನೋಡುತ್ತಾನೆ ದೊಡ್ಡಮ್ಮನಿಗೆ ಲಕ್ವ ಹೊಡೆದಿದೆ. ಆದರೂ ಈ ಮುದುಕಿ ಈಗಲೇ ಸಾಯುವುದಿಲ್ಲ. ದುಃಖ ಈಗ ಪ್ರಾರಂಭ ಅಷ್ಟೆ ಕೊನೆಯಲ್ಲ ಎಂದನ್ನಿಸುತ್ತದೆ ಅವನಿಗೆ. ಡಾಕ್ಟರನ್ನು ಕರೆತರುತ್ತಾನೆ. ಅಲ್ಲಿನ ಆಸ್ಪತ್ರೆಯ ಡಾಕ್ಟರ್ ಪರೀಕ್ಷಿಸಿ ಹೇಳುತ್ತಾರೆ – "ಪೆರಲಿಸಿಸ್ ಹೊಡೆದಿದೆ. ಆಸ್ಪತ್ರೆಗೆ ಸಾಗಿಸು."

"ಆದರೆ ಡಾಕ್ಟರೇ, ಆಸ್ಪತ್ರೆಗೆ ಕರೆದುಕೊಂಡು ಹೋಗೋದು ಕಷ್ಟ. ನಿಮಗೆ ಗೊತ್ತೇ ಇದೆ." ತೊಂಬತ್ತೊಂಬತ್ತು ವರ್ಷದ ಮುದುಕಿಯನ್ನು ಆಸ್ಪತ್ರೆ ಉಳಿಸು ವುದೇ ಎಂದುಕೊಳ್ಳುತ್ತಾನೆ.

"ಹಾಗಾದರೆ ಕೆಲವು ಇಂಜೆಕ್ಷನ್ ಬರೆದುಕೊಡುತ್ತೇನೆ. ಈ ಮಿಕ್ಸ್‌ಚರ್

ಕುಡಿಸಿ, ಸೈಲಾಯಿನ್ ನೀರು ಕೊಡಬೇಕು. ಸ್ಟೆಂಡ್ ನನ್ನಲ್ಲಿಂದ ತೆಗೆದುಕೊಂಡು ಹೋಗಿ."

ಅವನು ಡಾಕ್ಟರ್ ಕೊಟ್ಟ ಪ್ರಿಸ್ಕ್ರಿಪ್ಷನ್ ತೆಗೆದುಕೊಂಡು ಆಫೀಸ್ ಕಡೆ ಹೊರಡುತ್ತಾನೆ. ಈ ತಿಂಗಳ ಸಂಬಳದಲ್ಲಿ ಅವನಿಗೆ ಅಡ್ವಾನ್ಸ್ ಸಿಗೋದಿಲ್ಲ. ಅವನು ಪ್ರಾವಿಡೆಂಟ್ ಫಂಡ್‌ನಿಂದ ಹಣ ತೆಗೆಯಲು ಅರ್ಜಿ ಬರೆಯುತ್ತಾನೆ. ಬಹುಶಃ ಸಾಹೇಬರಿಗೆ ವರ್ಕಿಂಗ್ ಇಷ್ಟವಾಗಿರಬಹುದು. ಆದ್ದರಿಂದ ಯಾವ ಅಡಚಣೆಯಿಲ್ಲದೆ ಅರ್ಜಿ ಪಾಸಾಗಬಹುದು. ಅರ್ಥಿಕ ವಿಭಾಗದಿಂದ ಹೊರಟು ಅವನು ಡಾಕ್ಟರ್ ಹತ್ತಿರ ಹೋಗುತ್ತಾನೆ.

ಈ ಎಂಬತ್ತು ದಿನಗಳಲ್ಲಿ ಅವನು ಎಷ್ಟೊಂದು ಸೋತುಹೋಗಿದ್ದಾನೆ, ಅಂದರೆ ಅವನು ಏನೂ ಮಾಡಲು ಅಸಮರ್ಥ. ಯೋಗೇಶ ಅವನಿಗೆ ಸ್ವಲ್ಪ ಕೆಲಸ ಹೇಳಿದ್ದ, ಆದರೆ ಮನುಷ್ಯ ಸೋತುಹೋದಾಗ ಏನು ಮಾಡುವುದೂ ಕಷ್ಟ ವಾಗುತ್ತದೆ. ಈ ಎಂಬತ್ತು ದಿನಗಳಲ್ಲಿ ಅವನಿಗೆ ಮತ್ತೆ ಮತ್ತೆ ನಿದ್ರೆ ಭಂಗವಾಗಿದೆ. ನರಳುವಿಕೆಗೆ ಅವನಿನ್ನೂ ಹೊಂದಿಕೊಂಡಿಲ್ಲ. ಮತ್ತೆ ಮತ್ತೆ ಯೋಚಿಸುತ್ತಾನೆ. ದೊಡ್ಡಮ್ಮ ಸಾಯಬೇಕೋ, ಬೇಡವೋ ? ಸಾವೆಂದರೆ ಅವನಿಗೆ ಹೆದರಿಕೆಯೇ. ಆದರೆ ಅವನೀಗ ಬದುಕುತ್ತಿರುವ ಸ್ಥಿತಿ ಅದೂ ಕೂಡ ಅಷ್ಟೇ ಭಯಂಕರ. ಅವನೇನು ಮಾಡಿಯಾನು ?

ಯೋಚಿಸುತ್ತಾನೆ - ತಾಯಿ ಬಂದಿದ್ದರೆ ಅವನ ದುಃಖ ಕಡಿಮೆಯಾಗು ತ್ತಿತ್ತೇನೊ. ಆದರೆ ತಾಯಿ ಸುದ್ದಿ ಕಳುಹಿಸಿದ್ದಾಳೆ. 'ಬಹುಶಃ ನಾನು ಈಗಲೇ ಬರಲಾರೆ. ಆದರೂ ಸುದ್ದಿ ತಿಳಿಸುತ್ತಿರು. ಹ್ಞಾ ಗಮನದಲ್ಲಿರಲಿ. ದೊಡ್ಡಮ್ಮನ ಉಯಿಲು ಬರೆಸಿ ರಿಜಿಸ್ಟರ್ ಮಾಡಿಸಿಬಿಡು.' ಇದೇನೋ ಸರಿ. ಆದರೆ ದೊಡ್ಡಮ್ಮ ನಿಗೆ ಹೇಗೆ ಹೇಳೋದು. ದೊಡ್ಡಮ್ಮ ನೀನು ಸಾಯುತ್ತೀಯ. ಸಾಯೋ ಮೊದಲು ಈ ಉಯಿಲಿಗೆ ಸಹಿ ಮಾಡಿಬಿಡು ಅಂತ.

ಕೇವಲ ನರಳುವುದನ್ನು ಕೇಳಿಸಿಕೊಳ್ಳುತ್ತಿದ್ದೇನೆ. ಒಂದು ತಿಂಗಳಿಂದ ದೊಡ್ಡಮ್ಮನ ಹತ್ತಿರ ಹೋಗಿಲ್ಲ. ಹೇಗೆ ಹೋದಾನು ! ಪ್ರಜ್ಞೆ ಬರುತ್ತಲೇ ಹೇಳುವಳು – ನನಗೆ ವಿಷ ಕೊಟ್ಟುಬಿಡು. ಪ್ರಜ್ಞೆ ಬರದಿದ್ದರೆ ಅಪ್ಪ, ತಾತ ಮುತ್ತಾತ ಎಲ್ಲರನ್ನೂ ಬಯ್ಯುವಳು. ಬಯ್ಗಳು ಕೂಡ ಆರಿಸಿ ಆರಿಸಿಕೊಂಡು ಎಷ್ಟು ಕೆಟ್ಟದಾಗಿ ಬಯ್ಯುವಳೆಂದರೆ ತಕ್ಷಣ ವಿಷ ಕೊಟ್ಟುಬಿಡಬೇಕು ಅನ್ನಿಸುತ್ತೆ. ಮುದುಕಿ ವಿಷ ತಿನ್ನುವಳೇ ? ಅದರ ಕಲ್ಪನೆಯೇ ಅವನಿಗೆ ಭಯಂಕರವಾಗಿ ಕಾಣು ತ್ತದೆ. ದುರ್ಬಲ ಮನಸ್ಥಿತಿಯಲ್ಲಿ ಯೋಚಿಸುತ್ತಾನೆ. ಕಾಯಿಲೆಯಾದರೆ ಅವಳ ದೇನು ತಪ್ಪು. ಪಾಪ ಬಹಳ ದುಃಖ ಅನುಭವಿಸಿದ್ದಾಳೆ. ದೊಡ್ಡಮ್ಮ ತೊದಲುತ್ತಾ ಹೇಳುತ್ತಾಳೆ. ಹಿಂದಿನ ಜನ್ಮದಲ್ಲಿ ದೊಡ್ಡ ಪಾಪ ಮಾಡಿದ್ದೆ ಅಂತ ಕಾಣುತ್ತೆ.

ಅದರ ಫಲ ಈಗ ಅನುಭವಿಸುತ್ತಿದ್ದೇನೆ. ಈಗ ಮುದುಕಿಯ ಮಾತುಗಳು ಕೂಡ ಸ್ಪಷ್ಟವಾಗಿಲ್ಲ.

ನಿಜ ಹೇಳಬೇಕೆಂದರೆ ಅವನಿಗೆ ದೊಡ್ಡಮ್ಮನ ಮೇಲೆ ಸಹಾನುಭೂತಿ ಹೆಚ್ಚು. ಅವಳ ನರಳುವಿಕೆ ಕೇಳಿ ಎಷ್ಟೋ ಬಾರಿ ಅತ್ತಿದ್ದಾನೆ. ಅವರ ಬಗ್ಗೆ ಇಷ್ಟೊಂದು ಸಹಾನುಭೂತಿಗೆ ಕಾರಣ ದೊಡ್ಡಮ್ಮ ಇವನನ್ನು ಮಗನಿಗಿಂತ ಹೆಚ್ಚಾಗಿ ಸಾಕಿ ಸಲಹಿದರು. ಮಸಿ ಒಂದು ಬಿಟ್ಟು ದೊಡ್ಡಮ್ಮ ಎಷ್ಟು ಅನುಕೂಲ ಮಾಡ ಬಹುದೋ ಅದನ್ನೆಲ್ಲಾ ಮಾಡಿದ್ದಳು. ಈಗಲೂ ಅವನಿಗೆ ದೊಡ್ಡಮ್ಮನ ಮೇಲೆ ಸ್ನೇಹ. ಅವನಿಗೆ ಬೇಸರ ಅಂದರೆ ದೊಡ್ಡಮ್ಮನ ಕಾಯಿಲೆಯಿಂದಾಗಿ ಅವನು ಮನೆಯಿಂದ ಹೊರತಾಗಿದ್ದಾನೆ. ಮನೆ ಅಂದರೆ ದೊಡ್ಡಮ್ಮ. ಜೀವನದ ಕೊನೆ ದಿನಗಳಲ್ಲಿ ಅವಳಿಗೆ ಯಾವ ಸುಖವೂ ಸಿಗಲಿಲ್ಲ ! ತನ್ನೆಲ್ಲಾ ತೊಂದರೆಗಳನ್ನು ಮರೆತು ದೊಡ್ಡಮ್ಮನಿಗಾಗಿ ಹೊಸದಾಗಿ ಯೋಚಿಸುತ್ತಾನೆ. ಸಹಾನುಭೂತಿಯಿಂದ ಯೋಚಿಸು ವುದನ್ನು ಬಿಟ್ಟು ಅವನೇನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅವನ ಕೈಕಟ್ಟಿದೆ. ಸಾಲದ ಮಡುವಿನಲ್ಲಿ ಸಿಕ್ಕಿಕೊಂಡಿದ್ದಾನೆ. ಹಿಂದಿನವರು ಕೂಡಿಟ್ಟಿದ್ದ ಬೆಳ್ಳಿಬಂಗಾರ ವನ್ನು ಮಾರಿಬಿಟ್ಟಿದ್ದಾನೆ ದೊಡ್ಡಮ್ಮ ಅವನನ್ನು ಉತ್ತರಾಧಿಕಾರಿಯೆಂದು ಒಪ್ಪದಿದ್ದರೆ ಅವನು ನೇಪಾಳದಲ್ಲಿ ಹುಟ್ಟಿನಿಂದ ಪೌರ ಎಂದು ದೃಢಪಡಿಸಲು ಅಷ್ಟು ಸಂಪತ್ತೂ ಇಲ್ಲ.

"ಆದಿತ್ಯ ಸಾಹೇಬರೇ, ದೊಡ್ಡ ಸಾಹೇಬರು ಕರಿತಾವ್ರೆ."

ಅವನು ದೊಡ್ಡಸಾಹೇಬರ ರೂಮಿನ ಕಡೆ ಹೋಗುತ್ತಾನೆ. ಸಾಹೇಬರು ಕಾಫಿ ಜೊತೆಗೆ ಇಂಪೋರ್ಟೆಡ್ ಸಿಗರೇಟ್ ಸೇದುತ್ತಿದ್ದಾರೆ. ಅವನು ಅವರೆದುರು ಕುಳಿತುಕೊಳ್ಳುತ್ತಾನೆ. ಸಾಹೇಬ್ರು ಸಿಗರೇಟ್ ಕೊಡುತ್ತಾರೆ. ಕಾಫಿ ಕುಡಿಯಲು ಹೇಳುತ್ತಾರೆ. ನಂತರ ಹೇಳುತ್ತಾರೆ – "ಮಿಸ್ಟರ್ ಆದಿತ್ಯ, ನೀವು ನನ್ನ ಪ್ರತಿನಿಧಿ ಯಾಗಿ ಹೋಗಬೇಕಾಗಿದೆ !"

"ಆದರೆ ಎಲ್ಲಿಗೆ ಸರ್ !" ಕಟುಕನಂತಹ ಆಫೀಸರನ ಬದಲಾದ ಸ್ವಭಾವ ಕಂಡು ಆದಿತ್ಯನಿಗೆ ಆಶ್ಚರ್ಯವಾಗುತ್ತದೆ.

"ಬೆಂಗಳೂರಿಗೆ. ಅಲ್ಲಿ ಒಂದು ಸಮ್ಮೇಳನ ನಡೆಯುತ್ತಿದೆ. ಅಲ್ಲಿ ನೀವು ನನ್ನನ್ನು ಪ್ರತಿನಿಧಿಸಬೇಕಾಗಿದೆ. ನಾನೇ ಹೋಗುತ್ತಿದ್ದೆ. ಆದರೆ ಕೆಲವು ದಿನಗಳಿಂದ ಮೇಡಂನ ಆರೋಗ್ಯ ಚೆನ್ನಾಗಿಲ್ಲ."

"ಆದರೆ ನಾನೇ ಹೋಗಬೇಕಾ ಸರ್ ? ಬೇರೆಯವರು ?"

"ನೋಡಿ ಆದಿತ್ಯ. ನಾನು ನಿಮಗೆ ಒಂದು ಚಾನ್ಸ್ ಕೊಡುತ್ತಿದ್ದೇನೆ. ನೀವೋ ಬೇಡ ಅನ್ನುತ್ತಿದ್ದೀರಿ. ಹೀಗಾದರೆ ನೀವು ಪ್ರಗತಿ ಸಾಧಿಸಲಾರಿರಿ, ಗೊ ಗೆಟ್ ಮೈ ಬಾಯ್. ಇಟ್ ಈಜ್ ಎ ಗ್ರೇಟ್ ಚಾನ್ಸ್ ಫಾರ್ ಯುವರ್ ಕೆರಿಯರ್,"

"ಐ ಆವಮ್ ಗ್ರೇಟ್‌ಫೂಲ್ ಟು ಯೂ ಸರ್. ಬಟ್ ಮೈ ಫೆಮಿಲಿ ಸಿಚುಯೇಷನ್ ಡಸಂಟ್ ಅಲೋ ಮೀ ಟು ಗೊ."

"ಆದಿತ್ಯ ಇದನ್ನ ನನ್ನ ಆಜ್ಞೆ ಎಂದು ತಿಳಿಯಿರಿ. ಫೆಮಿಲಿ ಮೆಟರ್ಸ್ ಹಾಗಿರಲಿ. ಇದನ್ನು ಬಹಳ ಸಹಜವಾಗಿ ತೆಗೆದುಕೊಳ್ಳಬೇಕು."

"ಥೈಂಕ್ ಯೂ ಸರ್." ಆದಿತ್ಯ ಹೊರಗೆ ಶೇಖರನ ರೂಂ ಕಡೆ ಹೊರಡು ತ್ತಾನೆ. ಶೇಖರ ಸುಮ್ಮನೆ ಕುಳಿತು ಸಿಗರೇಟ್ ಸೇದುತ್ತಿದ್ದಾನೆ. ಅವನು ಹೇಳು ತ್ತಾನೆ –

"ನೋಡು ಆದಿತ್ಯ. ಆ ಆಫೀಸರ್ ಫ್ರಾಡ್. ಅವನ ಹೆಂಡತಿಗೆ ಕಾಯಿಲೆ ಇಲ್ಲ. ಅವನಿಗೆ ಹೋಗೋಕೆ ಇಷ್ಟ ಇಲ್ಲ. ಅವನಿಗೋ ಇಂಗ್ಲಿಷ್ ಬರೋದೇ ಇಲ್ಲ. ನೇಪಾಳದಲ್ಲಿ ಇನ್ನೊಬ್ಬರು ಬರೆದ ವರ್ಕಿಂಗ್ ಪೇಪರ್ ಓದುವುದು ಬೇರೆ ವಿಷಯ. ಆದರೆ ಅಲ್ಲಿ ಇಂಟರ್‌ನೇಷನಲ್ ಡೆಲಿಗೇಟ್ಸ್ ಜೊತೆ ಆ ಗೂಬೆ ಏನು ಮಾತಾಡಾನು! ಏನೂ ಓದು ಬಾರದೇ ಇದ್ದರೂ ಇನ್ನೊಬ್ಬರ ಫೇವರ್‌ನಿಂದ ವಿಶೇಷಜ್ಞನಾಗಿ ಬಿಟ್ಟಿದ್ದಾನೆ."

ಶೇಖರ್ ಬಡಬಡಿಸುತ್ತಲೇ ಇದ್ದಾನೆ. ಆದರೆ ಆದಿತ್ಯ ಈ ಆಕ್ರೋಶದಲ್ಲಿ ಪಾಲ್ಗೊಳ್ಳಲಾರ. ಅವನಿಗೊ ಯೋಚನೆ - ಅವನು ಹೋದನಂತರ ದೊಡ್ಡಮ್ಮ ಸತ್ತರೆ? ಸಾವಿಗೆ ಹೊತ್ತೇನು ಗೊತ್ತೇನು! ಆಗ ಅವನ ಹೆಂಡತಿ ತಾನೆ ಪಾಪ ಏನು ಮಾಡಿಯಾಳು! ಅಕ್ಕಪಕ್ಕದವರು ನಾನ್-ಕೋಆಪರೇಟಿವ್! ಅವನಿಗನ್ನಿಸುತ್ತದೆ. ಅವನು ಹುಚ್ಚನಾಗಿಬಿಡುತ್ತಾನೆ. ಅವನ ತಲೆಯಲ್ಲಿ ಸಾವಿರಾರು ಕ್ರಿಮಿಗಳು ಹರಿ ದಂತಾಗುತ್ತದೆ. ಸ್ವಲ್ಪ ಹೊತ್ತಿನಲ್ಲೇ ರಾಮುಮಾನ್ ಲೆಟರ್ ಆಫ್ ರೆಪ್ರೆಸೆಂಟೇಶನ್, ವಿಮಾನದ ಟಿಕೆಟ್ಟು ಮತ್ತು ಹಣ ಕೊಟ್ಟು ಹೋಗುತ್ತಾನೆ.

ಆಗ ಟೆಲಿಫೋನ್ ಗಂಟೆ ಬಾರಿಸುತ್ತದೆ. ಶೇಖರ ರಿಸೀವರ್ ಅವನಿಗೆ ಕೊಡುತ್ತಾನೆ "ಯುವರ್ ಕಾಲ್."

ಅವನು ಧ್ವನಿ ಕೇಳಿಸಿಕೊಳ್ಳದೆಯೇ ಕ್ರೆಡಿಟ್ ಮೇಲೆ ಇಡುತ್ತಾ ದೊಡ್ಡಮ್ಮನ ನರಳಾಟ ಮತ್ತು ಕೊನೆಯ ಬಡಿತವನ್ನು ಕೇಳಲು ಪ್ರಯತ್ನಿಸುತ್ತಾನೆ.

ಬಲೂಚಿ

# ಗೆಲುವು

ಮೂಲ : ಸೂರತ್ ಖಾಮರೀ
ಅನು : ಆರ್. ಲಕ್ಷ್ಮೀನಾರಾಯಣ

ಸಂಜೆಯ ಸೂರ್ಯ ಮುಳುಗತೊಡಗಿದ್ದ. ಜನ ಒಂದೇ ಸಮನೆ ಬರತೊಡಗಿದ್ದರು. ಯಾರದೋ ಕೈ ಮುರಿದುಹೋಗಿ ಕುತ್ತಿಗೆಯಿಂದ ಇಳಿಬಿದ್ದು ಜೋತಾಡುತ್ತಿದ್ದರೆ, ಇನ್ಯಾರದೋ ಕಾಲು ಮುರಿದು ಹೋಗಿ ಕುಂಟುತ್ತಿದ್ದರು. ಯಾರೋ ಒಬ್ಬ ತನ್ನ ತಲೆಗೆ ಸುತ್ತಿಕೊಂಡಿದ್ದ ಪೇಟವನ್ನೇ ಗಾಯಗಳಿಗೆ ಸುತ್ತಿಕೊಂಡಿದ್ದರೆ, ಇನ್ಯಾರೋ ಒಬ್ಬ ತನ್ನ ಗಾಯಗೊಂಡ ಹೆಗಲನ್ನು ಯಾರೂ ನೋಡದಿರಲೆಂದು ತಾನು ಹೊದ್ದಿದ್ದ ಚಾದರವನ್ನೇ ಮರೆಮಾಡಿಕೊಂಡಿದ್ದ. ಒಂದು ಕಡೆ ಹೆಂಗಸರ ಗುಂಪು ತಮ್ಮ ದೂರುಗಳನ್ನು ಹೇಳುತ್ತಾ ಬರುತ್ತಿದ್ದರೆ, ಇನ್ನೊಂದು ಕಡೆ ತಮ್ಮ ತಾಯಂದಿರಿಂದ ಅಗಲಿದ ಮುಗ್ಧ ಕಂದಮ್ಮಗಳು ಅಳುತ್ತಾ ಕರೆಯುತ್ತಾ ಬರುತ್ತಿದ್ದವು. ಒಂದು ಕಡೆ ಕೆಲವರು ಚಟ್ಟ ಹೊತ್ತುಕೊಂಡು ಬರುತ್ತಿದ್ದರೆ ಇನ್ನೊಂದು ಕಡೆ ಕೆಲವರು ಗಾಯಾಳುಗಳನ್ನು ತಮ್ಮ ಹೆಗಲ ಮೇಲೆ ಹೊತ್ತು ತರುತ್ತಿದ್ದರು. ಪ್ರಾಯಶಃ ಯುದ್ಧದಲ್ಲಿ ಸೋತ ಸಂದರ್ಭದಲ್ಲಿ ಅವರ ಪಾಲಿಗೆ ಚಾಪೆ ಮಂಚ ಕೂಡ ಸಿಕ್ಕಲಿಲ್ಲವೆಂದು ತೋರುತ್ತೆ. ಅದರಿಂದಾಗಿಯೇ ಅವರು ಗಾಯಾಳುಗಳನ್ನು ಅವುಗಳ ಮೇಲೆ ಮಲಗಿಸಿಕೊಂಡು ಬರಲಾಗಲಿಲ್ಲ.

ಇದು ನಿಜಕ್ಕೂ ಅಂಥ ದಯನೀಯ ಅಸಫಲತೆ ಮತ್ತು ಪರಾಜಯವೇ ಆಗಿತ್ತು. ಅದು ಎಷ್ಟರಮಟ್ಟಿಗಿನ ಸೋಲು ಆಗಿತ್ತೆಂದರೆ, ಆಂಗ್ಲರೊಂದಿಗೆ ಯುದ್ಧವನ್ನು ಮುಂದುವರೆಸಿಕೊಂಡು ಹೋಗುವುದಾಗಲಿ, ಇನ್ನೊಂದು ಶತಮಾನದವರೆವಿಗೂ ಆಂಗ್ಲರನ್ನು ಎದುರಿಸಿ ಹೋರಾಡುವುದಾಗಲಿ ಕೇವಲ ಕಾಲ್ಪನಿಕವೆಂದೂ, ಜನರು ಉತ್ಸಾಹ ಶೂನ್ಯರಾಗಿರುವುದರಿಂದ ಒಂದು ವೇಳೆ ಆಂಗ್ಲರು ಆಕ್ರಮಣ ಮಾಡಿದರೂ ಅದಕ್ಕೆ ಪ್ರತಿಯಾಗಿ ಈ ಕಡೆಯಿಂದ ಯಾರೂ ಗುಂಡು ಹಾರಿಸಲಾರರು ಎಂಬುದನ್ನು ಪ್ರತಿಯೊಬ್ಬರೂ ಒಪ್ಪುತ್ತಿದ್ದರು. ಯಾರೋ ಹೇಳುತ್ತಾ ಇದ್ದ– "ಇಂಥ ಪರಿಸ್ಥಿತಿಯಲ್ಲಿ ನಾವು ಹೇಗೆ ತಾನೆ ಪ್ರತೀಕಾರ ಮಾಡಲು ಸಾಧ್ಯ ? ನನ್ನ

ಪ್ರಕಾರ ಇದೆಲ್ಲ ಆ ಜಂಗೂನ ಆತುರದ ಪರಿಣಾಮ. ಆವನು ಎಂದೂ ಯಾವತ್ತೂ ಯಾರ ಮಾತೂ ಕೇಳುವುದಿಲ್ಲ. ತಾನೂ ಕಿಂಚಿತ್ತೂ ಯೋಚನೆ ಮಾಡುವುದಿಲ್ಲ. ಈಗೆಲ್ಲಿದ್ದಾನೆ ಅವನು ?"

ಇನ್ನಾರೋ ಹೇಳಿದರು – "ಇದರಲ್ಲಿ ಕೇವಲ ಜಂಗೂನ ತಪ್ಪೇನೂ ಇಲ್ಲ. ಅವನು ಪ್ರತಿ ಸಂದರ್ಭದಲ್ಲೂ ಎಚ್ಚರ ಮತ್ತು ಅವಸರ ತೋರಿಸುತ್ತಲೇ ಬಂದಿದ್ದಾನೆ. ಇದಕ್ಕೆ ಮುಂಚೆ ಅವನಿಗೆಂದೂ ಸೋಲಾಗಿರಲಿಲ್ಲ."

ತಪ್ಪು ಯಾರದ್ದು ಅನ್ನುವುದನ್ನು ನಾವೀಗ ಮರೆತು ಬಿಡಬೇಕು. ಮುಖ್ಯ ವಾದ ವಿಷಯ ಅಂದರೆ ಜಂಗೂ ಎಲ್ಲಿದ್ದಾನೆ ಅನ್ನುವುದನ್ನು ಪತ್ತೆ ಮಾಡಬೇಕಾದ್ದು ಹಾಗೂ ಬ್ರಿಟಿಷರನ್ನು ಎದುರಿಸುವುದು ಹೇಗೆ ಅನ್ನುವ ಉಪಾಯ ಹುಡುಕುವುದು–"

ಈ ಮಾತನ್ನು ಆಡಿದ ವ್ಯಕ್ತಿ ಶತ್ರುಗಳನ್ನು ಎದುರಿಸುವುದರಲ್ಲಿ ಪಳಗಿದಾತ ಮತ್ತು ಹಿರಿಯ.

ಆಗಲೆ ಮಾತನಾಡಿದ ಇನ್ನೊಬ್ಬ ವ್ಯಕ್ತಿ ಇವನ ಹತ್ತಿರ ಹೇಳಿದ– "ನೀನು ಅವನನ್ನು ಚಿಕ್ಕ ಹುಡುಗನಾಗಿದ್ದಾಗಿನಿಂದಲೂ ಬಲ್ಲೆ. ಮೀಸೆ ಬರುವ ವಯಸ್ಸಿನಿಂದಲೇ ಅವನು ನಮ್ಮ ಜೊತೆ ಸೇರಿಕೊಂಡದ್ದು ನನಗೆ ಚೆನ್ನಾಗಿ ಜ್ಞಾಪಕ ಇದೆ. ನಾವು ಒಂದೇ ದೃಢ ಮನಸ್ಸಿನಿಂದ ತೊಡಗದೆ ಇಬ್ಬಂದಿಗೆ ಒಳಗಾಗಿ ಏಕೆ ಕಾರ್ಯ ಪ್ರವೃತ್ತರಾಗುತ್ತೇವೆ ಎಂಬುದರ ಬಗ್ಗೆಯೇ ಅವನು ಯಾವಾಗಲೂ ಹೆಚ್ಚು ಆಕ್ಷೇಪಿಸುತ್ತಿದ್ದ. ನಿನಗೆ ಆ ದಿನ ಚೆನ್ನಾಗಿ ಜ್ಞಾಪಕ ಇರಬೇಕು ಅಲ್ಲವೆ – ಅವನು ಹತ್ತು ಜನರನ್ನು ಸಂಗಡ ಕರೆದುಕೊಂಡು ಹೋಗಿದ್ದು – ಅವರು ಕಟ್ಟಿಗೆ ಕತ್ತರಿಸಿಕೊಂಡು ಬರಬೇಕೆಂದು ಹೋಗಿದ್ದು, ಅಲ್ಲೇ ದಾರಿಯಲ್ಲಿ ಇಂಗ್ಲಿಷರ ಸೈನ್ಯದ ಒಂದು ತುಕಡಿಯನ್ನು ಕಂಡು, ಆ ತುಕಡಿಯ ಮೇಲೆ ಆಕ್ರಮಣ ಮಾಡಲಿಕ್ಕೆ ಹೇಳಿದ್ದು, ವಾಪಸ್ ಬರುವಾಗ ಕಟ್ಟಿಗೆಗೆ ಬದಲು ಬಂದೂಕು ಮತ್ತು ಮದ್ದು ಗುಂಡುಗಳನ್ನು ತಂದದ್ದು– ಇದೆಲ್ಲ.

ಆ ಹಿರಿಯ ತಲೆ ಅಲ್ಲಾಡಿಸಿ ಹೇಳಿದ– "ನಿಜವಾಗಿ ಅವನು ಆಗ ಒಂದು ಪವಾಡವನ್ನೇ ಮಾಡಿಬಿಟ್ಟ. ಯಾವುದೇ ಒಂದು ಕಠಿಣವಾದ ಮತ್ತು ಜಟಿಲವಾದ ಕೆಲಸಕ್ಕೆ ಕೈ ಹಾಕಿದರೂ ಅದನ್ನು ಯಶಸ್ವಿಯಾಗಿ ನಿಭಾಯಿಸಿಬಿಡುತ್ತಿದ್ದ. ಇವತ್ತಿನವರೆಗೂ ಅವನು ಕೈ ಹಾಕಿದ ಕೆಲಸದಲ್ಲಿ ಸೋಲು ಅನ್ನುವುದನ್ನು ಕಂಡಿರಲಿಲ್ಲ. ಮೊನ್ನೆಯ ವಿಷಯವನ್ನೇ ತೆಗೆದುಕೋ. ರಾಶ್ತರಗ್‌ನಲ್ಲಿ ಇಂಗ್ಲಿಷರೊಂದಿಗೆ ಭಯಂಕರ ಯುದ್ಧ ವಾಯಿತಲ್ಲ ಆಗ, ಇಂಗ್ಲಿಷರ ಸೈನ್ಯದ ಕೈ ಮೇಲಾಯಿತು. ಆಗ ಅವನು ಸೈನಿಕರಿಗೆಲ್ಲಾ ಸವಾಲೆಸೆದು ಹುರಿದುಂಬಿಸತೊಡಗಿದ – ನೀವು ಶತ್ರುಗಳನ್ನು ಎದುರಿಸುವುದನ್ನು ಬಿಟ್ಟು ಓಡುತ್ತಾ ಇದ್ದೀರಿ. ಜನ ನಿಮ್ಮನ್ನು ಯಾವ ಹೆಸರಿನಿಂದ ಕರೆಯುತ್ತಾರೆ ಅನ್ನುವುದನ್ನಾದರೂ ಮರೆತುಬಿಟ್ಟಿರೇನು ? ಎಂಥೆಂಥ ವ್ಯಂಗ್ಯದ ಚುಚ್ಚುಮಾತುಗಳನ್ನು ಆಡುತ್ತಾರೆ ಅನ್ನುವುದನ್ನು ಮರೆತುಬಿಟ್ಟಿರಾ"

ಅವನ ಈ ಪಂಥಾಹ್ವಾನದ ಮಾತುಗಳನ್ನು ಕೇಳಿ ಪ್ರತಿಯೊಬ್ಬನೂ ಎಚ್ಚರಗೊಂಡ. ಪ್ರತಿಯೊಬ್ಬನೂ ತನ್ನ ಪ್ರಾಣವನ್ನು ಪಣವಾಗಿಟ್ಟು ಹೋರಾಡಿದ."

"ನಿಜ ಜಂಗೂ ಪ್ರತಿಯೊಂದು ಯುದ್ಧದಲ್ಲೂ ಗೆಲುವು ಸಾಧಿಸಿದ. ಈ ಯುದ್ಧದಲ್ಲಾದ ಸೋಲಿನಿಂದ ಅವನ ಮನಸ್ಸಿನ ಮೇಲೆ ಎಂಥ ಪರಿಣಾಮವಾಯಿತೋ ಆ ದೇವರೇ ಬಲ್ಲ."

"ಬಹುಶಃ ಇದು ಅವನ ಜೀವನದಲ್ಲಿ ಮೊದಲ ಸೋಲು. ಈ ವಿಜಯದಿಂದ ಇಂಗ್ಲಿಷರ ಶಕ್ತಿ ಸಾಮರ್ಥ್ಯಗಳು ಹೆಚ್ಚಿರಬಹುದು."

ಮೂರನೇ ವ್ಯಕ್ತಿಯೊಬ್ಬ ಹೇಳಿದ– "ಅವನು ಇಲ್ಲಿ ಇಲ್ಲದೆ ಇರುವುದರಿಂದ ಮನಸ್ಸಿನಲ್ಲಿ ಅನೇಕ ತರಹದ ಅನುಮಾನಗಳು ಹುಟ್ಟುತ್ತವೆ. ಸದ್ಯ, ದೇವರ ದಯದಿಂದ ಅವನು ಜೀವಂತವಾಗಿ ಕ್ಷೇಮದಿಂದ ಇದ್ದರೆ ಸಾಕು."

ತನ್ನದೇ ಆಲೋಚನೆಗಳಲ್ಲಿ ಮುಳುಗಿದ್ದ ವೃದ್ಧ ವ್ಯಕ್ತಿ– ಇದ್ದಕ್ಕಿದ್ದಂತೆ ಒಮ್ಮೆಲೇ ಹೇಳಿದ– "ಈ ದಿನ ನಮಗೆ ಏನು ಸೋಲು ಆಗಿದೆ, ಅದು ಆಗುತ್ತೆ ಅಂತ ಅನ್ನಿಸಿಯೇ ಇರಲಿಲ್ಲ." ಹೀಗೆ ಹೇಳಿ ಅವನು ಮತ್ತೆ ಮೌನ ತಾಳಿದ. ಅನಂತರ ಹೇಳಿದ–ನನ್ನ ಲೆಕ್ಕದ ಪ್ರಕಾರ ನಾಳೆ ಸೂರ್ಯೋದಯವಾಗುವುದರ ಒಳಗೆ ನಾವು ಇಲ್ಲಿಂದ ಕಾಲ್ತೆಗೆಯಬೇಕು."

ಅವರೆಲ್ಲರೂ ಅಲ್ಲಿಂದ ಹೊರಟರು. ಇಂಗ್ಲಿಷರ ವಿರುದ್ಧದ ಹೋರಾಟದಲ್ಲಿ, ಮೊದಲ ಸಲ ಸೋಲನನುಭವಿಸಿದ ಆ ಒಂದು ಸಣ್ಣ ಸೈನಿಕರ ತಂಡ ತೀವ್ರ ನಿರಾಶೆಯಿಂದ ಕೂಡಿ ನಿರುತ್ಸಾಹಿತವಾಗಿತ್ತು. ಆ ತಂಡದವರು ಸ್ವಲ್ಪ ದೂರ ಸಾಗಿದ್ದರು. ಅಷ್ಟರಲ್ಲಿ ಎದುರುಗಡೆಯಿಂದ ಅವರತ್ತ ಧಾವಿಸುತ್ತಿದ್ದ ಒಂದು ಮನುಷ್ಯಾಕೃತಿಯನ್ನು ಕಂಡರು. ಆ ಆಕೃತಿ ಹತ್ತಿರ ಬಂದಮೇಲೆ ಸಲಾಮ್–ಆಲೇಕುಮ್ ಎಂದು ಹೇಳಿತು. ಆ ದನಿ ಕೇಳಿದ ಕೂಡಲೇ ಅವರಿಗೆ ಅದು ಜಂಗೂನ ದನಿ ಎಂದು ಗೊತ್ತಾಯಿತು. ನಮಸ್ಕಾರದ ವಿನಿಮಯದ ನಂತರ ವೃದ್ಧ ವ್ಯಕ್ತಿ ಕೇಳಿದ– "ಜಂಗೂ ನೀನು ಚೆನ್ನಾಗಿದ್ದೀತಾನೆ ?"

ಜಂಗೂ ಈ ಪ್ರಶ್ನೆಗೆ ಉತ್ತರಕೊಡದೆ ಬದಿಗಿಟ್ಟ. ಅವನೀಗ ಕುಂಟುತ್ತಿದ್ದಾನೆಂಬುದು ಅವರಿಗೆ ತಿಳಿಯಿತು. ಅಷ್ಟೇ ಅಲ್ಲ, ತಾನು ಕುಂಟನೆಂಬುದನ್ನು ಮರೆಮಾಚಲು ತುಂಬ ಯತ್ನಿಸುತ್ತಿದ್ದಾನೆಂಬುದೂ ಅವರಿಗೆ ಗೊತ್ತಾಯಿತು.

ಸಹರೋಫ್ ತಲುಪಿದ ಮೇಲೆ ಅವನು ಗಾಯಾಳುಗಳ ಯೋಗಕ್ಷೇಮ ವಿಚಾರಿಸತೊಡಗಿದ. ಯಾರಿಗೋ ಸಮಾಧಾನದ ಎರಡು ಮಾತು ಹೇಳಿದ. ಇನ್ನಾರದೋ ಹತ್ತಿರ ಹೋಗಿ ತಲೆ ನೇವರಿಸಿದ. ಅನಂತರ ಅವನು ಆ ಹಿರಿಯನನ್ನು ಕೆಲವು ವ್ಯಕ್ತಿಗಳ ಬಗ್ಗೆ ವಿಚಾರಿಸಿದ.

ಅವನು ಹೇಳಿದ– "ತುರ್ಕ್ ಅಲಿ, ಕಹೀಲ್ ಅಲಿ ಮತ್ತು ಮಜಾರ್‌ಖಾನ್

ಈ ಮೂವರಂತೂ ಹುತಾತ್ಮರಾಗಿಬಿಟ್ಟರು. ರಾಜಾ ಕೆಲವು ಜನರನ್ನು ತನ್ನ ಜೊತೆ ಕರೆದುಕೊಂಡು, ಆ ಹುತಾತ್ಮರ ಶವಸಂಸ್ಕಾರ ಮಾಡಿ ಬರಲು ಹೋಗಿದ್ದಾನೆ. ಈ ಯುದ್ಧದಲ್ಲಿ ಅನೇಕ ಜನರು ಸತ್ತು ಹೋದರು. ಗಾಯಗೊಂಡವರ ಸಂಖ್ಯೆಯೂ ಕಡಮೆ ಇಲ್ಲ. ಈ ಗಾಯಾಳುಗಳನ್ನೆಲ್ಲ ಸುರಕ್ಷಿತ ಸ್ಥಳಕ್ಕೆ ತಲುಪಿಸುವ ಸಮಸ್ಯೆ ಬೇರೆ ಇದೆ. ಫರಂಗಿಯವರು ಬಹಳ ವೇಗವಾಗಿ ಧಾವಿಸುತ್ತಿದ್ದಾರೆ ಎಂದು ಗುಪ್ತಚಾರರು ಸುದ್ದಿ ತಂದಿದ್ದಾರೆ."

ಜಂಗೂನ ಮುಖದ ಮೇಲಿನ ಭಾವ ಹೇಗಿತ್ತೆಂದರೆ ಈ ಎಲ್ಲ ವಿಷಯವನ್ನೂ ಕೇಳಿ ತಿಳಿದುಕೊಳ್ಳುವ ಅಗತ್ಯವೇ ಇಲ್ಲವೆಂಬಂತೆ, ನಾಲ್ಕೂ ಕಡೆಯಿಂದ ಜನ ಬಂದು ಅವನ ಸುತ್ತ ಮುತ್ತಿಕೊಂಡರು. ಅವನ ಕಡೆ ಪ್ರಶ್ನಾರ್ಥಕ ನೋಟ ಬೀರಿದರು. ಕೆಲವರಿಗೆ ಜನರ ಗುಂಪಿನ ನಡುವೆ ಇದ್ದ ಜಂಗೂ ಕಣ್ಣಿಗೆ ಬಿದ್ದಿರಲಿಲ್ಲ. ಹಿರಿಯ ವ್ಯಕ್ತಿ ಗಟ್ಟಿ ದನಿಯಿಂದ ಕೂಗಿ ಹೇಳಿದ– "ಸೋದರರೇ, ಜಂಗೂ ವಾಪಸ್ ಬಂದಿದ್ದಾನೆ. ಎಲ್ಲರೂ ಕುಳಿತುಕೊಳ್ಳಿ."

ಈ ಧ್ವನಿ ಕೇಳಿ ಎಲ್ಲರೂ ಕುಳಿತುಕೊಂಡರು. ಜನ ತಮ್ಮ ತಮ್ಮಲ್ಲೇ ಗುಸ ಗುಸ ಪಿಸಪಿಸ ಮಾತಾಡಿಕೊಳ್ಳತೊಡಗಿದರು. ಜಂಗೂ ಈಗ ಏನು ಹೇಳಬಹುದು ಎಂದು ಲೆಕ್ಕಹಾಕತೊಡಗಿದರು. ನಮ್ಮ ಸದ್ಯದ ಪರಿಸ್ಥಿತಿಗೆ ಏನು ಪರಿಹಾರ ಸಿಗುತ್ತೋ ಎಂದು ಯೋಚಿಸುತ್ತಿದ್ದರು. ಜನರ ಅಷ್ಟೆಲ್ಲ ತಳಮಳವಿದ್ದಾಗ್ಯೂ ಜಂಗೂ ತಲೆತಗ್ಗಿಸಿಕೊಂಡು ಹಾಗೆಯೇ ಕುಳಿತಿದ್ದ. ಅವನ ಮುಖದ ಮೇಲೆ ಅದೇ ಗಂಭೀರ ಭಾವ ಇತ್ತು. ಹಿರಿಯ ವ್ಯಕ್ತಿ ಗಟ್ಟಿ ದನಿಯಲ್ಲಿ ಕೇಳಿದ– "ಜಂಗೂ ರಾತ್ರಿ ಬಹಳ ಹೊತ್ತಾಗಿ ಬಿಟ್ಟಿದೆ. ಬೆಳಗಾಗುವುದಕ್ಕೆ ಇನ್ನು ಸ್ವಲ್ಪವೇ ಹೊತ್ತಿದೆ. ರಾಜಾ ಮತ್ತು ಅವನ ಸಂಗಡಿಗರು ಹುತಾತ್ಮರ ಶವಸಂಸ್ಕಾರ ಮಾಡಿ ಮುಗಿಸಿ ಬರುತ್ತಾ ಇರಬಹುದು. ಗಾಯಾಳುಗಳು ತುಂಬ ಜನ ಇದ್ದಾರೆ. ಅವರನ್ನೆಲ್ಲ ಸುರಕ್ಷಿತ ಪ್ರದೇಶಕ್ಕೆ ತಲುಪಿಸಬೇಕಾಗಿದೆ. ಈಗ ನಾವು ಎಲ್ಲಿಗೆ ಹೋಗಬೇಕು ಅನ್ನುವುದನ್ನು ನೀನು ಹೇಳು."

ಜಂಗೂ ಕುಳಿತಿದ್ದವನು ಎದ್ದು ನಿಂತ. ಅವರೆಲ್ಲರನ್ನು ಸಂಬೋಧಿಸಿ ಹೇಳಿದ– "ಸೋದರರೆ ನಿಮ್ಮ ಎದುರಿಗೆ ಕಾಣುತ್ತಾ ಇದೆಯಲ್ಲ, ಪರ್ವತದ ತುದಿಯ ಆ ರಸ್ತೆ. ನಿಮಗೆಲ್ಲರಿಗೂ ಆ ಪರ್ವತದ ಹಾದಿ ಚೆನ್ನಾಗಿ ಗೊತ್ತು ಎಂದು ನನಗೆ ತಿಳಿದಿದೆ. ನಿಮ್ಮಲ್ಲಿ, ಜೀವಮಾನದಲ್ಲಿ ಒಂದೆರಡು ಬಾರಿಯಾದರೂ ಆ ಮಾರ್ಗವಾಗಿ ಸಾಗಿ ಹೋಗದೆ ಇರುವವರು ಯಾರೂ ಇರಲಿಕ್ಕಿಲ್ಲ. ಈ ದಾರಿ ಬಹಳ ಮಹತ್ವಪೂರ್ಣವಾದ ದಾರಿ. ನಮ್ಮಲ್ಲಿ ಯಾರಾದರೂ ಈ ರಸ್ತೆ ನಮಗೆ ಬೇಡ, ಅದರ ಗೊಡವೆ ನಮಗೆ ಬೇಡ ಎಂದು ಹೇಳಿದರೂ, ಏನೇ ಆದರೂ ನಾವು ಅದನ್ನು ಬಿಟ್ಟು ಕೊಡುವುದಕ್ಕೆ ಸಾಧ್ಯ ಇಲ್ಲ. ನಮ್ಮೆಲ್ಲ ಕೊಂಡುಕೊಳ್ಳುವ ಸಕಲ ವ್ಯಾಪಾರ ವ್ಯವಹಾರವೂ

ಸೆಸ್ಸಾನ್‌ದೊಂದಿಗಿದೆ. ಒಂದು ವೇಳೆ ಸೆಸ್ಸಾನ್‌ದೊಂದಿಗಿನ ನಮ್ಮ ವ್ಯಾಪಾರ ವ್ಯವಹಾರವನ್ನು ನಿಲ್ಲಿಸಿಬಿಟ್ಟರೆ, ಒಂದು ವೇಳೆ ಸೆಸ್ಸಾನ್‌ಗೆ ಹೋಗುವ ಈ ಮಾರ್ಗ ವನ್ನು ನಮ್ಮಿಂದ ಕಿತ್ತುಕೊಂಡು ಬಿಟ್ಟರೆ, ನಾವೆಲ್ಲ, ಹೊಟ್ಟೆಗಿಲ್ಲದೆ ಸಾಯಬೇಕಾಗುತ್ತೆ. ಪರಂಗಿಯವರು ನಮ್ಮನ್ನು ನಮ್ಮ ಅಧಿಕಾರದ ಪ್ರದೇಶಗಳಲ್ಲಿ ಎಂದೂ ಬದುಕಲು ಬಿಡಲಾರರು. ನಾವು ಸ್ವಾತಂತ್ರ್ಯಕ್ಕೋಸ್ಕರ ಬದುಕಬೇಕು. ಸ್ವತಂತ್ರ ಭೂಭಾಗದಲ್ಲಿ ಬಾಳಬೇಕು."

ಇದೊಂದು ವಿಲಕ್ಷಣ ಸನ್ನಿವೇಶ. ಅವರೆಲ್ಲರೂ ಅವನ ಒಂದೊಂದೂ ಮಾತು ಗಳನ್ನು ಗಮನವಿಟ್ಟು ಕೇಳುತ್ತಿದ್ದರು. ಯಾರು ಆಂಗ್ಲರ ವಿರುದ್ಧ ಕತ್ತಿ ಎತ್ತಿದ್ದರೋ, ಯಾರು ಸ್ವತಂತ್ರರಾಗಲು ಬಯಸುತ್ತಿದ್ದರೋ, ಯಾರ ರಕ್ತದಲ್ಲಿ ಸ್ವಾತಂತ್ರ್ಯವಿತ್ತೋ, ಯಾರು ತಮ್ಮ ಬಂಧು ಬಾಂಧವರನ್ನು ಆತ್ಮೀಯರನ್ನು ತಾವೇ ಕೈಯಾರ ಮೃತ್ಯುವಿಗೆ ಸಮರ್ಪಿಸಿದ್ದರೋ, ಹಾಗೂ ತಾವು ಕೂಡ ಮೃತ್ಯುವನ್ನು ಪ್ರೀತಿಸಿದ್ದರೋ ಅವರೀಗ ಹಿಂದಕ್ಕೂ ಹೋಗಲಾರದ ಮುಂದಕ್ಕೂ ಹೋಗಲಾರದ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿಕೊಂಡಿದ್ದರು. ಎರಡೂ ಕಡೆ ಮೃತ್ಯು ಅವರಿಗೆ ಕಾದಿತ್ತು. ನಿರಾಳ ಕಟ್ಟಿಟ್ಟ ಬುತ್ತಿಯಾಗಿತ್ತು.

ಜಂಗೂ ಹೇಳುತ್ತಿದ್ದ– "ಈಗ ನಮಗೆ ಸಂಚಾರಕ್ಕೆ ಉಳಿದಿರುವುದು ಇದೊಂದೇ ರಸ್ತೆ. ಈ ರಸ್ತೆಯ ಏರು–ತಗ್ಗುಗಳೆಲ್ಲ ನಮ್ಮೆಲ್ಲರಿಗೂ ಚೆನ್ನಾಗಿ ಗೊತ್ತು. ಇದೊಂದು ಅಪಾಯಕಾರಿ ಮಾರ್ಗ ಎಂದು ನಮಗೆಲ್ಲ ಚೆನ್ನಾಗಿ ಗೊತ್ತು. ಈ ಹಾದಿ ಯಲ್ಲಿ ಮುಂದೆ ಸಾಗಿ ಹೋಗುವುದು ಅತ್ಯಂತ ದುಷ್ಕರ. ಕಷ್ಟಕರ ಅಂತಲೂ ನಮಗೆ ಗೊತ್ತು. ಆದರೆ ವರ್ಷಗಟ್ಟಲೆಯಿಂದ, ಶತಮಾನಗಳಿಂದ ನಾವು ಈ ರಸ್ತೆಯಲ್ಲಿ ಸಾಗಿಕೊಂಡೇ ಬಂದಿದ್ದೇವೆ. ಇವತ್ತಿನವರೆಗೂ ಅದೆಷ್ಟು ಜನ ಈ ದಾರಿಯ ಮೂಲಕ ಸಾಗಿ ಹೋಗಿದ್ದಾರೆ ಎಂಬುದನ್ನು ಯಾರೂ ಹೇಳಲಾರರು, ಯಾರಿಗೂ ಗೊತ್ತೂ ಇಲ್ಲ. ಈ ದಾರಿಯಲ್ಲಿ ಹೋಗುವಾಗ ಅದೆಷ್ಟು ಜನ ಜಾರಿಬಿದ್ದು ಸತ್ತಿದ್ದಾರೋ ಗೊತ್ತಿಲ್ಲ. ಆದರೆ ಈ ರಸ್ತೆ ಮಾತ್ರ ಅಲ್ಲೇ ಈಗಲೂ ಹಾಗೇ ಇದೆ. ಮತ್ತು ಆ ರಸ್ತೆಯಲ್ಲಿ ಈಗಲೂ ಜನರು ಹೋಗುವುದು–ಬರುವುದು ನಡೆದೇ ಇದೆ. ಹೋದ ವರುಷ ಒಂದು ಬಂಡೆ ಉರುಳಿ ಬಿದ್ದು, ಒಬ್ಬ ಹೆಂಗಸು ಅದರ ಕೆಳಕ್ಕೆ ಸಿಕ್ಕಿ ಸತ್ತಿದ್ದು ನಿಮಗೆ ನೆನಪಿರಬಹುದು. ಅವಳು ಅಲ್ಲಿಗೆ ಕಟ್ಟಿಗೆ ಆಯುವುದಕ್ಕೆ ಬಂದಿದ್ದಳು. ಅವಳ ಸಾವಿನಿಂದ ಜನರೇನೂ ಹೆದರಿದಂತೆ ಕಾಣಲಿಲ್ಲ. ಕಾರಣ ಈಗಲೂ ಜನ ಕಟ್ಟಿಗೆ ಆಯುವುದಕ್ಕೆ ಆ ದಾರಿಯಲ್ಲಿ ಹೋಗೇ ಹೋಗುತ್ತಾರೆ. ಈ ದಾರಿ ಇಳಿ ಜಾರಿನದು, ಇಕ್ಕಟ್ಟಿನದು, ವಕ್ರ ವಕ್ರವಾಗಿದೆ, ಗಿಡಗೆಂಟೆಗಳಿಂದ ಇಡಿಕಿರಿದಿದೆ. ಆದರೆ ನಮ್ಮ ಸ್ವಾತಂತ್ರ್ಯದ ಮತ್ತು ವಿಜಯದ ಹಾದಿ ಇದೇ ಆಗಿದೆ.

ನಮ್ಮ ಸೋದರರು ಮಡಿದು ಹುತಾತ್ಮರಾದ ದುಃಖ, ಶತ್ರುಗಳ ಕೈಯಿಂದ ಸೋಲನನುಭವಿಸಿದ ಶೋಕ, ತಾಯಂದಿರ ಗರ್ಭ ನಾಶವಾದ ಶೋಕ, ಪುತ್ರಿಯರನ್ನು ಕಳೆದುಕೊಂಡ ದುಃಖ, ಮಕ್ಕಳ, ಸೋದರರ ಸಾವಿನ ಶೋಕ, ಮಡದಿಯರ ಮಾಂಗಲ್ಯ ಅಳಿದ ಅಳಲು, ಮುಂದಿನ ಪೀಳಿಗೆಯವರು, ಪ್ರಾಣಿಗಳ ಹಾಗೆ ಗಾಡಿಗೆ ಕಟ್ಟಿ ಎಳೆಯಲ್ಪಡುವುದರ ಕುರಿತಾದ ಶೋಕ, ಈ ಎಲ್ಲ ಬಗೆಯ ಶೋಕ ನಮ್ಮನ್ನು ಕಂಗೆಡಿಸಿದೆ.

ಒಬ್ಬಾನೊಬ್ಬ ಯುವಕ ಎದ್ದು ನಿಂತು ಆವೇಶಭರಿತ ಶಬ್ದಗಳಿಂದ ಕೇಳಿದ– "ಇದಕ್ಕೆಲ್ಲ ಏನಾದರೂ ಉಪಾಯವಾದರೂ ಇದೆಯೋ ಹೇಗೆ ?"

ಜಂಗೂ ಅವನ ಕಡೆ ಲಕ್ಷ್ಯಪೂರ್ವಕವಾಗಿ ನೋಡಿ ಹೇಳಿದ– "ನಾನೂ ಇದನ್ನೇ ಹೇಳುವುದಕ್ಕೆ ಹೊರಟಿದ್ದೆ. ನಮ್ಮ ವೈಫಲ್ಯಗಳು ಎಷ್ಟೊಂದು ಹೆಚ್ಚಾಗಿ ಬಿಟ್ಟಿವೆ ಯೆಂದರೆ, ನಾವು ಅವುಗಳ ವಿಷಯಕ್ಕೆ ಶೋಕಿಸಲೂ ಆರದಷ್ಟು ಇರುವುದು ಒಂದೇ ಮಾರ್ಗ, ಒಂದೇ ಉಪಾಯ. ಎಲ್ಲಿಯವರೆಗೆ ಶಾಶ್ವತ ವಿಜಯ ನಿಮ್ಮದಾಗುವು ದಿಲ್ಲವೋ, ಅಲ್ಲಿಯವರೆಗೂ ನಿಮ್ಮೆಲ್ಲ ದುಃಖಗಳ ಶೋಕಾಚರಣೆಯನ್ನು ಮುಂದೂಡ ಬೇಕು. ಯಾರು ತಾತ್ಕಾಲಿಕ ಸೋಲಿನಿಂದ ಧೈರ್ಯ ಕಳೆದುಕೊಂಡು ಬಿಡುತ್ತಾರೋ ಅವರ ಅದೃಷ್ಟದಲ್ಲಿ ಗೆಲುವು ಎಂದಿಗೂ ಲಭ್ಯವಿಲ್ಲ.

ಈಗ ಏಳಿ– ನಿಮ್ಮ ಚೂರುಪಾರು ಆಯುಧಗಳನ್ನು ಕೈಗೆತ್ತಿಕೊಳ್ಳಿ. ಆಯುಧ ಗಳು ಕಮ್ಮಿ ಇದ್ದರೆ ಏನಂತೆ ? ಭೂಮಿಯ ಮೇಲೆ ಲೆಕ್ಕವಿಲ್ಲದಷ್ಟು ಕಲ್ಲುಗಳಂತೂ ಬಿದ್ದಿವೆ. ಅವುಗಳಿಂದಲೇ ನಾವು ಆಂಗ್ಲರನ್ನು ಎದುರಿಸೋಣ. ಎಲ್ಲಿಯವರೆಗೆ ದೇಹದಲ್ಲಿ ಉಸಿರಿರುತ್ತದೆಯೋ, ಎಲ್ಲಿಯವರೆಗೆ ಪ್ರಾಣ ಸುರಕ್ಷಿತವಾಗಿರುತ್ತದೆಯೋ, ಅಲ್ಲಿಯವರೆಗೂ ನಾವು ಹೋರಾಡೋಣ. ಆಂಗ್ಲರ ಎದುರಿಗೆ ನಮ್ಮ ಎದೆ ಸೆಟೆಸಿ ನಿಲ್ಲೋಣ. ಯುದ್ಧದಲ್ಲಿ ಶತ್ರುವಿಗೆ ಎಂದೂ ಬೆನ್ನು ತೋರಿಸದಿರೋಣ."

ಈ ಸಂದರ್ಭದ ಸೂಕ್ಷ್ಮವನ್ನು ಅರ್ಥ ಮಾಡಿಕೊಳ್ಳಿ. ನೀವು ಸೋಲಿನಿಂದ ಎದೆಗುಂದಿದ್ದೀರಿ. ಅದೃಷ್ಟ ನಮಗೊಂದು ಸುವರ್ಣಾವಕಾಶವನ್ನು ಒದಗಿಸಿದೆ. ಇಂದು ಶತ್ರು ವಿಜಯದ ಮತ್ತಿನಲ್ಲಿ ಮುಳುಗಿ ಹಾಳಾಗಿದ್ದಾನೆ. ಅವನು ನಮ್ಮ ವಿಷಯಕ್ಕೆ ನಿರ್ಭೀತಿ ಮತ್ತು ನಿರ್ಲಕ್ಷ್ಯದಿಂದ ಇದ್ದಾನೆ. ಎದ್ದೇಳಿ, ಆಯುಧವನ್ನು ಕೈಗೆತ್ತಿಕೊಳ್ಳಿ. ಶತ್ರು ಎಚ್ಚೆತ್ತುಕೊಳ್ಳುವುದಕ್ಕಿಂತ ಮುಂಚೆಯೇ ಎಚ್ಚರಗೊಳ್ಳಿ. ದಿಗಂತದಲ್ಲಿ ಬೆಳಗಿನ ಹೊಂಬೆಳಕು ಕಾಣಿಸತೊಡಗಿದೆ. ಸೂರ್ಯೋದಯವಾಗುವುದಕ್ಕೆ ಮುನ್ನವೇ ಶತ್ರುವನ್ನು ಅವನ ನೆಲೆಗೆ ಕಟ್ಟಿ."

ಜಂಗೂವಿನ ನಾಲಿಗೆಯಲ್ಲಿ ಅದೇನು 'ಜಾದೂ' ಇತ್ತೋ, ಅದೇನು ಪ್ರಭಾವ ಇತ್ತೋ, ನಿರಾಶೆಯ ಮುಖಗಳು ಪರಾಕ್ರಮದ ಭಾವನೆಗಳಿಂದ ಬೆಳಗಿದುವು. ಧೈರ್ಯ

ಉಡುಗಿ ಎದೆಗುಂದಿ ಕುಳಿತಿದ್ದವರಲ್ಲಿ ಶಕ್ತಿಯ ಸಂಚಾರವಾಗಿ ಯುದ್ಧಕ್ಕೆ ಸಿದ್ಧರಾದರು. ಇನ್ನೂ ಬೆಳಗಾಗುವಷ್ಟರಲ್ಲೇ ಆಂಗ್ಲರ ಮೇಲೆ ಆಕ್ರಮಣಕ್ಕೆ ಹೊರಟುನಿಂತರು.

ಗಡಸು ಭೂಮಿ ಮತ್ತೆ ಕೆಂಪಾಯಿತು. ಜಂಗೂ ಮತ್ತು ಅವನ ಸಂಗಡಿಗರು ಆಂಗ್ಲರ ಗೆಲುವನ್ನು ತಮ್ಮ ಗೆಲುವನ್ನಾಗಿ ಮಾರ್ಪಡಿಸಿಕೊಳ್ಳುವುದರಲ್ಲಿ ಸಫಲರಾದರು.

# ಭೂಮಿಯ ಪಾಲು

ಒಂದು ಫಿಲಿಪ್ಪೈನ್ ಕತೆ
ಅನು : ಬಿ. ವೈ. ಲಲಿತಾಂಬ

ಫಾಣಿ-ಪತ್ರವನ್ನು ಸಿದ್ಧಮಾಡಿ ಭೂಮಿಯ ಒಂದು ತುಣುಕನ್ನ ಕುರಿತು ಭೂಮಿ ಹಂಚಿಕೆಯ ರಿಜಿಸ್ಟ್ರಾರ್ ಹೀಗೆ ಬರೆದ, 'ಈ ಭೂಮಿಗೆ ಸಂಬಂಧಪಟ್ಟಂತೆ ಅಬೂ ಹಾಮಿದ್‌ಗೂ ಸರ್ಕಾರಕ್ಕೂ ಮಧ್ಯೆ ವಿವಾದವಿದೆ.' ಅಬೂ ಹಾಮಿದ್ ಈ ಟಿಪ್ಪಣಿಯನ್ನು ನೋಡಿ ಕಿಂಚಿತ್ತೂ ವಿಚಲಿತನಾಗಲಿಲ್ಲ, 'ನಿಮಗೆ ಇಂಕು-ಪೆನ್ನು ಸುಲಭವಾಗಿ ಸಿಕ್ಕಿದೆ, ಬೇಕಾದ ಹಾಗೆ ಬರೆದುಕೊಳ್ಳಿ, ನಾನಂತೂ ನನ್ನ ಭೂಮಿಯನ್ನು ಬಿಡುವುದಿಲ್ಲ.' ಎಂದು ಮಾತ್ರ ನುಡಿದ,

ಸುಮಾರು ಐವತ್ತು ವರ್ಷಗಳಿಗಿಂತ ಹೆಚ್ಚಾಗಿರಬಹುದು, ಅವತ್ತಿನಿಂದ ಇವತ್ತಿನವರೆಗೂ ಅಬೂ ಈ ಭೂಮಿಯನ್ನು ಉತ್ತು-ಬಿತ್ತು-ಬೆಳೆದು ಬಂದಿದ್ದ. ಚಿಕ್ಕವನಾಗಿದ್ದಾಗ ಅವರಪ್ಪನ ಜೊತೆ, ಅವನು ಸತ್ತ ನಂತರ, ಇವನು ಹೀಗೆ ಇಷ್ಟು ವರ್ಷ ಅವನು ಭೂಮಿಯ ಸಾಗುವಳಿ ಮಾಡಿದ್ದ. ರಿಜಿಸ್ಟ್ರಾರ್ ಬರೆದ ಮೇಲೂ ಅವನು ಮೊದಲಿನಂತೆಯೇ ತನ್ನ ಉಳಿಮೆಯನ್ನು ಮುಂದುವರಿಸಿಕೊಂಡೇ ಬಂದ.

ಸುಮಾರು ಹೀಗೆಯೇ ಮತ್ತೂ ಒಂದು ವರ್ಷ ಕಳೆದಿರಬಹುದು. ಆಗ ಒಮ್ಮೆ ಇದ್ದಕ್ಕಿದ್ದ ಹಾಗೆ ಈ ಭೂಮಿಯ ವಿವಾದವನ್ನು ಕುರಿತಂತೆ ಹೈಫಾನಲ್ಲಿ ಕೋರ್ಟಿಗೆ ಹಾಜರಾಗುವಂತೆ ಅಮೀನ ಸಮನ್ ತಂದುಕೊಟ್ಟ. ಆ ವೇಳೆಗೆ ಫಾಣಿ ಪತ್ರದಲ್ಲಿ ರಿಜಿಸ್ಟ್ರಾರ್ ಏನು ಬರೆದಿದ್ದ ಅನ್ನುವುದು ಕೂಡ ಅಬೂಗೆ ಮರೆತು ಹೋಗಿತ್ತು.

ನಿಗದಿಯಾದ ದಿನ ಅಬೂ ತನ್ನ ಮಗನನ್ನೂ ಕರೆದುಕೊಂಡು ಹೈಫಾಗೆ ಬಂದ. ಇದಕ್ಕೋಸ್ಕರ ಅವನ ಮಗ ತನ್ನ ಕೆಲಸಗಳನ್ನೆಲ್ಲಾ ಬಿಟ್ಟುಬಂದಿದ್ದ.

ನ್ಯಾಯಾಲಯದ ಸಭಾಗಾರದಿಂದ ಕಟುವಾದ ಧ್ವನಿಯಲ್ಲಿ ಅಬೂ ಹೆಸರನ್ನು ಕರೆದರು. ಅಬೂ ಯಥಾಪ್ರಕಾರ ತನ್ನ ಮಗನ ಜೊತೆ ಒಳಕ್ಕೆ ಹೋದ. ಇನ್ನು ಮೊಕದ್ದಮೆ ಆರಂಭವಾಯಿತು, 'ಈ ಭೂಮಿ ನಿನ್ನದು ಅಂತ ನೀನು ಹೇಗೆ ಸಾಬೀತು ಪಡಿಸುತ್ತೀಯ ?' ಎಂದು ಜಜ್ ಅವನನ್ನು ಕೇಳಿದ.

'ಸ್ವಾಮೀ, ಈ ಭೂಮಿ ನಮ್ಮ ತಂದೆಯಿಂದ ಪಿತ್ರಾರ್ಜಿತವಾಗಿ ನನಗೆ ಬಂದ ಆಸ್ತಿ, ದೇವರು ಆ ನಮ್ಮ ತಂದೆ - ನಿಮ್ಮ ತಂದೆ ಆತ್ಮಾನ ಚೆನ್ನಾಗಿಟ್ಟಿರಲಿ' ಎಂದು ಅಬೂ ಉತ್ತರಿಸಿದ.

'ಕೇಳಿದಷ್ಟಕ್ಕೆ ಮಾತ್ರ ಉತ್ತರ ಕೊಡು. ಬಾಯಿಗೆ ಬಂದಿದ್ದೆಲ್ಲಾ ಹರಟಬೇಡ, ಈ ಭೂಮಿ ನಿನ್ನದು ಅಂತ ಅನ್ನುವುದಕ್ಕೆ ನಿನ್ನ ಹತ್ತಿರ ಏನಾದರೂ ಸಾಕ್ಷಿ ಇದ್ದರೆ ಹೇಳು, ಅಷ್ಟೆ, ನಮ್ಮ ತಂದೆ ಅವರು - ಇವರ ಹೆಸರನ್ನೆಲ್ಲಾ ಇಲ್ಲಿ ತರಬೇಡ. ತಿಳಿಯಿತಾ' ಜಜ್ ಹೇಳಿದ.

'ಸ್ವಾಮೀ, ನಮ್ಮ ತಂದೆಯಿಂದ ಇದು ಬಂತು ಅಂತ ನಾನು ನಿಮಗೆ ಹೇಳ್ತಾ ಇದ್ದೀನಿ, ನಾನು 15 ವರ್ಷದ ಹುಡುಗನಾಗಿದ್ದಾಗಿನಿಂದ ಇದನ್ನು ನೋಡಿಕೊಳ್ತಾ ಇದ್ದೀನಿ.'

'ಅದೆಲ್ಲಾ ಸಾಕ್ಷಿ ಅಲ್ಲ, ನಿಜ ಹೇಳಬೇಕಂದರೆ, ಈ ಜಮೀನಿನಲ್ಲಿ ನೂರಕ್ಕೆ ಅರವತ್ತು ಭಾಗ ಕಲ್ಲು ಸೇರಿಕೊಂಡಿದೆ. ಅದರಿಂದ ಅಷ್ಟುಭಾಗ ಈ ಜಮೀನು ಸರ್ಕಾರಕ್ಕೆ ಸೇರಬೇಕು.'

ಈಗ ಹಾಮಿದ್‌ಗೆ ತಡೆಯಲು ಸಾಧ್ಯವಾಗಲಿಲ್ಲ. ಅವನು ಕಿರುಚಿಕೊಂಡ, ಏನು ಹೇಳ್ತಾ ಇದ್ದೀರಿ ಸ್ವಾಮಿ ? ದಿನಾ ಟ್ರ್ಯಾಕ್ಟರ್ ಈ ಜಮೀನನ್ನು ಉಳುತ್ತೆ ಮಧ್ಯವಲ್ಲಿ ಕೆಲವು ಬಂಡೆಗಳು ಇವೆ, ಆದರೆ ಬಂಡೆ ಇರುವ ಕಡೆಗಳಲ್ಲಿ ಅಂಜೂರ-ದ್ರಾಕ್ಷಿ ಗಿಡಗಳನ್ನು ಹಾಕಿ ನಾನು ಬೆಳೆಸುತ್ತಾ ಇದ್ದೀನಿ. ಅದೇನು ಬಂಜರುಭೂಮಿ ಅಲ್ಲ. ನಮ್ಮ ತಂದೆ ಅವರು ಬದುಕಿರುವವರೆಗೂ ಈ ಭೂಮಿಯಲ್ಲಿರೋ ಕಲ್ಲುಗಳನ್ನೆಲ್ಲಾ ತೆಗೆದುಹಾಕಿದರು. ಯಾಕೆ, ಸರ್ಕಾರಕ್ಕೆ ಬೇರೆ ಯಾರ ಭೂಮಿಯೂ ಕಣ್ಣಿಗೆ ಬೀಳಲಿಲ್ಲವಾ ?'

'ನೀನು ಬಾಯಿಗೆ ಬಂದ ಹಾಗೆ ಹರಟುವುದನ್ನು ನಿಲ್ಲಿಸು ಅಂತ ನಾನು ಪುನಃ ಹೇಳುತ್ತಿದ್ದೀನಿ. ಯಾರ ಭೂಮಿಯೂ ಸರ್ಕಾರಕ್ಕೆ ಬೇಕಾಗಿಲ್ಲ. ಇದು ಅದರ ಹಕ್ಕು ಅಷ್ಟೆ.'

'ಹಕ್ಕೋ ?...ಓಹೋ ! ನನಗೂ ಗೊತ್ತಿದೆ, ಸರ್ಕಾರಕ್ಕೆ ಬೇಕಾದ್ದಿದೆ ಬಹಳ ಶಕ್ತಿ ಇದೆ ಅಂತ. ಆದರೆ ನಾನು ಏನು ಮಾಡಲಿ ಸ್ವಾಮಿ, ನಾನು ಒಬ್ಬ ಮಾಮೂಲಿ ಮನುಷ್ಯ, ನನ್ನ ಹತ್ತಿರ ಏನಿದೆ. ಮೂಳೆ-ಚಕ್ಕಳ ಬಿಟ್ಟರೆ ನನ್ನ ಹತ್ತಿರ ಏನಿದೆ ? ಸರ್ಕಾರ ನನ್ನ ಮೇಲೆ ಏಕೆ ದ್ವೇಷ ಕಾರುತ್ತಿದೆ ?' ಅಬೂ ಕೇಳಿದ.

'ನೀನು ನ್ಯಾಯಾಲಯದಲ್ಲಿ ನಿಂತು ಮಾತನಾಡುತ್ತಿದ್ದೀಯ ಅಂತ ಮೊದಲು ಅರ್ಥಮಾಡಿಕೋ. ಅದರಿಂದ ಬಾಯಿಗೆ ಬಂದ ಹಾಗೆ ಹರಟುವುದನ್ನು ಮೊದಲು ನಿಲ್ಲಿಸು. ಸರ್ಕಾರ ನಿನಗೆ ಈಗಿರುವುದರಲ್ಲಿ ಅರ್ಧ ಭಾಗವನ್ನು ಬಿಟ್ಟುಕೊಟ್ಟರೆ ಒಪ್ಪಿಕೊಳ್ಳುತ್ತೀಯಾ ?' ಜಜ್ ಕೇಳಿದ.

ತನ್ನ ತಲೆ ಅಲ್ಲಾಡಿಸಿ ಹಾಮಿದನೆಂದ, 'ಸ್ವಾಮೀ, ನನಗೆ ಸರ್ಕಾರ ಅನ್ನುವ ಒಬ್ಬ ತಮ್ಮ ಇದ್ದಾನೆ, ಅವನಿಗೆ ನನ್ನ ಆಸ್ತಿಯಲ್ಲಿ ಪಾಲು ಕೊಡಬೇಕು ಅಂತ ಎಲ್ಲಾ ನಮ್ಮ ತಂದೆ ನನಗೆ ಎಂದೂ ಹೇಳಿರಲಿಲ್ಲವಲ್ಲಾ.'

ಇನ್ನು ವಿವಶನಾಗಿ ಜಜ್ ಹೇಳಿದ, 'ಏ ಮುದುಕ, ನನ್ನ ತೀರ್ಮಾನವನ್ನು ನೀನು ಒಪ್ಪಿಕೊಂಡರೆ ನಿನಗೇ ಒಳ್ಳೆಯದು.'

'ಬೀಜ ಇಲ್ಲದೆ ಇರೋ ಹಣ್ಣು ಮುರುಟಿ ಕಪ್ಪಗಾಗಿ ಹೋಗಿರುತ್ತದಲ್ಲಾ, ನೀವು ಕೊಡುತ್ತಿರೋ ತೀರ್ಮಾನ ಹಾಗಿದೆ, ಸ್ವಾಮೀ, ಯಾವತ್ತಿದ್ದರೂ ನ್ಯಾಯ ಇಲ್ಲದ ತೀರ್ಮಾನ ಹೆಚ್ಚು ದಿನ ಉಳಿಯುವುದಿಲ್ಲ......ಉಳಿಯುವುದಿಲ್ಲ..." ಎಂದು ಲೊಟಗುಟ್ಟುತ್ತಾ ತನ್ನ ಊರುಗೋಲನ್ನೆತ್ತಿಕೊಂಡು ಅಬೂ ಹಾಮಿದ ಹೊರಕ್ಕೆ ನಡೆದ.

# ಪುನರಾವಾಸ

ಮೂಲ : ರಾಂದೇವ್ ದುರಂಧರ್
ಅನು : ಸಿ. ಸುಶೀಲ

ಇಂದು ಬೀರಿಚ್ ಮರ ಬರಿದಾಗಿದೆ. ಹಕ್ಕಿಗಳ ಚಿಲಿಪಿಲಿ ರಾಗಗಳೊಂದಿಗೆ ಆಹ್ಲಾದವಾಗಿ ಕುಣಿಯುವ ಕೊಂಬೆಗಳೊಂದಿಗೆ ದರ್ಶನವನ್ನು ನೀಡುತ್ತಿದ್ದ ಬೇರಿಚ್ ಮರ ಇಂದು ಕಳಾವಿಹೀನವಾಗಿ ಕಾಣುತ್ತಿದೆ. ವೃದ್ಧ ದಶರಥನು ಮರದ ಕೆಳಗೆ ಮಂಚದ ಮೇಲೆ ನಿಟ್ಟುಸಿರು ಬಿಡುತ್ತಾ ಕುಳಿತನು. ಹಕ್ಕಿಗಳೆಲ್ಲ ಆಹಾರ ಹುಡುಕಿ ಕೊಂಬು ಎಲ್ಲಿಗೋ ಹಾರಿಹೋಗಿರಬೇಕು.

ಜಮುನ ಬದುಕಿದ್ದಾಗ ಈ ಅವಸ್ಥೆ ಅವುಗಳಿಗೆ ಎಂದಾದರು ಬಂದಿತ್ತೇ ? ಈಗ ಮನೆಯಲ್ಲಿ ಸೊಸೆಯದೆ ರಾಜ್ಯ ! ತಾನು ಒಂದು ಹಿಡಿಕಾಳನ್ನೂ ಆ ಹಕ್ಕಿಗಳಿಗೆ ಹಾಕಲಾರದ ಅಶಕ್ತ. ಸೊಸೆ ಅವುಗಳನ್ನು ಹೆದರಿಸಿ ಓಡಿಸಿರಬೇಕು. ಆಕೆಯನ್ನು ಕಂಡಕೂಡಲೇ ಅವು ಹಾರಿಹೋಗುತ್ತಿವೆ. ಸಂಜೆಗೆ ಹಿಂದಿರುಗುತ್ತವೋ ? ಇಲ್ಲವೊ ? ದಶರಥನಿಗೆ ತಳಮಳ ಉಂಟಾಯಿತು.

ಜಮುನ ಬದುಕಿದ್ದಾಗ ಈ ಮರವನ್ನೇ ಒಂದು ರಾಜ್ಯ ಎಂದು ಭಾವಿಸಿ ಅವು ಬಾಳಿದುವು. ಲಕ್ಷ್ಮೀದೇವಿಯಂತಿದ್ದ ಹೆಂಡತಿಯ ಮುಗ್ಧ ಮುಖ ಕಣ್ಣಮುಂದೆ ತೋರಿದ ಕೂಡಲೆ ದಶರಥನ ಮನಸ್ಸಿನಲ್ಲಿ ವಿಪರೀತ ಸಂಕಟವಾಯಿತು. ಬೆಳಗ್ಗೆ ಎದ್ದಕೂಡಲೆ ಮನೆಯ ಮುಂದೆ ನೀರು ಚಿಮುಕಿಸಿದಂತೆ ಮರದ ಕೆಳಗೆ ಕಾಳು ಚೆಲ್ಲುತ್ತಿದ್ದಳು. ಹಕ್ಕಿಗಳು ಹಾರಿ ಬಂದು ತಿನ್ನುತ್ತಿದ್ದವು. ಆಗ ನೋಡಬೇಕು ಆ ಸಾಧ್ವಿಯ ಮುಖದಲ್ಲಿ ಕಾಣುವ ತೃಪ್ತಿ !

ಅಪರೂಪವಾಗಿ ಸಿಗುವ ಆ ತೃಪ್ತಿಯಲ್ಲಿ ತಾನು ಪಾಲುದಾರನಾಗುತ್ತಿದ್ದ. ಆಕೆ ಅಕ್ಕಿ ಆರಿಸುತ್ತಿದ್ದರೆ, ಹಕ್ಕಿಗಳು ನಿರ್ಭಯವಾಗಿ ಆಕೆಯ ಹೆಗಲ ಮೇಲೆ ಕುಳಿತು ಕುಣಿಯುತ್ತಿದ್ದುವು. ಒಂದೊಂದು ಬಾರಿ ಅವು ತನ್ನನ್ನೂ ತಮ್ಮ ಸಂರಕ್ಷಕನೆಂದೇ ಭಾವಿಸಿ ತಲೆಯ ಮೇಲೆ ಕೂರುತ್ತಿದ್ದವು. ಪ್ರೀತಿಗೆ ಬದಲು ಪ್ರೀತಿ ತಾನೇ ಸಿಗೋದು ;

"ಅವು ನಮ್ಮ ಮಕ್ಕಳ್ರಿ !" ಜಮುನ ವಾತ್ಸಲ್ಯದಿಂದ ಹೇಳುತ್ತಿದ್ದಳು.

"ಹೌದು !" ನಗುತ್ತಾ ಹೇಳುತ್ತಿದ್ದ. ಆಗ ಇನ್ನೂ ಸುರೇಶ್ ಹುಟ್ಟಿರಲಿಲ್ಲ. ಒಂದು ದಿನ ತಾನೂ ತನ್ನ ಹೆಂಡತಿ ಸಂತೆಗೆ ಹೋಗಿದ್ದಾಗ ಒಬ್ಬ ಹುಡುಗ ಎರಡು ಹಕ್ಕಿ ಜೋಡಿಗಳನ್ನು ಮಾರುತ್ತಿದ್ದ. ಅವುಗಳನ್ನು ನೋಡಿ ಜಮುನ ಇಷ್ಟಪಟ್ಟಳು. ತಮ್ಮ ಸಂರಕ್ಷಣೆಯಲ್ಲಿ ಅವು ಬೀರಿಚ್ ಮರದಲ್ಲಿ ಗೂಡು ಕಟ್ಟಿಕೊಂಡು ಸಂಸಾರ ಮಾಡುತ್ತ, ಸಂತಾನವನ್ನು ವೃದ್ಧಿ ಮಾಡಿಕೊಳ್ಳುತ್ತಿದ್ದುವು.

ಒಂದು ದಿನ ಮನೆಯಲ್ಲಿ ಸಾಕಿದ್ದ ಬೆಕ್ಕು ಕತ್ತಲಲ್ಲಿ ಮರಹತ್ತಿ ಒಂದು ಮರಿಯನ್ನು ಬಾಯಲ್ಲಿ ಹಿಡಿಯಿತು. ಪ್ರಾಣಭೀತಿಯಿಂದ ಅದು ಕಿರುಚಿದ್ದು ಕೇಳಿ. ಅಷ್ಟು ನಿದ್ರೆಯಲ್ಲಿಯೂ ಬೆಚ್ಚಿ ಜಮುನ ಎದ್ದಳು. ಮೂಲೆಯಲ್ಲಿದ್ದ ಕೋಲು ಹಿಡಿದು ಮಿಂಚಿನಂತೆ ಹಿತ್ತಲಿನ ಕಡೆಗೆ ಓಡಿ ಬೆಕ್ಕಿನ ಬೆನ್ನಿಗೆ ಒಂದು ಏಟು ಕೊಟ್ಟಳು. ಅಷ್ಟೇ ! ಹಿಡಿದ ಮರಿಯನ್ನು ಬಿಟ್ಟು ಓಡಿದ ಬೆಕ್ಕು ಮತ್ತೆ ಇತ್ತಕಡೆ ತಲೆಹಾಕಲಿಲ್ಲ.

"ಭಗವಂತನು ಬೆಕ್ಕುಗಳಿಗೆ ಅಷ್ಟು ಚೂಪಾದ ಉಗುರುಗಳನ್ನು ಏತಕ್ಕೆ ಕೊಟ್ನೋ ?" ಎಣ್ಣೆಯಲ್ಲಿ ಅರಿಸಿನ ಬೆರಸಿ, ಮರಿಯ ಗಾಯಗಳಿಗೆ ಲೇಪಿಸುತ್ತಾ ಜಮುನ ಅಂದಳು.

"ಹೌದು... ಈ ಮರ ಇನ್ನೂ ಸ್ವಲ್ಪ ಬೆಳೆದು ಬೆಕ್ಕುಗಳು ಹತ್ತಲಾರದಷ್ಟು ದೊಡ್ಡದಾದ್ರೆ ಆಗ ತೊಂದರೇನೆ ಇರೋದಿಲ್ಲ." ದಶರಥ ಹೇಳಿದನು.

"ಅದು ಬೆಳೆದು ದೊಡ್ಡದಾಗೊವರ್ಗ್ಗು ನಾವೀ,ಲೋಕದಲ್ಲಿ ಇರ್ತೀವಾ ?"

"ಇರೋಲ್ಲ." ಸಂಕಟದಿಂದ ಉತ್ತರಿಸಿದನು.

ಜಮುನ ಮಾಡಿದ ಸೇವೆಯಿಂದ ಆ ಮರಿ ಮತ್ತೆ ಜೀವತುಂಬಿಕೊಂಡು ತನ್ನ ವಿಶಾಲ ಕುಟುಂಬದೊಂದಿಗೆ ಬೆರೆತುಹೊಯಿತು.

ಆ ಮರ ಬೆಳೆದು ದೊಡ್ಡದಾಗುವ ಮುಂಚೆಯೇ ಹಿಂದಕ್ಕೆ ಬರಲಾರದ ಲೋಕಕ್ಕೆ ಜಮುನ ಹೋಗಿಬಿಟ್ಟಳು. ಆಗ ಸುರೇಶ್ ಆರು ವರ್ಷದ ಮಗು. ಅವಳ ನೆನಪಿಗಾಗಿ ಮಗುವನ್ನು ಆತನಿಗೆ ಬಹುಮಾನವಾಗಿ ನೀಡಿ ಆಕೆ ಹೋಗಿಬಿಟ್ಟಳು.

ಜಮುನಳ ಆಸೆಯ ಪ್ರತಿರೂಪವನ್ನು ಕಣ್ತುಂಬ ನೋಡಿ ಸಂತೋಷಪಡಲು ಮಗನಾದರು ಇದಾನೆಂದು ಅವನಿಗೆ ಸಂತೋಷವಾಯಿತು. ಇದ್ದ ಸ್ವಲ್ಪ ಹೊಲವನ್ನು ಕಷ್ಟಪಟ್ಟು ಉತ್ತು ಬಿತ್ತಿ ಬೆಳೆ ಬೆಳೆಸಿ ಮಗನನ್ನು ಓದಿಸುತ್ತ ಮುದ್ದಾಗಿ ಬೆಳೆಸಿದನು. ಮೊದಮೊದಲು ಜಮುನಳು ಇಲ್ಲದ ಲೋಪ ತನ್ನ ಕಣಕಣಗಳನ್ನೂ ವಿಚಲಿತ ಗೊಳಿಸಿದ್ದರೂ ಬೇಗನೆ ಆ ನೋವಿನಿಂದ ಚೇತರಿಸಿಕೊಂಡನು.

ಬೀರಿಚ್ ಮರದ ಮೇಲೆ ಸಂಸಾರವಿದ್ದ ಆ ಹಕ್ಕಿಗಳ ಸಮೂಹವನ್ನು ನೋಡಿದಾಗಲೆಲ್ಲಾ ಜಮುನ ಶಾರೀರಕವಾಗಿ ಈ ಲೋಕವನ್ನು ತ್ಯಜಿಸಿದ್ದರೂ ಆಕೆ ಪುನಃ ಜನ್ಮ ಪಡೆದು ಆ ಸಮೂಹದಲ್ಲೇ ಇದ್ದಳೆಂದೂ ಮತ್ತೆ ತನ್ನ ಆಶ್ರಯಕ್ಕೆ ಬಂದಿದ್ದಾಳೆಂದೂ ಸಮಾಧಾನಪಟ್ಟುಕೊಳ್ಳುತ್ತಿದ್ದ.

ಯೌವನದಲ್ಲಿ ಹೆಜ್ಜೆ ಇಟ್ಟಿದ್ದ ಸುರೇಶನಿಗೆ ಮಾತ್ರ ತಂದೆ ತನ್ನ ಸುತ್ತ ಮೂಢ

ನಂಬಿಕೆಯು ಗೆರೆ ಎಳೆದುಕೊಂಡು ಬಾಳುತ್ತಿದ್ದ ಈ ಪ್ರಪಂಚ ತುಂಬಾ ಇಕ್ಕಟ್ಟಾಗಿ ಕಾಣಿಸುತ್ತಿತ್ತು. ಅವನು ಬಾಳಬೇಕೆಂದಿದ್ದ ಲೋಕದಲ್ಲಿ ಅರ್ಥರಹಿತವಾದ ಅಂಥ ನಂಬಿಕೆಗಳ ಸುಳಿವು ಸಹ ಇರಬಾರದು – ಇಲ್ಲಿ ಇರಬೇಕಾದ್ದು ಕೇವಲ ವರ್ತಮಾನ, ಕಾರ್ಯಬದ್ಧವಾದ ವಿಜ್ಞಾನ.

ಮೃತ್ಯುವು ಪ್ರತಿ ಪ್ರಾಣಿಗೂ ಅನಿವಾರ್ಯ. ಸತ್ತ ಪ್ರತಿ ಪ್ರಾಣಿ ಪುನಃ ಜನ್ಮ ಎತ್ತುವುದೆಂಬ ನಂಬಿಕೆ ಅಜ್ಞಾನ. ಇಂದು ತಾಯಿಯ ಮರಣ, ನಾಳೆ ತಂದೆಯ ಸಾವು, ನಂತರ ಮತ್ತೊಬ್ಬರು. ಸತ್ತ ತಾಯಿಯನ್ನು ಆ ಬೀರಿಚ್ ಮರದ ಹಕ್ಕಿಗಳ ಸಮೂಹದಲ್ಲಿ ಹುಡುಕುತ್ತಾ ಮಾನಸಿಕ ತುಮುಲಕ್ಕೆ ಒಳಗಾಗುವುದು ಹಾಸ್ಯಾಸ್ಪದ! ಅವಿವೇಕ! ಇದು ಸುರೇನನ ವಾದ.

ಪ್ರಪಂಚ ಎಷ್ಟು ಮುಂದಕ್ಕೆ ಧಾವಿಸಿಕೊಂಡು ಹೋಗುತ್ತಿದೆ. ಆದರೆ ತಂದೆ ಇಷ್ಟು ಹಿಂದೆ ಬೀಳುತ್ತಿದ್ದಾರೇನು? ಒಂದು ದಿನ ತಂದೆಗೆ ಛೇಡಿಸುತ್ತಾ – "ನಿಜವಾಗ್ಯೂ ಈ ಮೂಕಪ್ರಾಣಿಗಳಲ್ಲಿ ನಿಮ್ಮ ಹೆಂಡತಿ ಕಾಣಿಸುತ್ತಿದಾಳಾ?"

ದಶರಥ ನಕ್ಕನು "ಹೌದು. ಇವುಗಳಲ್ಲಿ ನಿಂಗೆ ನಿನ್ನ ತಾಯಿ ಕಾಣುವುದಿಲ್ಲವೆ ಮಗು?" ತಂದೆ ಹಾಕಿದ ಪ್ರಶ್ನೆಗೆ ಸುರೇನನ ಬಾಯಿಗೆ ಬೀಗ ಹಾಕಿತು.

ತನಗೆ ವಯಸ್ಸಾಗಿ - ಶಕ್ತಿಸಾಮರ್ಥ್ಯ ಕಳೆದುಕೊಂಡು ಕೊನೆಯ ತೀರಕ್ಕೆ ಸೇರಿದ ಭಾವನೆ ಮೊದಲನೆ ಬಾರಿಗೆ ದಶರಥನಿಗೆ ಉಂಟಾಯಿತು.

ಸುರೇನ್ ಡಿಗ್ರಿ ಪಡೆದುಕೊಂಡನು. ಅದೇ ಊರಲ್ಲಿ ಕೆಲಸ ಸಿಕ್ಕಿತು. ಅವನ ವಿದ್ಯಾಭ್ಯಾಸಕ್ಕೂ, ಕೆಲಸಕ್ಕೂ ಸಂಬಂಧವಿಲ್ಲದಿದ್ದರೂ ಅದಕ್ಕೆ ದಶರಥ ಚಿಂತಿಸಲಿಲ್ಲ. ಅವನ ಆಶಯ ನೆರವೇರಿತು. ಮಗನ ಬಾಳಿಗೆ ಒಂದು ಸ್ಥಿರತ್ವ ಬಂದಿತು. ಸಮಾಜ ದಲ್ಲಿ ಗೌರವ ಸಿಕ್ಕಿತು, ಇನ್ನೇನುಬೇಕು? ಆ ಕಲ್ಪವೃಕ್ಷದ ನೆರಳಲ್ಲಿ ತನ್ನ ಕೊನೆ ಯುಸಿರಾಡಿದರೆ ಸಾಕು.

ಕೆಲಸ ಸಿಕ್ಕಿದ ಕೆಲವು ಕೆಲವು ದಿನಗಳಲ್ಲೇ ಒಬ್ಬ ಹುಡುಗಿಯನ್ನು ಪ್ರೀತಿಸುದ್ದಾಗಿ, ಆಕೆಯನ್ನೇ ಮದುವೆ ಮಾಡಿಕೊಳ್ಳುವುದಾಗಿ, ಮಗ ಹೇಳಿದಾಗ ದಶರಥನಿಗೆ ಆಶ್ಚರ್ಯವಾಗಲಿಲ್ಲ. ತಾಯಿ ಇಲ್ಲದ ಮಗುವೆಂದು ಕೇಳಿದ್ದೆಲ್ಲ ಕೊಡುತ್ತಾ ಬಂದನು. ಈ ವಿಷಯದಲ್ಲಿ ಮಾತ್ರ ಅವನ ಅಭೀಷ್ಟಕ್ಕೆ ವ್ಯತಿರೇಕವಾಗಿ ಹೇಗೆ ನಡೆಯುತ್ತೆ? ತಥಾಸ್ತು ಅಂದನು.

ಮದುವೆ ಚೆನ್ನಾಗಿಯೇ ನಡೆಯಿತು. ಸೊಸೆ ಮನೆಯಲ್ಲಿ ಹೆಜ್ಜೆ ಇಟ್ಟ ದಿನ ತನ್ನ ಹಕ್ಕಿಗಳ ಸಾಮ್ರಾಜ್ಯ ಸುರಕ್ಷಿತವಾದಂತೆ ದಶರಥನ ಅನಿಸಿಕೆ. ಸೊಸೆಯ ಮನಸ್ಸಿನಲ್ಲಿ ಸ್ತ್ರೀ ಸಹಜವಾದ ಮಮಕಾರ ಇರುತ್ತದೆ ಅಲ್ಲವಾ? ಆ ಹಕ್ಕಿಗಳ ನಡುವೆ ಬಾಳುತ್ತಿದ್ದ ಜಮುನಾಳನ್ನು ಆಕೆ ಗುರುತಿಸುವುದಿಲ್ಲವೆ?

ಅಯ್ಯೋ ಜಮುನಳನ್ನು ಸೊಸೆ ನೋಡಲೇ ಇಲ್ಲವಲ್ಲ! ಹೇಗೆ ಗುರುತಿಸುತ್ತಾಳೆ? ಆಗ ನೆನಪಿಗೆ ಬಂದಿತು ದಶರಥನಿಗೆ ಅವರ ಮನೆಯ ಫೋಟೋ, ಹಳೆ ಟ್ರಂಕಲ್ಲಿ

ಕಾಗದಗಳ ನಡುವೆ ಬಿದ್ದಿರಬೇಕು. ಅದನ್ನು ತೆಗೆದು ಸೊಸೆಗೆ ತೋರಿಸಬೇಕು ಎಂದು ಪೆಟ್ಟಿಗೆ ಇದ್ದ ರೂಮಿಗೆ ಹೋಗಿ ಚಕಿತನಾದನು. ಆ ಪೆಟ್ಟಿಗೆ ಇರಬೇಕಾದ ಜಾಗದಲ್ಲಿ ಇಲ್ಲ. ಸೊಸೆ ಅದರ ಜಾಗವನ್ನೇ ಅಲ್ಲ – ಆ ಮನೆಯ ಸಂಸ್ಕೃತಿಯನ್ನೇ ಬದಲಾಯಿಸಿದಂತೆ ಇದೆ.

ಅಷ್ಟರಲ್ಲಿ ಆಕೆ ಬಂದು ಆತನ ಸಂದೇಹವನ್ನು ಬಗೆಹರಿಸಿದಳು. "ಇಲ್ಲಿದ್ದ ಹಳೆ ಟ್ರಂಕನ್ನ ಹಳೆ ಸಾಮಾನಿನ ರೂಮಲ್ಲಿ ಇಟ್ಟಿದ್ದೇನೆ."

"ಯಾತಕ್ಕೆ ?" ಆಶ್ಚರ್ಯದಿಂದ ಕೇಳಿದನು.

"ಅದರಿಂದ ರೂಮು ಮತ್ತೂ ಇಕ್ಕಟ್ಟಾಗಿ ಕಾಣುತ್ತಿದೆ. ಇನ್ನೂ ಮನೇಗೆ ಬರೋ ಹೋಗೋ ನೆಂಟರು ಇದ್ದೇ ಇದಾರೆ."

"ಅಷ್ಟು ಮಾತ್ರಕ್ಕೆ ಪೆಟ್ಟಿಗೆ ತೆಗೆದುಬಿಡಬೇಕೇನು?"

"ಮನೆಯಲ್ಲಿ ಕೆಲಸಕ್ಕೆ ಬಾರದ ಸಾಮಾನುಗಳಿದ್ರೆ ನಂಗೆ ತುಂಬಾನೆ ಕಿರಿಕಿರಿಯಾಗುತ್ತೆ!" ಎಂದು ಹೇಳಿ ಸರಸರ ಹೋಗುತ್ತಿದ್ದ ಸೊಸೆಯನ್ನು ಶಿಲಾಪ್ರತಿಮೆಯಂತೆ ನೋಡುತ್ತ ನಿಂತುಬಿಟ್ಟನು.

ಮದುವೆ ಆಗಿ ಇನ್ನೂ ಹತ್ತು ದಿನಗಳು ಕಳೆದಿರಲಿಲ್ಲ. ಆದರೆ ಸೊಸೆಯ ಮಾತಲ್ಲಿ ನವವಧುವಿನ ನಾಚಿಕೆ, ಸಂಕೋಚ ಲೇಶಮಾತ್ರವೂ ಇರಲಿಲ್ಲ. ಪ್ರೇಮ ವಿವಾಹ ತಾನೆ ? ಅಷ್ಟೇ ಮತ್ತೇ !

ನಿಧಾನವಾಗಿ ಹಿತ್ತಲಕಡೆ ನಡೆದನು. ಬೀರಿಚ್ ಮೇಲೆ ಹಕ್ಕಿಗಳು ಹಾರಾಡುತ್ತಿವೆ. ಮಂಚದ ಮೇಲೆ ಹಾಗೆ ಮಲಗಿದನು.

ಆಗ ಮನೆಯ ಒಳಗಿನಿಂದ ಮಾತುಗಳು ಕೇಳಿ ಬಂದವು. "ಹಿತ್ತಲಲ್ಲಿ ಆ ಹಕ್ಕಿಗಳ ಹಾರಾಟ, ಕಿರುಚಾಟ, ಆ ದುರ್ಗಂಧ ಸಹಿಸೋಕ್ಕೆ ಆಗಲ್ಲ. ಪ್ರತಿದಿನಾ ಎರಡು ಮೂರು ಸಾರಿ ಆ ಹಿತ್ತಲು ಗುಡಿಸಿ ನನ್ನ ಕೈಗಳು ಬಿದ್ದೋಗ್ತಿವೆ. ಆ ನಾತಕ್ಕೆ ಮೂಗು ಒಡ್ದೋಗ್ತಿದೆ. ಆ ಹಾಳು ಹಕ್ಕಿಗಳು ಯಾತಕ್ರಿ ಮನೇಲ್ಲಿ ? ದಿನಾ ಅರ್ಧಾ ಕೆ.ಜಿ. ಕಾಳು ಬೇರೆ ವ್ಯಯ... ಮಾರಿಬಿಟ್ರೆ ಶನಿ ತೊಲಗಿದಂತೆ !" ಸೊಸೆ ಮಗನಿಗೆ ಹೇಳುತ್ತಿದ್ದಳೆ.

ದಶರಥನ ಎದೆಗೆ ಶೂಲ ಚುಚ್ಚಿದಂತಾಯಿತು. ಅಷ್ಟರತನಕ ಸೊಸೆಯ ಮೇಲೆ ಬೆಳೆಸಿಕೊಂಡ ಆಸೆಗಳೆಲ್ಲ ಆ ಕ್ಷಣದಲ್ಲೇ ಶಿಥಿಲವಾದವು. ಹಕ್ಕಿಗಳನ್ನು ಮಾರಿಬಿಡೋಣ ಅಂತಾಳೆ ? ಎಷ್ಟು ಧೈರ್ಯ ! ಅವನ ಶರೀರದಲ್ಲಿ ಪ್ರಾಣ ಇರುವವರೆಗೂ ಅದು ಸಾಧ್ಯವೆ ?

ದಶರಥನನ್ನು ಕಂಡಕೂಡಲೆ ಹಕ್ಕಿಗಳೆಲ್ಲ ಕೆಳಕ್ಕೆ ಹಾರಿಬಂದುವು. ಆತನ ಮನಸ್ಸು ಸ್ವಲ್ಪ ಹಗುರವಾಯಿತು. ಮೆತ್ತಗೆ ನಕ್ಕನು. ಆಗತಾನೆ ಅಲ್ಲಿಗೆ ಬಂದ ಸೊಸೆಗೆ ಆ ನಗೆ ಅರ್ಥರಹಿತವಾಗಿ, ಅನುಮಾನಾಸ್ಪದವಾಗಿ ಕಂಡಿತು. ಹಾಗೆ ಬೆರಗು ಕಣ್ಣುಗಳಿಂದ ನೋಡುತ್ತಿದ್ದಳು.

ಆಕೆಯ ಅನುಮಾನವನ್ನು ಅರಿತವನಂತೆ ದಶರಥನು ನಕ್ಕು, "ನನ್ನ ಜೊತೆಯಲ್ಲಿ ಒಮ್ಮೆ ಈ ಲೋಕಕ್ಕೆ ಬಂದು ನೋಡಮ್ಮಾ ! ಈ ಮೂಕ ಪ್ರಾಣಿಗಳು ತಮ್ಮ ಯಜಮಾನನ ನೋವನ್ನು ಹೇಗೆ ಹಂಚಿಕೊಳ್ಳುತ್ತಿದ್ದಾವೊ ?" ಹೇಳಿದನು.

"ಹಾಗೇನು..." ಆಕೆಯ ಸ್ವರದಲ್ಲಿ ವ್ಯಂಗ್ಯ. ಹಕ್ಕಿಗಳು ಮನುಷ್ಯರ ನೋವನ್ನು ಹಂಚಿಕೊಳ್ಳುವುದೇನು ? ವಿಚಿತ್ರವಾಗಿದೆ ? ? ವ್ಯಂಗ್ಯದಲ್ಲಿ ಆಶ್ಚರ್ಯವು ಸೇರಿತ್ತು.

"ನಂಗೆ ಅಂಥ ಮನಸ್ಸು ಇಲ್ಲ ಬಿಡ್ರಿ. ಅವರು ಹೇಳ್ತಿದ್ರೆ ನಂಗೆ ನಂಬೋಕೆ ಆಗ್ತಿರಲಿಲ್ಲ. ಈಗ ಅರ್ಥವಾಗ್ತಿದೆ ನಿಮಗೆ ವಿಚಿತ್ರವಾದ ಮಾನಸಿಕ ರೋಗ ಇದೆ ಎಂದು !"

"ಅವನು ಹೇಳಿದ್ದು ನಿಜಾನೆ ತಾಯಿ ! ನಾನು ಹುಚ್ಚನೆ ! ಆದರೂ ನೀನು ನನ್ನನ್ನು ಕಂಡು ಹೆದರಬೇಕಾಗಿಲ್ಲ. ನಿಮ್ಮ ದೃಷ್ಟಿಯಲ್ಲಿ ನಾನು ಹುಚ್ಚನಾದ್ರು ; ಹೆಂಡತೀಗೂ–ಸೊಸೇಗೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಲಾರದಷ್ಟು ಹುಚ್ಚನಂತೂ ಅಲ್ಲ !"

## 2

ಸುರೇನನು ಅಂದು ಆಫೀಸಿಗೆ ಹೋಗಲು ತರಾತುರಿ ಮಾಡುತ್ತಿದಾನೆ. ಹೆಂಡತಿ ಮೂಲೆಯಲ್ಲಿದ್ದ ಷೂ ತಂದು ಬ್ರಷ್ ಮಾಡುತ್ತಿದಾಳೆ. ಟೈಗಾಗಿ ಬೀರುವಿನಲ್ಲಿ ಹುಡುಕಾಡುತ್ತಿದಾನೆ. ಆ ತರಾತುರೀಗೆ ಆ ದಿನ ಅವರು ತುಂಬಾ ತಡವಾಗಿ ಎದ್ದದ್ದೇ ಕಾರಣ. ಆಫೀಸಿಗೆ ಟೈಂ ಆಗಿದೆ. ಆದರೂ ಸುರೇನ್ ತನ್ನ ತಪ್ಪನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿಲ್ಲ. ಆ ದೋಷವನ್ನು ಹೆಂಡತಿ ಮೇಲೆ ಹಾಕಿ ಒಸರಾಡುತ್ತಿದಾನೆ.

ಅಷ್ಟೇ ! ಆಕೆಯ ಅಹಂಗೆ ಪೆಟ್ಟು ಬಿದ್ದಂತಾಯಿತು. ಅವನಿಗೆ ಸಹಾಯ ಮಾಡುವ ಕೆಲಸಕ್ಕೆ ವಿರಾಮ ಕೊಟ್ಟು ಕೆಂಪು ಬಾವುಟ ಹಾರಿಸಿಬಿಟ್ಟಳು. ಒಂದು ಕ್ಷಣ ಸೂಜಿ ಬಿದ್ದರು ಕೇಳುವಷ್ಟು ನಿಶ್ಯಬ್ದ ತಾಂಡವವಾಡಿತು. ಹೊಸ ಸಂಸಾರ. ಕೋಪ ಮಾಡಿಕೊಳ್ಳೋದು ಸರಿಕಾಣದೆ ಸುರೇನ್ ಹೆಂಡತಿ ಹತ್ತಿರ ಬಂದು ಪ್ರೀತಿಯಿಂದ ಆಕೆ ಗಲ್ಲ ಹಿಡಿದು" ಕೋಪ ಬಂತಾ ?" ಎಂದು ಕೇಳಿದನು.

"ಸಾಕು ಬಿಡಿ !"

"ಏಕೆ ಬಿಡಬೇಕು ?"

"ಅವರು ಬಂದು ಬಿಡ್ತಾರೆ ?"

"ಯಾರು ? ಆ ಹಕ್ಕಿಗಳ ಸ್ವಾಮೀನಾ ?"

"ಹೌದು ! ಹಾಲು ತರಲು ಕಳಿಸಿದೀನಿ,"

ತಂದೆ ಹಾಲು ತರಲು ಹೋಗಿ ಇನ್ನೂ ಬಾರದೆ ಇರುವುದೆ ತನಗೆ ತಡವಾಗಲು ಕಾರಣ ಎಂದು ಸುರೇನನಿಗೆ ಹೊಳೆಯಿತು.

ಆ ಸಮಯಕ್ಕೆ ಸರಿಯಾಗಿ ದಶರಥನು ಹಾಲಿನ ಚೆಂಬು ಹಿಡಿದು ಮನೆ ಒಳಕ್ಕೆ ಬಂದನು.

"ಇಲ್ಲಿ ನಿಮ್ಮ ಮಗ ಆಫೀಸಿಗೆ ತಡವಾಯಿತೆಂದು ಹಾರಾಡುತ್ತಿದ್ದರೆ, ಇಷ್ಟು ಹೊತ್ತಿಗೆ ಮನೆ ನೆನಪು ಬಂತಾ ನಿಮಗೆ ?" ಎಂದು ಸೊಸೆ ಮಾವನವರ ಮೇಲೆ ಕೋಪ ತೋರಿಸಿದಳು.

"ನಮ್ಮ ಆಫೀಸರು ಮುಂಗೋಪಿ. ಅರ್ಧಕ್ಷಣ ತಡವಾದರೂ ಕಟುವಾಗಿ ಮಾತನಾಡುತ್ತಾನೆ." ಹೆಂಡತಿ ಜಯಮಾಲೆಯ ಮಾತುಗಳಿಗೆ ತಾಳ ಹಾಕಿದನು.

ದಶರಥನು ಶೂನ್ಯದೊಳಕ್ಕೆ ನೋಡುತ್ತ ನಿರ್ಜೀವವಾಗಿ ನಕ್ಕನು. "ಕೇಳಿದ್ಯಾ ಜಮುನಾ ? ವಯಸ್ಸಾಗೋಯ್ತು ಅಂತ ತೋಚಿದಂತೆ ತರಾಟೆಗೆ ತೆಗೆದುಕೊಳ್ತಿ ದಾರೆ...!"

"ಕೂಗಾಡ್ರಿ, ಇನ್ನೂ ಕೂಗಾಡ್ರಿ, ಊರ್ನಲ್ಲಿರೋ ಎಲ್ಲಾರ್ನು ಸೇರ್ಸಿ ನಮ್ಮ ಮೇಲೆ ಆರೋಪವನ್ನು ಹೊರಿಸಿ, ನಾವು ಬಾಯಿ ತೆಗದ್ರೆ ಸಾಕು...ಜಗಳ ಕಾಯೋದು ನಿಮಗೆ ಅಭ್ಯಾಸ ತಾನೆ !" ತಾತ್ಸಾರದಿಂದ ಜಮುನ ಹೇಳಿದಳು.

"ನಾನು... ಜಗಳಾ ಆಡ್ತಿದೀನಾ ?"

"ಇಲ್ಲ.... ನಾವು ಆಡ್ತಿರೋದು. ನಮಗೆ ಬೇರೆ ಏನಾದ್ರು ಕೆಲಸ ಇದ್ರೆ ತಾನೆ?"

"ಸರೀನಮ್ಮಾ ! ತಪ್ಪು ನಂದೆ. ಕ್ಷಮಿಸಿ !" ಎಂದು ಹಾಲಿನ ಚೆಂಬು ಮೇಜಿನ ಮೇಲಿಟ್ಟು ಚಿಂತಾಕ್ರಾಂತನಾಗಿ ಹಿತ್ತಲಿನ ಕಡೆ ನಡೆದನು.

ಅವನಿಗಾಗಿ ಎದುರು ನೋಡುತ್ತಿದ್ದಂತೆ ಮರದ ಮೇಲ ಕುಳಿತಿದ್ದ ಹಕ್ಕಿಗಳು ನೆಲಕ್ಕೆ ಹಾರಿಬಂದು ಕುಳಿತವು. ಜೇಬಿನಿಂದ ಪೊಟ್ಟಣ ತೆಗೆದನು. ಪೇಟೆಯಲ್ಲಿ ಗೊತ್ತಿದ್ದ ಸಾಹುಕಾರನ ಅಂಗಡಿಯಿಂದ ಆ ಕಾಳು ತಂದಿದ್ದ. ತಡವಾಗಲು ಅದೇ ಕಾರಣ.

ಪೊಟ್ಟಣ ಬಿಚ್ಚಿ ಕಾಳು ಮರದ ಕೆಳಗೆ ಚೆಲ್ಲಿದನು. ಹಕ್ಕಿಗಳು ಹಸಿದಿದ್ದ ಕಾರಣ ಒಂದೇ ಕ್ಷಣದಲ್ಲಿ ತಿಂದು ಮತ್ತೆ ಮರದ ಮೇಲಕ್ಕೆ ಹಾರಿ ಕುಳಿತವು. ಆದರ ಅಂದು ರೆಕ್ಕೆ ಪಟಪಟ ಹೊಡೆಯುತ್ತಾ ಚಿಲಿಪಿಲಿ ರಾಗ ಹಾಕಲಿಲ್ಲ. ತಮ್ಮ ಯಜಮಾನನ ನೋವನ್ನು ಹಂಚಿಕೊಳ್ಳುತ್ತಿರಬೇಕು !

3

ಜಯಮಾಲೆ ತನ್ನ ಅಲಂಕಾರ ವಸ್ತುಗಳಿಗಾಗಿ ಎಷ್ಟು ಧಾರಾಳವಾಗಿ ಹಣ ಖರ್ಚು ಮಾಡುತ್ತಾಳೋ, ಹಕ್ಕಿಗಳಿಗೆ ಕಾಳು ಹಾಕಬೇಕಾದರೆ ಅಷ್ಟೇ ಬಿಗಿಯಾಗಿರು ತ್ತಾಳೆ. ಅವಳ ಗಂಡನ ಸಂಪಾದನೆ ಹೀಗೆ ಹಕ್ಕಿಗಳ ಪೋಷಣೆಗಾಗಿ ವ್ಯರ್ಥವಾಗಿ ಖರ್ಚು ಆಗುವುದು ಅವಳಿಗೆ ಇಷ್ಟವಿಲ್ಲ.

ಹಿಂದೆ ಹಿಡಿತವಿಲ್ಲದೆ ಧಾರಾಳವಾಗಿ ಖರ್ಚು ಮಾಡುತ್ತಿದ್ದ ಕೈಗಳು ಇವು. ಈಗ ಆ ಕೈಗಳಿಗೆ ಬೇಡಿಗಳು ಬಿದ್ದಿವೆ. ಅವನ ಸುತ್ತೂ ಸೊಸೆ ಕಟ್ಟಿದ ಕೋಟೆಯ ಒಳಗೆ ಬಾಳು ದುರ್ಭರವಾಗಿದೆ. ಪೂರ್ಣಿಮೆಯ ಚಂದ್ರನಂತೆ ತನ್ನ ಬಾಳಲ್ಲಿ ಪ್ರವೇಶಿಸಿ, ಜಮುನ ಬೆಳಗಿಸಿದ ಬೆಳದಿಂಗಳನ್ನು ಸೊಸೆ ಶಾಶ್ವತವಾಗಿ ಅರಿಸಿದಂತಾಗಿ, ಆ ಕತ್ತಲಲ್ಲಿ ಉಸುರುಕಟ್ಟಿದಂತಾಗಿದೆ.

ಈಗ ಅವನ ಸ್ನೇಹಿತರು ಹಿಂದಿನಂತೆ ಸಂತೋಷವಾಗಿ ಕುಣಿಯುತ್ತಿಲ್ಲ. ಅವುಗಳ ಕಂಠದಲ್ಲಿ ಶ್ರಾವ್ಯತೆ ಲುಪ್ತವಾಗುತ್ತಿದೆ. ಅವನಂತೆ ಆ ಹಕ್ಕಿಗಳು ಕ್ರಮೇಣ ದುರ್ಬಲಗೊಳ್ಳುತ್ತಿವೆ. ಅವನು ಹಾಕುವ ಒಂದು ಹಿಡಿ ಕಾಳಿನಲ್ಲಿ ಸಂಜೀವಿನಿ ಶಕ್ತಿ ಇರುತ್ತದೆಯೆ ?

ಇನ್ನು ಸುಮ್ಮನೆ ಕುಳಿತರೆ ಪ್ರಯೋಜನವಿಲ್ಲ. ಹೀಗೆ ಆ ಹಕ್ಕಿಗಳು ತುಂಬಾ ದಿನ ಉಳಿಯೋದಿಲ್ಲ. ಬೇರೆ ಆಶ್ರಯವನ್ನು ಹುಡುಕಿಕೊಳ್ಳುತ್ತವೆ. ಅವುಗಳ ಜೊತೆಯಲ್ಲಿ ಜಮುನಾನು... ದಶರಥ ಇಲ್ಲಿ... ಜಮುನಾ ಅಲ್ಲಿ !

ಸೊಸೆ ಮನೆಯಲ್ಲಿಲ್ಲದ ಸಮಯ ನೋಡಿ ದಶರಥ ದಿನಸಿ ಇಡುತ್ತಿದ್ದ ರೂಮಿಗೆ ನುಗ್ಗಿದನು. ಎರಡೂ ಕೈಯಲ್ಲಿ ಕಾಳು ತುಂಬಿಕೊಂಡು ಬೀರಿಚ್ ಮರದ ಕೆಳಗೆ ಆತುರವಾಗಿ ಎರಚಿದನು. ಎಷ್ಟೋ ದಿನಗಳ ನಂತರ ಆ ಹಕ್ಕಿಗಳಿಗೆ ಹೊಟ್ಟೆತುಂಬಾ ಆಹಾರ ಸಿಕ್ಕಿತು. ಕ್ಷಣದಲ್ಲಿ ಆ ಕಾಳೆಲ್ಲ ಮಾಯವಾದುವು.

"ಏನಿದೆಲ್ಲ ?" ಸಿಂಹದಂತೆ ಗರ್ಜಿಸಿದ ಸೊಸೆಯ ಸ್ವರ ಕೇಳಿದ ಕೂಡಲೆ ಹಕ್ಕಿಗಳೆಲ್ಲ ಮರದ ಮೇಲಕ್ಕೆ ಹಾರಿ ಹೋದವು.

ದಶರಥನ ಕೆಲಸ ಬಯಲಾಯಿತು.

ಅವನ ತಲೆ ಅವಮಾನದಿಂದ ಬಾಗಿ, ಮೈತುಂಬ ಬೆವರು ಸುರಿಯಿತು. ಆಗ ತನ್ನ ಅಧಿಕಾರದ ಆಧಿಕ್ಯವನ್ನು ತೋರಬೇಕೆಂದು ಬಯಸಿದ ಜಯತಾರೆಗೆ ಆಶ್ಚರ್ಯವಾಯಿತು.

"ಹಕ್ಕಿಗಳಿಗೆ ಮಾತ್ರ ಹಸಿವಿಲ್ಲವೇನಮ್ಮಾ !" ದಶರಥ ನಿಶ್ಚಲವಾಗಿ ನುಡಿದನು.

ಆ ನಿರ್ಲಿಪ್ತ ಧಾಟಿ ನೋಡಿ ಅವಳ ಅಹಂಗೆ ಪೆಟ್ಟಾಯಿತು. ಚೂಪಾದ ಶೂಲವನ್ನು ಅವನ ಎದೆಗೆ ಹೊಡೆದಂತೆ, "ನನ್ನ ಗಂಡನ ಸಂಪಾದನೆ ಹೀಗೆ ವ್ಯರ್ಥವಾಗಿ ಖರ್ಚು ಮಾಡುವುದು ನಾನು ಸಹಿಸಲಾರೆ."

ದಶರಥ ಚಕಿತನಾಗಿ ಆಕೆಯ ಕಡೆ ನೋಡಿದನು. "ಅದು ನನ್ನ ಮಗನ ಸಂಪಾದನೆ ತಾನೆ ತಾಯಿ ?" ಬೆಂಕಿಯಲ್ಲಿ ಎಣ್ಣೆ ಸುರಿದಂತೆ ಭಗ್ಗೆಂದು ಉರಿಯಿತು ! ಸೊಸೆಯ ಮುಂದೆ ದಶರಥನು ಎಂದೂ ಮಾತು ಸಡಿಲಗೊಳಿಸಿರಲಿಲ್ಲ. ತನ್ನ ಅಹಂಕಾರದ ಎದುರು ಆತನ ತರ್ಕ ಗೆಲ್ಲುವುದು ಅವಳಿಗೆ ಅಸಹನೀಯವಾಯಿತು. ಆ ಮನೆಯಲ್ಲಿ ಹೆಜ್ಜೆ ಇಟ್ಟ ಕೂಡಲೆ ಗಂಡನ ಮೇಲೆ ಸರ್ವಾಧಿಕಾರಗಳನ್ನು ಜಯತಾರೆ ಹಸ್ತಗತ ಮಾಡಿಕೊಂಡಳು. ಇಂದು ಹೇಗೆ ಈ ಮುದುಕನಿಗೆ ಮಗನ ಸಂಪಾದನೆಯಲ್ಲಿ

ಹಕ್ಕಿದೆ ಎಂಬ ಆಲೋಚನೆ ಬಂದಿತು ? ಗಿಡವನ್ನು ಮೊಳಕೆಯಲ್ಲೆ ಬಗ್ಗಿಸುವುದು ಒಳ್ಳೆಯದು !

ಅಂದೇ ಅಡಿಗೆ ಮನೆ, ಸಾಮಾನಿನ ರೂಮುಗಳಿಗೆ ಬೀಗ ಬಿತ್ತು. ಹಕ್ಕಿಗಳಿಗೆ ಆಹಾರ ನೀಡುವ ದಾರಿ ಮುಚ್ಚಿ ಹೋಯಿತು. ಅವು ಕ್ರಮೇಣ ಬಲಹೀನಗೊಳ್ಳು ತ್ತಿವೆ. ಹಿಂದಿನ ಚಿಲಿಪಿಲಿ ರಾಗ ನಿಂತು ಹೋಗಿದೆ. ದಶರಥ ಮನಸ್ಸಿನಲ್ಲೇ ಪೇಚಾಡಿದನು.

ಒಂದು ದಿನ ಆತ್ಮಗೌರವವನ್ನು ಬಿಟ್ಟು ಭಿಕ್ಷುಕನಂತೆ ಬೇಡಿದನು. "ತಾಯಿ ! ಹಿಡಿಕಾಳು ಕೊಡಮ್ಮ !"

"ಯಾಕೆ ?"

"ಆ ಮೂಕ ಪ್ರಾಣಿಗಳಿಗೆ...!"

"ಮಾವಯ್ಯ ? ಆ ಹಾಳಾದ ಹಕ್ಕಿಗಳಿಗೋಸ್ಕರ ನೀವು ಹಾಗೆ ಕೆಂಜಿ ಕೇಳು ವುದು ಸರಿಯಲ್ಲ. ಪ್ರತಿದಿನಾ ಅರ್ಧ ಕೆ.ಜಿ. ಧಾನ್ಯ ಅವುಗಳ ಮುಖಕ್ಕೆ ಎಸೆದರೆ ನಮ್ಮ ಬಾಳು ಬೆಳಗಾದಂತೆ ! ದೇವರು ಅವುಗಳಿಗೆ ರೆಕ್ಕೆ ಕೊಟ್ಟಿದಾನೆ ಅವುಗಳಿಗೆ ಬೇಕಾದ ಆಹಾರ ಅವು ಸಂಪಾದನೆ ಮಾಡಿಕೊಳ್ಳಬಲ್ಲವು. ಹಕ್ಕಿ – ಪಿಕ್ಕಿಗಳನ್ನೆಲ್ಲ ನಮ್ಮ ನೆಂಟರು ಅಂದುಕೊಳ್ಳೋದು ಅರ್ಥವಿಲ್ಲದ ಆಲೋಚನೆ !"

ದಶರಥನ ಮನಸ್ಸಿಗೆ ತುಂಬ ನೋವಾಯಿತು. ಹಕ್ಕಿಗಳಿಗೆ ತೃಪ್ತಿ ಸಿಗದಿದ್ದರೆ ಆ ಮರದ ಕೊಂಬೆಗಳು ಹೇಗೆ ನಾಟ್ಯ ಮಾಡುತ್ತವೆ ?

ಆ ದಿನ ಹೊತ್ತು ಹರಿದ ಮೇಲೆ ಇದ್ದಕ್ಕಿದ್ದಂತೆ ದಶರಥನಿಗೆ ಎಚ್ಚರ ಆಯಿತು. ಬಚ್ಚಲ ಮನೆಗೆ ಹೋಗಿ ಬರೋಣವೆಂದು ರೂಮಿನಿಂದ ಹೊರಕ್ಕೆ ಬಂದನು. ಮಗ–ಸೊಸೆ ಇರುವ ರೂಮಿನ ಬಾಗಿಲುಗಳು ತೆಗೆದಿವೆ. ಸಣ್ಣ ದನಿಯಲ್ಲಿ ಅವರಿಬ್ಬರು ಮಾತನಾಡಿಕೊಳ್ಳುತ್ತಿದ್ದಾರೆ.

"ಆ ಶನಿ ಹಕ್ಕಿಗಳಿಂದ ಅವರು ಪೂರ್ತಿ ಹುಚ್ಚರಾಗುವ ಸಂಭವವಿದೆ. ಆ ಮರದ ಮೇಲೆ ಯಾವುದೊ ಕೆಟ್ಟ ಗಾಳಿ ಸೋಕಿರಬೇಕು ಎಂದು ನನ್ನ ಸಂದೇಹ ! ಅದೇನೇ ಇರಲಿ ಒಂದು ಸಾರಿ ಭೂತ ವೈದ್ಯನನು ಕರೆತಂದು ತೋರಿಸಿದರೆ ಸರಿ !" ಸೊಸೆ ಹೇಳುತ್ತಿದಾಳೆ.

ಸುರೇನ್ ಜೋರಾಗಿ ನಕ್ಕ. "ಹಳ್ಳಿ ಗುಗ್ಗೂ ! ಹಾಗೆ ಮಾತನಾಡಬೇಡ ! ಆ... ಪೀಡೆ ತೊಲಗಬೇಕು ಅಂದ್ರೆ ಆ ಮರಾನೆ ಕಡಿದು ಹಾಕಿದ್ರೆ ಸರಿಹೋಗುತ್ತೆ."

"ಹೌದೂರಿ ! ಇಷ್ಟರತನಕ ನಂಗೆ ಆ ಯೋಚನೇನೆ ಬಂದಿರಲಿಲ್ಲ. ಶುಭಸ್ಯ ಶೀಘ್ರಂ. ನಾಳೇನೆ ಕಡಿದು ಹಾಕಿಸಿ ಬಿಡಿ. ಪೀಡೆ ತೊಲಗಿದರೆ ಸಾಕು !"

ದಶರಥನ ಕಿವಿಗಳಿಗೆ ಕಾದ ಎಣ್ಣೆ ಬಿದ್ದಂತೆ ಬಿದ್ದವು ಆ ಮಾತುಗಳು. ಕೋಪ ದಿಂದ ಶರೀರವೆಲ್ಲ ನಡುಗುತ್ತಿದ್ದರೆ, ಯಾವುದೋ ಅಜ್ಞಾತ ಶಕ್ತಿ ಹಿಂದಿನಿಂದ ತಳ್ಳಿ ದಂತೆ ರೂಮಿಗೆ ನುಗ್ಗಿದನು. "ಆ ಮರ ಕಡಿದುಹಾಕೋ ಪ್ರಯತ್ನ ಮಾಡಿದ್ರೆ

ನಿಮ್ಮ ರಕ್ತಾ ಹೀರ್ತೀನಿ ಹುಷಾರ್!" ಆತನ ಸ್ವರದಲ್ಲಿ ಎಂದೂ ಕೇಳದ ಕ್ರೌರ್ಯ ಕೇಳಿ ಪ್ರತಿಮೆಗಳಂತೆ ನಿಂತುಬಿಟ್ಟರು ದಂಪತಿಗಳು.

"ಆ ಮರ ಕಡಿಯೋದ್ರಿಂದ ನಮಗೆ ಸಿಗೋದೇನು? ನಿಮ್ಮ ಕ್ಷೇಮ ಕ್ಕೋಸ್ಕರಾನೆ ಈ ತೀರ್ಮಾನಕ್ಕೆ ಬಂದಿದ್ದು" ಸುರೇನ್ ಹೇಳಿದನು.

"ನನ್ನ ಕ್ಷೇಮಕ್ಕಾಗೀನಾ? ನಂಗೇನಾಗಿದೆ?"

"ಮಾನಸಿಕ ಯಾತನೆ! ಹಗಲೆಲ್ಲ ನಂಗೆ ಆಫೀಸ್ನಲ್ಲಿ ಕಳೆದುಹೋಗುತ್ತೆ. ಆದರೆ ಜಯತಾರೆ ನಿಮ್ಮ ಅರ್ಥರಹಿತವಾದ ಮಾತುಗಳಿಂದ, ಚೇಷ್ಟೆಗಳಿಂದ ಹೆದರಿಕೊಂಡಿ ದಾಳೆ. ಆ ಮರದಲ್ಲಿ ಯಾವುದೋ ದೆವ್ವ ಕೂತಿರಬೇಕು. ಅದಕ್ಕಾಗೆ ನೀವು ಹೀಗೆಲ್ಲ ಆಡ್ತಾ ಇರೋದು. ಇನ್ನೂ ತಾತ್ಸಾರ ಮಾಡಿದ್ರೆ ನಿಮ್ಮ ಹುಚ್ಚು ತೀವ್ರವಾಗಿ ನನ್ನ ಹೆಂಡತಿ ಪ್ರಾಣಕ್ಕೆ ಅಪಾಯ ಉಂಟಾಗಬಹುದು......!"

"ನನ್ನ ಮಗಳ ಪ್ರಾಣ ತೆಗೀತೀನೆಂದು ಹೇಗೆ ಅಂದುಕೊಂಡೆ?"

"ಮಗಳೇ ಎಂದು ಭಾವಿಸಿದ್ದರೆ, ಹೀಗೆ ದಿನಾಲು ಜಗಳವಾಡುತ್ತಿರಲಿಲ್ಲ!"

"ಶಕ್ತಿ ಉಡುಗೋಗಿದೆ. ಅದರಿಂದ ಏನೋ ಅಂದಿರಬಹುದು. ನನ್ನನ್ನು ಕ್ಷಮಿಸಿ!"

"ಸರಿ... ಸರಿ! ಆ ಮರ ಕಡಿದುಹಾಕಿದ್ರೆ ನಮಗೆ ಯಾವ ಸಮಸ್ಯೇನು ಇರೋ ದಿಲ್ಲ: ಎಲ್ಲಾರ್ಗೂ ಮನಶ್ಯಾಂತಿ ಸಿಗುತ್ತೆ....!"

ದಶರಥ ಬೆಚ್ಚಿಬಿದ್ದ. "ಆ ಕೆಲಸ ಮಾತ್ರ ಮಾಡಬೇಡಿ" ಕೈ ಮುಗಿಯುತ್ತ ಅಂದನು.

"ಹಾಗಾದ್ರೆ... ಅವುಗಳಿಗೆ ಕಾಳು ಎಲ್ಲಿಂದ ತಂದು ಹಾಕ್ತೀರಿ?"

"ಭಿಕ್ಷೆ ಬೇಡಿ!"

"ಆ...... !" ದಂಪತಿಗಳು ನಿಶ್ಚೇಷ್ಟರಾದರು.

ಯಾವಾಗ ಆತ 'ಭಿಕ್ಷೆ'! ಎಂಬ ಆಟಂಬಾಂಬು ಪ್ರಯೋಗಿಸಿದನೋ, ಅಂದಿ ನಿಂದ ದಶರಥನ ಬೇಡಿಕೆಗಳು ಈಡೇರುತ್ತಿದ್ದುವು. ಹಿಂದಿನ ಹಾಗೆ ಮಗ, ಸೊಸೆ ರೇಗಾಡುತ್ತಿರಲಿಲ್ಲ. ಆಕ್ಷೇಪಣೆ ಮಾಡುತ್ತಿರಲಿಲ್ಲ: ಈಗ ಮನೆಯಲ್ಲಿ ದಶರಥನು ಮುಕುಟವಿಲ್ಲದ ಮಹಾರಾಜ!

ಆದರೆ ಸುರೇನನಿಗೆ ತಂದೆಯಲ್ಲಿ ಏನೋ ಬದಲಾವಣೆ. ಅಷ್ಟೇ ಅಲ್ಲ ನೆರೆಹೊರೆ ಯವರು ಹಾಗೇ ಹೇಳುತ್ತಿದ್ದರು. ಬೀರಿಚ್ ಮರವನ್ನು ಪ್ರೀತಿಯಿಂದ ಸವರುವುದು, ಹಕ್ಕಿಗಳೊಂದಿಗೆ ಮಾತನಾಡುವುದು. ಪರಿಸರವನ್ನು ಮರೆತು, ಆ ಮರಕ್ಕೆ ಕಾವಲು ಕಾಯುತ್ತಿರುವಂತೆ ಹಗಲು–ರಾತ್ರಿ ಅಲ್ಲೇ ಕುಳಿತು ದಶರಥನು ಕಾಲ ಕಳೆಯುತ್ತಿದ್ದನು.

ಒಮ್ಮೆ ಜಯತಾರೆಯ ತಮ್ಮ ಅವರ ಮನೆಗೆ ಬಂದಿದ್ದ. ಆ ಸಂಜೆ ಹೊಟ್ಟೆ ತುಂಬಾ ತಿಂದು ಭುಕ್ತಾಯಾಸವನ್ನು ನೀಗಿಕೊಳ್ಳುತ್ತಿದ್ದ. ಹಕ್ಕಿಗಳನ್ನು ನೋಡುತ್ತಾ ದಶರಥ ಆನಂದಿಸುತ್ತಿದ್ದ.

ಇದ್ದಕ್ಕಿದ್ದಂತೆ ಒಂದು ಕಲ್ಲು ವೇಗವಾಗಿ ಬಂದು ಆ ಮರವನ್ನು ತಾಗಿತು. ಅಷ್ಟೇ! ಹಕ್ಕಿಗಳೆಲ್ಲ ಕಿರುಚುತ್ತಾ ಹಾರಿ ಹೋದವು. ಸೊಸೆಯ ತಮ್ಮ ನಿಂತು ಖುಷಿ ಪಡುತ್ತಿದಾನೆ. ಅವನ ಎಡಗೈಯಲ್ಲಿ ಇಟ್ಟಿಗೆ ಚೂರಿದೆ. ದಶರಥನ ಮೈ ಉರಿಯಿತು.

ಹುಡುಗನ ಮೇಲೆ ರೇಗಾಡಿದ. ಅವನು ಜೋರಾಗಿ ಅಳಲು ಪ್ರಾರಂಭಿಸಿದ. ತಮ್ಮನ ಅಳು ಕೇಳಿ ಜಯತಾರೆ ಓಡಿಬಂದಳು. ರೇಗಾಡಿದ್ದನ್ನು ಹತ್ತು ಏಟುಗಳಿಗೆ ಬದಲಾಯಿಸಿಬಿಟ್ಟನು ಹುಡುಗ.

ಜಯತಾರೆಯ ಕಣ್ಣುಗಳಲ್ಲಿ ಕಿಡಿ! ಗಾಯಗೊಂಡ ಹುಲಿಯಂತೆ ಕುಣಿದಳು. "ನನ್ನ ತಮ್ಮನ ಮೈಮೇಲೆ ಕೈ ಮಾಡುತ್ತೀರಾ ?"

"ರೇಗಾಡಿದೆ ಅಷ್ಟೆ! ಆದರೆ ಹೊಡೆಯಲಿಲ್ಲ."

"ಸುಳ್ಳು! ಹೊಡೆದ!" ಹುಡುಗ ಕಿರುಚಿದನು.

"ನೆಂಟನಾಗಿ ಬಂದ ನನ್ನ ತಮ್ಮನಿಗೆ ಕೊಡೋ ಆತಿಥ್ಯ ಇದೇನೆ? ನನ್ನ ಮೇಲಿನ ಕೋಪ ನನ್ನ ತಮ್ಮನ ಮೇಲೆ ತೋರುಸ್ತೀರಾ ?"

ಹುಡುಗನನ್ನು ನೋಡುತ್ತಾ "ಮಗು! ನೀನು ಶಾಲೆಗೆ ಹೋಗ್ತೀಯ ತಾನೆ ?"

"ಹೌದು !"

"ಸತ್ಯ ಅಸತ್ಯಗಳ ಪಾಠ ಕೇಳಿದೀಯಾ ?"

"ನೀನು ಓದಲಿಲ್ವಾ ?"

"ಇಲ್ಲಾ ಮಗು! ನಾನು ಇಷ್ಟರತನಕ ಶಾಲೆಯ ಮುಖಾನೆ ನೋಡಿಲ್ಲ. ಅದಕ್ಕೇ ನಿನ್ನನ್ನು ಹೊಡೆದರೂ ಹೊಡೆಯಲಿಲ್ಲವೆಂದು ಸುಳ್ಳು ಹೇಳ್ತಿದೀನಿ ನೋಡು !"

"ಇಂಥ ಮಾತುಗಳಿಗೆ ಏನೂ ಕಡಿಮೆಯಿಲ್ಲ. ಇವತ್ತು ಯಾವುದೋ ಒಂದು ತೀರ್ಮಾನ ಆಗದೆ ನಾನು ನೀರೂ ಕುಡಿಯೋದಿಲ್ಲ" ಎಂದು ಹೇಳಿ ಜಯತಾರೆ ತಮ್ಮನನ್ನು ಎಳೆದುಕೊಂಡು ಹೋದಳು.

ಈ ಘಟನೆ ಆಕೆಯಲ್ಲಿ ತೀವ್ರವಾದ ಸೇಡಿನ ಜ್ವಾಲೆ ಉಂಟು ಮಾಡಿತು. ಗಂಡನಿಗೆ ಹೇಳಿ ಅನಗತ್ಯವಾಗಿ ರಗಳೆ ಉಂಟುಮಾಡುವುದಕ್ಕಿಂತ ಅವಳೆ ಆ ಮುದುಕನಿಗೆ ಬುದ್ಧಿ ಹೇಳಬೇಕೆಂದು ತೀರ್ಮಾನಿಸಿದಳು.

ಆ ರಾತ್ರಿ ಎಲ್ಲರೂ ಮಲಗಿದ ಮೇಲೆ, ಜಯತಾರೆ ಶಬ್ದ ಮಾಡದೆ ಹೊರಕ್ಕೆ ಬಂದಳು. ದಶರಥನ ರೂಮಿನ ಕಡೆ ನೋಡಿದಳು. ಬಾಗಿಲುಗಳು ಮುಚ್ಚಿವೆ. ಗಾಢ ನಿದ್ರೆಯಲ್ಲಿದ್ದಂತೆ ಗೊರಕೆಯ ಶಬ್ದ ಕೇಳುತ್ತಿದೆ, ಹಿತ್ತಲಿನ ಕಡೆ ನೆಡೆದು ಮೂಲೆಯಲ್ಲಿ ಬಿದ್ದಿದ್ದ ಉದ್ದವಾದ ಬೆತ್ತದ ಕೋಲು ತೆಗೆದುಕೊಂಡು ಬೀರಿಚ್ ಮರದ ಸಮೀಪಕ್ಕೆ ಹೋದಳು. ಮರ ಮತ್ತು ಮರದ ಮೇಲಿನ ಹಕ್ಕಿಗಳು ಸುಖ ನಿದ್ರೆಯಲ್ಲಿವೆ.

ಮರಕ್ಕೆ ಬೀಸಿ ಒಂದು ಪೆಟ್ಟು ಹೊಡೆದಳು. ಅಷ್ಟೇ. ಪ್ರಳಯ ಬಂದಂತೆ, ಹಕ್ಕಿಗಳು ಕಿರುಚುತ್ತಾ ಹಾರಿಹೋದವು. ಅಷ್ಟು ದಿನಗಳಿಂದ ಅವು ಕಟ್ಟಿಕೊಂಡಿದ್ದ ಗೂಡುಗಳನ್ನೆಲ್ಲ ಚೆಲ್ಲಾಪಿಲ್ಲಿಯಾಗಿ ನೆಲಕ್ಕೆ ಉದುರಿಸಿದಳು ಜಯತಾರೆ.

ಆಗಲೆ ಆಕೆಯ ಸೇಡು ತಣ್ಣಗಾಗಿದ್ದು. ಎದೆಯ ಮೇಲಿನ ಭಾರ ಶಾಶ್ವತವಾಗಿ ಇಳಿಸಿದಂತಾಯಿತು. ನೆಮ್ಮದಿಯಿಂದ ಉಸಿರಾಡಿದಳು.

ಅಭ್ಯಾಸದಂತೆ ಆ ದಿನವೂ ಗಂಡ ಹೆಂಡತಿಯರು ತಡವಾಗಿ ಎದ್ದರು. ನಾಶವಾದ ಆ ಮುದುಕನ ಪಕ್ಷಿರಾಜ್ಯವನ್ನು ನೋಡಿ ಯಾವ ಪ್ರಳಯ ಸೃಷ್ಟಿಸುತ್ತಾನೋ ಎಂದು ಜಯತಾರೆ ಹೆದರುತ್ತಿದ್ದಳು. ಬೇಗ ಬೇಗ ಹೊರಕ್ಕೆ ಬಂದು ದಶರಥನ ರೂಮಿನ ಕಡೆ ನೋಡಿದಳು.

ಬಾಗಿಲುಗಳು ಮುಚ್ಚಿವೆ. ನಿಶ್ಶಬ್ದವಾಗಿ ರೂಮಿನ ಹತ್ತಿರ ಬಂದಳು. ಬಾಗಿಲು ತಳ್ಳಿದಳು. ಮಂಚದ ಮೇಲೆ ದಶರಥನು ಅಂಗಾತವಾಗಿ ಬಿದ್ದಿದ್ದಾನೆ. ಬಾಯಿ ಕಣ್ಣು ಅರ್ಧ ತೆಗೆದಿವೆ. ಅನುಮಾನದಿಂದ ಮಂಚದ ಹತ್ತಿರ ಹೋದಳು. ಆಕೆಯ ಅನುಮಾನ ನಿಜವಾಯಿತು.

ದಶರಥನು ಈ ಲೋಕದಿಂದ ಶಾಶ್ವತ ಬಿಡುಗಡೆ ಹೊಂದಿದ್ದಾನೆ.

ಬೇಗ ಬೇಗ ಹಿತ್ತಲಕಡೆ ಹೋಗಿ ನೋಡಿದಳು. ಹಾರಿಹೋದ ಹಕ್ಕಿಗಳೆಲ್ಲ ಮತ್ತೆ ಬಂದು ಗೂಡುಗಳು ಕಟ್ಟುಕೊಳ್ಳುತ್ತಿವೆ ಬೀರಿಚ್ ಮರದ ಮೇಲೆ!

# ಹಣೆಬರಹ

---

ಮೂಲ : ಬ್ಲಾದೊವಿಮಿರ್ ಭ್ರೊಜೆಕ್
ಅನು : ಹರಿಮೋಹನ್ ಶರ್ಮಾ
ಕನ್ನಡಕ್ಕೆ : ಬಿ. ಎಸ್. ಪದ್ಮಾವತಿ

ವಿಶೇಷವೆಂದರೆ ಆ ದೇಶದಲ್ಲಿ ಯಾವಾಗಲೂ ಅಷ್ಟೆ, ರಾಜಧಾನಿಯಲ್ಲಿ ಯಾವ ಹವಾಮಾನ ಇರುತ್ತಿತ್ತೋ, ಇಡೀ ದೇಶದಲ್ಲಿ ಅದೇ ಹವಾಮಾನ ಇರುತ್ತಿತ್ತು. ಒಂದು ವೇಳೆ ರಾಜಧಾನಿಯಲ್ಲಿ ಬಿಸಿಲು ಕಾಣಿಸಿರಲಿಲ್ಲ ಎಂದಿಟ್ಟುಕೊಂಡರೆ, ಕಣ್ಣು ಮುಂದೆ ಮಳೆ ಧಾರಾಕಾರವಾಗಿ ಸುರಿಯುತ್ತಿದ್ದರೂ, ಅಲ್ಲಿ ಬಿಸಿಲು ಇರಲಿಲ್ಲ ಅಂತ ಯಾರೂ ಹೇಳಕೂಡದು, ಅಷ್ಟೆ. ದೇಶದ ಒಂದು ಮೂಲೆಯಲ್ಲಿ ಒಂದು ವಾಯು ರೇಖೆಗಳ ಅಧ್ಯಯನದ ಕಾರ್ಯಾಲಯ ಕೂಡ ಇತ್ತು. ಅಲ್ಲಿ ಅಗತ್ಯವಾದ ಯಂತ್ರಗಳನ್ನು ಸಜ್ಜುಗೊಳಿಸಲಾಗಿತ್ತು. ಕಾರ್ಯಾಲಯದ ಹತ್ತಿರದಲ್ಲಿ ಆ ಮ್ಯಾನೇಜರ್ ಕೂಡ ವಾಸ ಮಾಡುತ್ತಿದ್ದ. ಯಂತ್ರಗಳನ್ನು ರಕ್ಷಿಸುವುದರ ಜೊತೆಗೆ ಪ್ರಯೋಜನವಾಗಲಿ ಅಂತ ಅವನು ಪ್ರತಿದಿನ ವಾಯುಮಾನದ ರಿಪೋರ್ಟ್ ಸಿದ್ಧಪಡಿಸುತ್ತಿದ್ದ.

ಹೊಸಬನಾದ ಮ್ಯಾನೇಜರ್ ಇನ್ನೂ ಯುವಕ ಹಾಗೂ ಪ್ರಾಮಾಣಿಕನಾಗಿದ್ದ. ಪ್ರತಿದಿನ ತಪ್ಪದೆ ಯಂತ್ರಗಳು ನೀಡಿದ ಅಂಕಿ–ಅಂಶಗಳನ್ನು ಜೋಡಿಸಿ ರಿಪೋರ್ಟ್ ಸಿದ್ಧಮಾಡಿ ಮೇಲಣ ಅಧಿಕಾರಿಗಳಿಗೆ ರವಾನಿಸುತ್ತಿದ್ದ.

ಬಿಸಿಲುಗಾಲ ಕಳೆದು ಬಿರುಗಾಳಿ ಮಳೆ ಶುರುವಾಯಿತು. ಮ್ಯಾನೇಜರ್ ತನ್ನ ರಿಪೋರ್ಟ್‌ನಲ್ಲಿ ಇವೆರಡು ವಿಷಯಗಳನ್ನು ದಾಖಲಿಸಿದ.

ಒಮ್ಮೆ, ಒಂದು ದಿನ ಅವನಿಗಿಂತ ಮೇಲ್ಪಟ್ಟ ಅಧಿಕಾರಿಯೊಬ್ಬರು ಅವನನ್ನು ಭೇಟಿಯಾಗಲು ಬಂದರು. ಅವನ ರಿಪೋರ್ಟ್‌ಗಳನ್ನು ಓದಿ ನೋಡಿ ನಂತರ ಅವನಿಗೆ, 'ನಿನ್ನ ರಿಪೋರ್ಟ್‌ಗಳು ಬಹಳ ನಿರಾಶಾದಾಯಕವಾಗಿವೆ, ನೀನು ಸ್ವಲ್ಪ ವಿವೇಕದಿಂದ ವರ್ತಿಸು' ಎಂದು ಹೇಳಿದರು.

ಮ್ಯಾನೇಜರ್‌ಗೆ ಅವನು ಹೇಳಿದ್ದು ಏನೊಂದೂ ಅರ್ಥವಾಗಲಿಲ್ಲ. ಮಾಮೂಲಿ ರೀತಿಯಲ್ಲಿ ರಿಪೋರ್ಟ್ ಕಳುಹಿಸುತ್ತಲೇ ಇದ್ದ.

ಹೀಗೆಯೇ ಮತ್ತೆ ಕೆಲವು ದಿನಗಳು ಉರುಳಿದವು. ಈ ಸಾರಿ ಒಬ್ಬ ಮೇಲಣ

ಅಧಿಕಾರಿ ಅವನಿಗೆ ಕರೆ ಕಳುಹಿಸಿದ. ಇವನನ್ನು ನೋಡಿ ಆತ ಹೇಳಿದ್ದಿಷ್ಟು, 'ನಿನ್ನ ರಿಪೋರ್ಟ್‌ಗಳೆಲ್ಲ ಏಕಪಕ್ಷೀಯವಾಗಿರುತ್ತವೆ, ಸುಗ್ಗಿ ಬಂದರೂ ನೀನು ಮಳೆ ಎಂಬ ಒಂದು ಶಬ್ದವನ್ನೇ ಹಿಡಿದುಕೊಂಡು ಕುಳಿತಿರುತ್ತೀಯ. ನೀನು ಇಂತಹ ರಿಪೋರ್ಟ್ ಕಳುಹಿಸುವುದರಿಂದ ರೈತರಿಗೆ ತುಂಬಾ ತೊಂದರೆಯಾಗುತ್ತದೆ.'

'ಮಳೆ ಬರುತ್ತಾ ಇರುವಾಗ ಏನು ಮಾಡುವುದು ?'

'ಬಾಯಿಗೆ ಬಂದಂತೆ ಹರಟಬೇಡ', ಎಂದು ಮೇಜಿನ ಮೇಲೆ ಗುದ್ದಿ ಆತ ಹೇಳಿದ, 'ನೀನು ಯೋಗ್ಯನಾದ ಮ್ಯಾನೇಜರ್ ಅನ್ನುವುದಲ್ಲಿ ಸಂದೇಹವಿಲ್ಲವಾದರೂ ನೀನು ಭಾರಿ ಭೋಳೆ. ಈ ನಿರಾಶಾದಾಯಕವಾದ ರಿಪೋರ್ಟ್ ಇನ್ನಾದರೂ ನಿಲ್ಲಿಸು.'

ಮುಖ ಕಪ್ಪಗೆ ಮಾಡಿಕೊಂಡು ಮ್ಯಾನೇಜರ್ ಹಿಂದಿರುಗಿದ.

ಮಾರನೆಯ ದಿನ ಮಳೆ ನಿಂತು ಹೋಯಿತು. ಇದರಿಂದ ಅವನಿಗೆ ನೆಮ್ಮದಿ ಯೆನಿಸಿತು. ಈಗ ಅವನು ಹೀಗೆ ಬರೆದ, 'ಕಳೆದ ಕೆಲವು ದಿನಗಳಿಂದ ಮಳೆಯಾದರೂ ಹೇಳುವಷ್ಟು ಹೆಚ್ಚೇನೂ ಆಗಲಿಲ್ಲ. ಈಗ ಮಳೆ ಪೂರ್ತಿಯಾಗಿ ನಿಂತಿದೆ. ಈಗ ಒಳ್ಳೆಯ ಚುರುಕಾದ ಬಿಸಿಲು ಬೀಳುತ್ತಲಿದೆ.'

ಸಂಜೆಯಾಗುವ ವೇಳೆಗಾಗಲೇ ಪುನಃ ತಣ್ಣನೆ ಗಾಳಿ ಬೀಸಲಾರಂಭಿಸಿತು. ರಾತ್ರಿ ಇಡೀ ಚಳಿಯಿಂದ ಅವನು ನಡುಗುತ್ತಿದ್ದ. ಆದರೆ ಮಾರನೆಯ ದಿನ ರಿಪೋರ್ಟ್ ಬರೆಯುವಾಗ ಅವನು ಹೀಗೆ ಬರೆದ, 'ಯಾವಾಗಿನಂತೆಯೇ ಬಿಸಿಲು ಹರಡಿತ್ತು. ಕೋಪರ್ನಿಕಸ್ ಒಬ್ಬ ಸೂರ್ಯ ಯಾವಾಗಲೂ ಮುಳುಗುವುದಿಲ್ಲ ಅಂತ ಹೇಳಿದ್ದಾರೆ. ಬರಿ...' ಎಂದಷ್ಟೇ ಬರೆದ. ಇನ್ನು ಮುಂದುವರೆಸಲಾಗಲಿಲ್ಲ. ಅವನ ಮನಸ್ಸು ಒಪ್ಪಿಗೆ ನೀಡಲಿಲ್ಲ. ಅವನ ಮನಸ್ಸು ತುಂಬಾ ನೊಂದುಕೊಂಡಿತು. ಅಷ್ಟು ಹೊತ್ತಿಗೆ ಆಕಾಶದಲ್ಲಿ ಮೋಡ ಗರ್ಜಿಸಿತು, ಅವನ ಪ್ರಾಮಾಣಿಕತೆ ಮರುಕಳಿಸಿತು. ಅವನು ಬೇರೆ ರಿಪೋರ್ಟ್ ಸಿದ್ಧಪಡಿಸಿದ. 'ಈಗ ಸಂಜೆ 5 ಗಂಟೆಯಾಗಿದೆ, ಆಕಾಶದಲ್ಲಿ ಮಿಂಚು ಮೂಡಿದೆ, ಮೋಡ ಗುಡುಗುತ್ತಿದೆ' ಎಂದು ಬರೆದ.

ಮಾರನೆಯ ದಿನ ಪುನಃ ಬಿರುಗಾಳಿ ಎದ್ದಿತು. ಅವನು ಆ ರಿಪೋರ್ಟ್ ಕೂಡ ಕಳುಹಿಸಿದ, ಮುಂದಿನ ದಿನ ಬಿರುಗಾಳಿ ಬರಲಿಲ್ಲವಾದರೂ ಹಿಮಪಾತವಾಯಿತು. ಅವನು ರಿಪೋರ್ಟ್‌ನಲ್ಲಿ ಅದನ್ನು ಕೂಡ ದಾಖಲಿಸಿದ. ಈ ರಿಪೋರ್ಟನ್ನು ಕಳುಹಿಸಿ ಅವನಿಗೆ ಒಂದು ತರಹೆಯ ಸಮಾಧಾನ, ತೃಪ್ತಿ ಸಿಕ್ಕಿತು, ಅಂಚೆಯವನು ಒಂದು ಸರ್ಕಾರಿ ಲಕ್ಕೋಟೆಯನ್ನು ತಂದು ಅವನಿಗೆ ಕೊಡುವವರೆವಿಗೂ ಅವನು ಈ ತೃಪ್ತಿಯ ಭ್ರಮೆಯಲ್ಲೇ ಕುಳಿತಿದ್ದ.

ರಾಜಧಾನಿಯಿಂದ ಬಂದಿದ್ದ ಈ ಪತ್ರದಲ್ಲಿ ಅವನನ್ನು ಮೇಲಧಿಕಾರಿಗಳು ಕರೆ ಕಳುಹಿಸಿದ್ದರು.

ಅವನು ರಾಜಧಾನಿಯಿಂದ ಹಿಂದಿರುಗಿದಾಗ ಅವನ ಸಂದೇಹಗಳೆಲ್ಲ ದೂರ ವಾಗಿದ್ದವು. ಅವನ ಸಂಶಯ ಕೂಡ ದೂರವಾಗಿತ್ತು.

ಇನ್ನು ಮುಂದೆ ಅವನು ಬರಿಯ ಒಳ್ಳೆಯ ಹವಾಮಾನ ಪರಿಸ್ಥಿತಿಯನ್ನೇ ದಾಖಲಿಸುತ್ತ ಬಂದ. ಕೆಲವು ಕವನಗಳನ್ನು ಕೂಡ ರಿಪೋರ್ಟ್‌ಗಾಗಿ ಅವನು ರಚಿಸಿ ಕಳುಹಿಸಿದ. ಎರಡು ತಿಂಗಳು ಹೀಗೆಯೇ ಕಳೆದ ನಂತರ ಒಮ್ಮೆ ಅವನು ಕಳುಹಿಸಿದ ರಿಪೋರ್ಟ್ ನೋಡಿ ಮೇಲಣ ಅಧಿಕಾರಿ ದಂಗಾಗಿ ಹೋದ. ರಿಪೋರ್ಟ್‌ನ ಆರಂಭ ಟೈಪ್ ಮಾಡಲಾಗಿತ್ತು. ಅದರಂತೆ, 'ಜಡಿಮಳೆ ಮತ್ತು ಬಿರುಗಾಳಿ' ಎಂದಿತ್ತು. ಮುಂದಿನ ಅಂಶ ಕೈ ಬರಹದಲ್ಲಿತ್ತು, ಅದರಂತೆ, 'ಈ ದಿನ ಹಳ್ಳಿಯಲ್ಲಿ ಉಳಿಯುವುದಿಲ್ಲ ಎಂದುಕೊಂಡಿದ್ದ ವಿಧವೆಯ ಮಗು ಆರೋಗ್ಯವಾಗಿದೆ.'

ಇಲಾಖೆಯಲ್ಲಿ ಅವನನ್ನು explanation ಗೆ ಒಳಪಡಿಸಿದಾಗ, ಅವನು ಆಫೀಸಿನ ಯಂತ್ರಗಳನ್ನು ಮಾರಿ ಬಂದ ಹಣದಲ್ಲಿ ಮದ್ಯ ಸೇವಿಸಿದ ಸ್ಥಿತಿಯಲ್ಲಿ ಹೀಗೆ ದಾಖಲಿಸಿದ್ದನೆಂಬ ವಿಷಯ ತಿಳಿದು ಬಂತು.

ನಿಜವಾದ ಅಂಶವೆಂದರೆ ಅವನು ಬಹಳ ಪ್ರಾಮಾಣಿಕ ವ್ಯಕ್ತಿಯಾಗಿದ್ದ.

# ಮರ್ಡೇಕಾ

ಮೂಲ : ಮುಖ್ತಾರ್ ಲೂಯಿಸ್
ಹಿಂದಿ : ಹರಿಮೋಹನ್ ಶರ್ಮಾ
ಅನು : ಬಿ. ವೈ. ಲಲಿತಾಂಬ

ಚರ್ಚೆ ಎಷ್ಟು ವಿಸ್ತಾರವಾಗಿ ಸಾಗಿತ್ತೆಂದರೆ ಸುಮಾರು ಎರಡು ಗಂಟೆಗಳಿಗಿಂತ ಹೆಚ್ಚಾಗಿ ಎಲ್ಲರೂ ವಿಷಯವನ್ನು ಛಿದ್ರ-ಛಿದ್ರಗೊಳಿಸಿಯಾಗಿತ್ತು. ಸೂರ್ಯೋನೋ ಒಬ್ಬನನ್ನು ಬಿಟ್ಟರೆ ಮಿಕ್ಕವರೆಲ್ಲ ಇನ್ನೂ ಮಾತನಾಡುತ್ತಲೇ ಇದ್ದರು.

ಇಲ್ಲಿ ಕುಳಿತಿರುವವರೆಲ್ಲ ಇಷ್ಟೊಂದು ಚರ್ಚೆ ನಡೆಸಿ, ದೇಶದ ಹಿತವನ್ನು ಕಾಯುವುದು ಸಾಧ್ಯವೇ ? ಚರ್ಚೆಯಿಂದ ನಿಜವಾಗಿಯೂ ರಾಷ್ಟ್ರಕ್ಕೆ ಸಂಬಂಧಿಸಿದ ಜಟಿಲವಾದ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಸಾಧ್ಯವೇ ? ಎಂದು ಚಿಂತಿಸಿ ಸೂರ್ಯೋನೋ ಮನಸ್ಸಿನಲ್ಲೇ ನಗುತ್ತಿದ್ದ.

ಈ ಚರ್ಚಾಗೋಷ್ಠಿಯಲ್ಲಿ ಬಂದು ಸೇರಿಕೊಳ್ಳಬೇಕೆಂಬ ಉತ್ಸಾಹ ಸೂರ್ಯೋನೋಗೆ ಮೊದಲಿನಿಂದ ಇರಲಿಲ್ಲ. ಆದರೆ ಅವನ ಗೆಳತಿ ಈಶ್ ಇಸಾಕ್ ಅವನನ್ನ ಎಳೆದುಕೊಂಡು ಬಂದಿದ್ದಳು. ರಾಷ್ಟ್ರದ ಸಮಸ್ಯೆಗಳನ್ನ ದೂರ ಮಾಡುವುದಕ್ಕಾಗಿ ನಾವು ಸ್ವಲ್ಪ ವೇಳೆಯನ್ನು ಖರ್ಚು ಮಾಡಲೇಬೇಕು ಎಂದು ಅವಳು ಯಾವಾಗಲೂ ಸೂರ್ಯೋನೋಗೆ ಹೇಳುತ್ತಿದ್ದಳು.

ಸೂರ್ಯೋನೋ, ಈಶ್ ಇಸಾಕ್ ಬಿಟ್ಟು ಅಲ್ಲಿ ಇನ್ನೂ ನಾಲ್ಕು ಜನ ಯುವಕರು ಸೇರಿದ್ದರು. 'ಪ್ರಂತೋ'–ಲೇಖಕ ಆತನಿಗೆ ಇಂಡೋನೇಸಿಯಾದ ಸಾಂಸ್ಕೃತಿಕ ಸಮಸ್ಯೆಗಳು ಪರಿಚಯ ಬಹಳ ಚೆನ್ನಾಗಿತ್ತು. ಇನ್ನೊಬ್ಬ ಅಹಮದ್. ಅವನು ಕಾರ್ಮಿಕ ನೇತಾರ, ಯಾಸ್‌ರೀನ್–ಕವಿ, ಮತ್ತು ಸುರಹಲೀಸ್, ಅವನೊಬ್ಬ ಸರ್ಕಾರಿ ಕರ್ಮಚಾರಿ. ಅವನಿಗೆ ಯಾವಾಗಲೂ ತನ್ನ ಆಫೀಸಿನ ರಾಜಕೀಯದ ಚಿಂತೆ ಇರುತ್ತಿತ್ತು.

'ನಾವು ಇಲ್ಲಿ ಸೇರಿಕೊಂಡು ನಮ್ಮ ರಾಷ್ಟ್ರದ ಸಮಸ್ಯೆಗಳನ್ನು ಕುರಿತು ಚರ್ಚೆ ನಡೆಸುತ್ತಾ ಇರುವುದನ್ನು ನೋಡಿದರೆ, ನಾವು ನಮ್ಮ ಸಾಮಾಜಿಕ ಜವಾಬ್ದಾರಿಗಳನ್ನು ಎಷ್ಟು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇವೆ ಎಂದು ತಿಳಿಯುತ್ತದೆ.

ನಾವೆಲ್ಲರೂ ಇಂಡೋನೇಸಿಯಾದ ಜಾಗೃತ ಪ್ರಜೆಗಳು ಎಂದು ಅರ್ಥವಾಗುತ್ತದೆ' ಎಂದು ಪುಂತೊ ಹೇಳಿದ.

ಪುಂತೋ ಮಾತುಗಳನ್ನು ಕೇಳಿ ಸೂರ್ಯೋನೋಗೆ ನಗು ಬರುತ್ತಿತ್ತು. ನಿಜವಾಗಿಯೂ ತಾವೆಲ್ಲರೂ ಸಾಮಾಜಿಕ ಜವಾಬ್ದಾರಿಯನ್ನು ಅರ್ಥ ಮಾಡಿಕೊಂಡಿದ್ದೇವೆಯೇ ಎಂದು ಅವನಿಗನಿಸುತ್ತಿತ್ತು. ಅವನಿಗೆ ಈಗ ಕಣ್ಣುಮುಂದೆ ಈಶ್ ಈಸಾಕ್‌ನ ಆಕರ್ಷಿತವಾದ ಅಂಗಭಾಗಗಳು ಮಾತ್ರ ಕಾಣಿಸುತ್ತಿದ್ದವು. ನೆನ್ನೆ ರಾತ್ರಿ ಅವಳ ಜೊತೆ ಅನುಭವಿಸಿದ ಸುಖವನ್ನು ಕಣ್ಣ ಮುಂದೆ ಕಾಣುತ್ತಿದ್ದ. ಅವನಿಗೆ ಆಗ ಘಾತಿಮಾಳ ನೆನಪು ಬರುತ್ತಿತ್ತು.

ಸೂರ್ಯೋನೋ ತನ್ನ ಕಡೆಯೇ ನೋಡುತ್ತಿದ್ದುದನ್ನು ಗಮನಿಸಿ ಈಶ್ ಇಸಾಕ್ ಅವನಿಗೆ ಕಣ್ಣಿಂದಲೇ ಗದರಿಸಿದಳು. ಈಗ ಯಾಸರೀನ್ ಮಾತನಾಡುತ್ತಿದ್ದ; ಶಿಕ್ಷಣ ಸಚಿವಾಲಯ ನನ್ನನ್ನು ಪೀಕಿಂಗ್‌ಗೆ ಕಳುಹಿಸಬೇಕೆಂದಿದೆ. ಇಂಡೋನೇಸಿಯಾದಲ್ಲೂ ಇಂದು ಸಾಂಸ್ಕೃತಿಕವಾದ ಸಮಸ್ಯೆ ಮುಖ್ಯವಾಗಿದೆ. ಒಂದು ರಾಷ್ಟ್ರೀಯ ಸಂಸ್ಕೃತಿಯ ಅಗತ್ಯ ಇಂದು ಇಂಡೋನೇಸಿಯಾಗಿದೆ. ಆದರಿಂದ ಪೀಕಿಂಗ್‌ಗೆ ಹೋಗಿ ಅಲ್ಲಿ ಜನರು ಸಾಂಸ್ಕೃತಿಕವಾಗಿ ಎಷ್ಟರಮಟ್ಟಿಗೆ ಜಾಗೃತಿ ಹೊಂದಿದ್ದಾರೆ ಎಂಬುದನ್ನು ನಾನು ನೋಡಿಕೊಂಡು ಬರುತ್ತೇನೆ ಎಂದು ಮಂತ್ರಿಗಳಿಗೆ ಸ್ಪಷ್ಟವಾಗಿ ಹೇಳಿದೆ; ಎಂದು ಅವನು ಹೇಳುತ್ತಿದ್ದ.

'ರಾಷ್ಟ್ರೀಯ ಸಂಸ್ಕೃತಿಯೇ!' ಓಹೋ, ದಯವಿಟ್ಟು ಈ ಸಮಸ್ಯೆಯನ್ನು ಹಿಡಿದುಕೊಂಡು ನಿಮ್ಮ ತಲೆಯನ್ನು ಕೆಡಿಸಿಕೊಳ್ಳಬೇಡಿ ಸ್ವಾಮೀ, ಜನ ರಾಷ್ಟ್ರೀಯ ಸಂಸ್ಕೃತಿಯನ್ನು ತಾವೇ ಬೆಳೆಸುತ್ತಾರೆ. ಅದನ್ನು ಯಾರೂ ಜನರ ಮೇಲೆ ಹೊರಿಸುವುದಕ್ಕೆ ಸಾಧ್ಯವಿಲ್ಲ, ಇವತ್ತು ಇಂಡೋನೇಸಿಯಾಗೆ ರಾಷ್ಟ್ರೀಯ ಸಂಸ್ಕೃತಿ ಅಲ್ಲ, ರಾಷ್ಟ್ರೀಯ ಏಕತೆ ಬೇಕಾಗಿದೆ' ಎಂದು ಸುರಹಲೀನ್ ಹೇಳಿದ

'ನಾನಿದನ್ನು ವಿರೋಧಿಸುತ್ತೇನಪ್ಪ. ಸುರಹಲೀನ್ ಮಾತು ಕೇಳಕ್ಕೆ ತುಂಬಾ ಚೆನ್ನಾಗಿದೆಯಾದರೂ ಚರಿತ್ರೆ ಅದನ್ನು ಸಮರ್ಥಿಸುವುದಿಲ್ಲ. ಇಂದು ನಮಗೆ ಇಂಡೊನೇಸಿಯಾದಲ್ಲಿ ರಾಷ್ಟ್ರೀಯ ಭಾವನೆಗಳನ್ನು, ಚೈತನ್ಯವನ್ನು ಎಚ್ಚರಗೊಳಿಸಬೇಕು. ಅದಾಯಿತು ಅಂದರೆ ರಾಷ್ಟ್ರೀಯ ಏಕತೆ, ಅದರಿಂದ ರಾಷ್ಟ್ರೀಯ ಸಂಸ್ಕೃತಿ ತಾನೇತಾನಾಗಿ ರೂಪಿತವಾಗುತ್ತದೆ.'

ನಿಮ್ಮಿಬ್ಬರ ಯೋಚನೆಯೂ ಸರಿಯಾಗಿಲ್ಲ. ಈಗ ನಾವು ಚೈನಾದಿಂದ ಕಲಿಯಬೇಕಾಗಿರುವುದು ಬೇಕಾದಷ್ಟಿದೆ. ಯಾವ ಕಾಲದಿಂದ ನಾವು ಗುಲಾಮಗಿರಿ ಜೀವನ ನಡೆಸಿದ್ದೇವೆ. ಅದರಿಂದ ಸ್ವತಂತ್ರವಾಗಿ ಯೋಚಿಸುವ ಶಕ್ತಿ ನಮ್ಮಲ್ಲಿ ಇನ್ನೂ ಬೆಳೆದಿಲ್ಲ. ಸ್ವತಂತ್ರವಾಗಿ ಚಿಂತನೆ ನಡೆಸುವವರೆಗೂ ನಾವು ಏನು ಮಾಡಬೇಕು ಅಂದರೆ ನಮ್ಮಂತೆಯೇ ಹಿಂದುಳಿದಿರುವ ರಾಷ್ಟ್ರಗಳ ರಾಷ್ಟ್ರಚೈತನ್ಯ, ರಾಷ್ಟ್ರೀಯ

ಏಕತೆ, ರಾಷ್ಟ್ರೀಯ ಸಂಸ್ಕೃತಿಯ ಸಮಸ್ಯೆಗಳನ್ನ ಹೇಗೆ ಪರಿಪರಿಸಿಕೊಂಡಿದ್ದಾರೆ ಅನ್ನು ವುದನ್ನು ಕಂಡುಕೊಂಡು ಅದನ್ನ ನಾವು ಅನುಕರಿಸಬೇಕಾಗುತ್ತದೆ' ಎಂದು ಯಾಸರೀನ್ ಬಹಳ ಗಂಭೀರವಾಗಿ ಮಾತನಾಡಿದ.

'ನಾವು ಚೈನಾದ ಗುರಿಯನ್ನೂ ನಮ್ಮ ಗುರಿ ಅಂತ ಹೇಗೆ ಮಾಡಿಕೊಳ್ಳಲು ಸಾಧ್ಯ ? ಚೈನಾದಲ್ಲಿ ಕಮ್ಯುನಿಸಂ ಇದೆ, ನಮ್ಮ ದೇಶದಲ್ಲಿ ಪ್ರಜಾತಂತ್ರ ಇದೆ, ಇವೆರಡರ ಮಧ್ಯೆ ಮೂಲಭೂತವಾದ ವ್ಯತ್ಯಾಸಗಳಿವೆ. ಇವೆರಡರ ಗುರಿ ಒಂದು ಹೇಗೆ ಆಗುತ್ತೋ, ನನಗಂತೂ ತಿಳಿಯುವುದಿಲ್ಲ.'

'ಪ್ರಜಾತಂತ್ರದಿಂದ ಇಂಡೊನೇಸಿಯಾಗೆ ಏನು ಪ್ರಯೋಜನವಾಗಿದೆಯಪ್ಪಾ', ಅಹಮದ್ ಕೇಳಿದ. 'ಪ್ರಜಾಂತ್ರ ಅಂತ ಹೇಳಿಕೊಂಡು ಬುರ್ಜುವಾಗಳು ಕೆಳಗಿನವ ರನ್ನ ತುಳಿಯುತ್ತಿದ್ದಾರೆ, ನಮ್ಮ ಪಾರ್ಲಿಮೆಂಟ್‌ನಲ್ಲಿ ಪ್ರಜಾತಂತ್ರ ಇದೆಯಾ ? ಶ್ರೀಸಾಮಾನ್ಯನಿಗೆ ನಮ್ಮಲ್ಲಿ ಪ್ರಜಾತಂತ್ರ ಅಂದರೆ ಯಾವ ಮ್ಯಾಜಿಕ್ ಅಂತ ಏನಾದರೂ ಗೊತ್ತಿದೆಯಾ ? ಪ್ರಜಾತಂತ್ರ ಅಂತ ಎಲ್ಲಾ ಮಾತನಾಡುವುದು ಬರಿ ಬೊಗಳೆ !'

'ನಮ್ಮ ವೈಯಕ್ತಿಕ ಸ್ವಾತಂತ್ರ್ಯವನ್ನ ನಾವು ಕಾದುಕೊಳ್ಳಬೇಕು ಅನ್ನುವು ದಾದರೆ ಪ್ಲೇಗ್‌ನ ಕಂಡರೆ ಓಡಿಹೋಗುವ ಹಾಗೆ ಕಮ್ಯುನಿಸಂನಿಂದ ದೂರವಿರಬೇಕು. ಪ್ರಜಾತಂತ್ರದಲ್ಲಿ ಒಂದು ಲಕ್ಷ ಕುಂದು-ಕೊರತೆಗಳಿರಬಹುದಾದರೂ ಅಲ್ಲಿ ವ್ಯಕ್ತಿ ಸ್ವಾತಂತ್ರ್ಯವನ್ನು ಯಾರೂ ಕೊಂದುಹಾಕುವುದಿಲ್ಲ. ಇಂಡೊನೇಸಿಯಾದಲ್ಲಿ ಜನ ಪ್ರಜಾತಂತ್ರವನ್ನು ಆಲಂಗಿಸುವುದಕ್ಕೆ ಪೂರ್ತಿಯಾಗಿ ಇನ್ನೂ ತಯಾರಾಗಿಲ್ಲ ಅಂತ ನಾನೂ ಒಪ್ಪುತ್ತೀನಿ, ಆದರೂ ಏನೀಗ, ನಿಧಾನವಾಗಿ ಅದಕ್ಕೆ ಹೊಂದಿಕೊಳ್ಳುತ್ತಾರೆ' ಎಂದು ಈಶ್ ಇಸಾಕ್ ಹೇಳಿದಳು.

'ಕಮ್ಯುನಿಸಂ ಅಂದರೆ ಪ್ಲೇಗ್ ಅಂತ ಎಲ್ಲಾ ಬಾಯಿಗೆ ಬಂದಹಾಗೆ ಮಾತನಾಡು ವುದಕ್ಕೆ ಮುಂಚೆ ಅದನ್ನ ಅರ್ಥ ಮಾಡಿಕೊಳ್ಳಬೇಕು. ಮನುಷ್ಯ ಉತ್ಪಾದಿಸುವ ಕ್ರಮವಿದೆಯಲ್ಲಾ ಅದು ಅವನ ಸಾಮಾಜಿಕ, ರಾಜಕೀಯ ಹಾಗೂ ಬೌದ್ಧಿಕ ಜೀವನ ರೀತಿಯನ್ನ ರೂಪಿಸುತ್ತದೆ ಅಂತ ಮಾರ್ಕ್ಸ್–ಏಂಗೆಲ್ಸ್ ಹೇಳುತ್ತಾರೆ. ನಮ್ಮ ದೇಶದಲ್ಲಿ ಉತ್ಪಾದನಾಕ್ರಮ ಸಾಮ್ರಾಜ್ಯವಾದ ಮತ್ತು ಬಂಡವಾಳಶಾಹಿಯ ಹಿನ್ನೆಲೆ ಯಲ್ಲಿ ಭದ್ರವಾಗಿ ರೂಪಿತವಾಗಿದೆ, ಅದು ನಮ್ಮ ದೌರ್ಭಾಗ್ಯ, ಅಷ್ಟೆ. ಈ ಕ್ರಮ ವನ್ನು ನಾವು ಬುಡಸಹಿತ ಕಿತ್ತುಹಾಕುವವರೆವಿಗೂ ಒಂದಿಲ್ಲ ಒಂದು ಸಮಸ್ಯೆ ನಮ್ಮನ್ನು ಕಾಡುತ್ತಲೇ ಇರುತ್ತದೆ. ಸಾಂಸ್ಕೃತಿಕ ಸಮಸ್ಯೆ ಅಂತ ಮಾತನಾಡುತ್ತಾ ಇದ್ದರೆ ವಾಸ್ತವವಾದ ಸಮಸ್ಯೆಯನ್ನು ನಾವು ಮರೆತುಬಿಟ್ಟಹಾಗೆ ಆಗುತ್ತದೆ' ಎಂದು ಯಾಸರೀನ್ ಹೇಳಿದ. ಅಹಮದ್ ಅವನನ್ನು ಸಮರ್ಥಿಸಿದ.

'ನೀವು ಏನು ಹೇಳುತ್ತಾ ಇರುವುದು ? ಅಂದರೆ ಇಂಡೊನೇಸಿಯಾದಲ್ಲಿ ಕಮ್ಯುನಿಸಂ ಬರಬೇಕೇನು ? ಇಂಡೊನೇಸಿಯಾ ಪಂಚಶೀಲದ ಸಿದ್ಧಾಂತವನ್ನಿಟ್ಟು

ಕೊಂಡಿದೆ ಅನ್ನುವುದನ್ನ ನೀವು ಮರೆಯಬಾರದು' ಎಂದು ಈಸ್ ಇಸಾಕ್ ಹೇಳಿದಳು.

'ಪಂಚಶೀಲವೇ ! ಓಹ್, ಪಂಚಶೀಲ ನಿಜವಾಗಿಯೂ ಘನವಾದ ಸಿದ್ಧಾಂತ ಅನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಆದರ ತತ್ವ-ಕಾಣ್ಕೆ ಏನು ಅಂತ ಇನ್ನೂ ನಿರ್ಧರಿಸುವುದಕ್ಕೇ ಆಗಿಲ್ಲ. ಪಂಚಶೀಲವನ್ನಿಟ್ಟುಕೊಂಡೇ ನೀವು ಕಮ್ಯುನಿಸ್ಟ್ ರಾಷ್ಟ್ರವನ್ನು ಕಟ್ಟಬಹುದಲ್ಲ! ಅದೇ ರೀತಿ ಬಂಡವಾಳವಾದಿ, ಇಸ್ಲಾಮಿಕ್, ಸಾಮ್ರಾಜ್ಯವಾದಿ, ಯಾವ ರಾಜ್ಯ ಬೇಕಾದರೂ ಕಟ್ಟಬಹುದು. ಅಂತಹ ಸಿದ್ಧಾಂತವನ್ನಿಟ್ಟುಕೊಂಡು ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದಕ್ಕೆ ಸಾಧ್ಯವಿಲ್ಲ. ರಾಜಕೀಯ ವಿಕಾಸ, ಸಾಹಿತ್ಯ-ಧರ್ಮ ಯಾವುದೇ ಬೆಳವಣಿಗೆಯೂ ಆರ್ಥಿಕ ವಿಕಾಸಕ್ಕೆ ಅವಲಂಬಿಸಿರುತ್ತದೆ ಅಂತ ಏಂಗೆಲ್ಸ್ ಹೇಳುತ್ತಾನೆ.'

'ನೀವು ಕಮ್ಯುನಿಸ್ಟರೇನು ಅಹ್ಮದ್ ?' ಮುರಹಲೀಮ್ ಕೇಳಿದ.

'ನಾನು ಕಮ್ಯುನಿಸ್ಟ್ ಅಲ್ಲ. ಆದರೆ ಇಂದು ಇಂಡೋನೇಸಿಯಾದಲ್ಲಿ ಹರಡಿಕೊಂಡಿರುವ ಭ್ರಷ್ಟಾಚಾರ, ಅವ್ಯವಸ್ಥೆ ಅರಾಜಕತೆಯನ್ನು ಕಮ್ಯುನಿಸಂನಿಂದ ನಾಶ ಮಾಡಲು ಸಾಧ್ಯವಾಗುವುದಾದರೆ ನಾನು ಕಮ್ಯುನಿಸ್ಟ್ ಆಗುತ್ತೇನೆ.'

'ನನಗೆ ವಿಶೇಷವಾಗಿ ಇಸ್ಲಾಂ ಧರ್ಮದ ಪರಿಚಯವಿಲ್ಲ. ಆದರೂ ಆಧುನಿಕವಾಗಿ ಚಲನಶೀಲವಾಗಿರುವ ಇಸ್ಲಾಂ ನಮ್ಮ ಸಮಸ್ಯೆಗಳಿಗೆ ಸವಾಲು ಒಡ್ಡಬಹುದು ಅಂತ ನನ್ನ ಅನಿಸಿಕೆ, ನೀವೂ ಈ ದಿಕ್ಕಿನಲ್ಲಿ ಯೋಚಿಸಿ ನೋಡಿ.'

'ಇಸ್ಲಾಂ, ಓಹ್ !' ಎಂದು ಮತ್ತೊಮ್ಮೆ ಅಹ್ಮದ್ ಪರಿಹಾಸದಿಂದ ಕೂಡಿದ ನಗುನಕ್ಕ. 'ಇಸ್ಲಾಂ ಅಂದ ತಕ್ಷಣ ನನಗೆ ಒಂದು ಘಟನೆ ನೆನಪಾಯಿತು. ನಾನು ಒಬ್ಬ ಮುಸಲ್ಮಾನನ ಜೊತೆ ಮಾತನಾಡುತ್ತಿದ್ದೆ, ಅವನಿಗಾದರೊ ಎಲ್ಲಾ ಮುಸ್ಲಿಂ ವಿಶ್ವವಿದ್ಯಾನಿಲಯಗಳ ತೀವ್ರ ಪರಿಚಯವೂ ಇತ್ತು. ಅವನು ಇವೆಲ್ಲವನ್ನೂ ಕುರಿತು ಗಾಢವಾಗಿ ಅಧ್ಯಯನ ಮಾಡಿದ್ದ. ಅವನು ಹೇಳಿದ್ದೇನೆಂದರೆ ಮುಸ್ಲಿಂ ರಾಷ್ಟ್ರಗಳಲ್ಲಿ ಕೂಡ ಬಂಡವಾಳಶಾಹಿ ರಾಷ್ಟ್ರಗಳ ರೀತಿಯಲ್ಲೇ ಬಡವರ ಶೋಷಣೆ ನಡೆಯುತ್ತದೆ. ಮುಸ್ಲಿಂ ರಾಷ್ಟ್ರಗಳಿಗೆ ಇಸ್ಲಾಂ ಧರ್ಮದಿಂದ ಯಾವ ಲಾಭವೂ ದೊರೆತಿಲ್ಲ. ಧನಿಕ-ಬಡವರ ನಡುವಿನ ಅಂತರವನ್ನು ಬೆಳೆಸುವುದಕ್ಕೇ ಇದು ಹೆಚ್ಚು ಸಹಾಯಕವಾಗಿದೆ.

ಇಸ್ಲಾಂ ಧರ್ಮದಿಂದ ಮುಸ್ಲಿಂ ರಾಷ್ಟ್ರಗಳಿಗೆ ಲಾಭವಾಗಿಲ್ಲದಿದ್ದರೆ ಅದಕ್ಕೆ ಇಸ್ಲಾಂ ಧರ್ಮದ್ದೇನೂ ತಪ್ಪಿಲ್ಲ. ಇಸ್ಲಾಂ ಧರ್ಮದ ಸಿದ್ಧಾಂತಗಳನ್ನು ಕಡೆಗಣಿಸಿರುವವರದು ತಪ್ಪು ಅಷ್ಟೆ' ಎಂದು ಈಸ್ ಇಷಾಕ್ ಹೇಳಿದಳು.

'ಇವೆಲ್ಲ ಪ್ರಯೋಜನಕ್ಕೆ ಬಾರದ ನಂಬಿಕೆಗಳು, ಪ್ರಪಂಚದ ಯಾವ ಮೂಲೆಯಲ್ಲೇ ಪರೀಕ್ಷಿಸಿ ನೋಡಿದರೂ ಧರ್ಮದಿಂದ ಯಾವುದೇ ಸಮಾಜ ಉದ್ಧಾರವಾಗಿದೆ ಎಂದು ಹೇಳಲು ಉದಾಹರಣೆಗಳು ಕೂಡ ಸಿಗುವುದಿಲ್ಲ. ಬೌದ್ಧ, ಕ್ರಿಶ್ಚಿಯನ್, ಇಸ್ಲಾಂ ಯಾವ ಧರ್ಮವನ್ನೇ ಉದಾಹರಣೆಗಾಗಿ ತೆಗೆದುಕೊಂಡರೂ ಸಮಾಜದಲ್ಲಿ

ಸುಖ–ಶಾಂತಿಗಳನ್ನು ನೆಲೆಗೊಳಿಸುವಲ್ಲಿ ಧರ್ಮ ವಿಫಲವಾಗಿರುವುದು ಕಂಡುಬರುತ್ತದೆ. ಇನ್ನು ಧನಿಕರು ಮತ್ತು ಪ್ರಭಾವಶಾಲಿಗಳಾದ ವ್ಯಕ್ತಿಗಳು ಧರ್ಮವನ್ನು ಆಸರೆಯಾಗಿಟ್ಟುಕೊಂಡು ಬಡವರು, ಹಾಗೂ ನಿರಾಶ್ರಿತರನ್ನು ತುಳಿತಕ್ಕೆ ಒಳಪಡಿಸಿದ್ದಾರೆ.'

ಇಷ್ಟು ಹೊತ್ತಿಗೆ ಈಗ ಮೊದಲ ಬಾರಿ ಸೂರ್ಯೋನೋ ಚರ್ಚೆಯ ನಡುವೆ ತಲೆಹಾಕಿದ, 'ಕಮ್ಯುನಿಸಂ ಅನ್ನು ನಾನು ತಿರಸ್ಕರಿಸುವುದಿಲ್ಲ. ತಿರಸ್ಕರಿಸುವ ಅಗತ್ಯವೇನಿದೆ? ಚೈನಾ–ರಷ್ಯಾದಲ್ಲಿ ಜನರನ್ನು ಬಡತನ ಹಾಗೂ ಗುಲಾಮಗಿರಿಯಿಂದ ಕಮ್ಯುನಿಸಂ ಬಿಡುಗಡೆ ಮಾಡಿಸಿದೆ. ಇಂಡೋನೇಸಿಯಾದಲ್ಲೂ ಕಮ್ಯುನಿಸಂ ಈ ಚಮತ್ಕಾರವನ್ನು ಮಾಡಿತೋರಿಸಲು ಸಾಧ್ಯವಿದೆ.'

'ಸೂರ್ಯೋನೋ, ನೀನು ತೆಪ್ಪಗಿರು, ಮಾತನಾಡಬೇಕು ಎಂದು ನೀನು ಈ ಮಾತು ಹೇಳುತ್ತಿರುವೆಯೋ ಹೊರತು ಈ ಬಗ್ಗೆ ನಿನಗೆ ಶ್ರದ್ಧೆ ಖಂಡಿತಾ ಇಲ್ಲ' ಎಂದು ಈಸ್ ಇಶಾಕ್ ಕಿರುಚಿದಳು.

'ಹೌದು, ನಾನು ಮಾತನಾಡಬೇಕೆಂದು ಈ ಮಾತು ಆಡುತ್ತಿರುವುದು ನಿಜ. ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಈ ಯುಗವೇ ಶ್ರದ್ಧಾರಹಿತವಾದ ಯುಗ. ಅದಕ್ಕೆ ನಾನು ಏನು ಮಾಡಲಿ?'

'ನೀನು ಗೇಲಿ ಮಾಡುತ್ತಿದ್ದೀಯಾ ಸೂರ್ಯೋನೋ!' ಈಸ್ ಈಶಾರ್ ಹೇಳಿದಳು.

'ಅವನು ಗೇಲಿ ಮಾಡುತ್ತಿಲ್ಲ. ಇದು ಶ್ರದ್ಧೆ ಇಲ್ಲದ ಯುಗ ಅನ್ನುವುದು ಸತ್ಯವಾದ ಮಾತು. ಆದರೆ ಈ ಅಶ್ರದ್ಧೆಗೆ ಕಾರಣ...' ಎಂದು ಅಹ್ಮದ್ ಹೇಳುತ್ತಿರುವಾಗಲೇ ಸುರಹಲೀನ್ ಮಧ್ಯೆ ಬಾಯಿಬಾಕಿ '...ಬಂಡವಾಳವಾದ, ಅದರಿಂದ ನಾವೆಲ್ಲರೂ ಕಮ್ಯುನಿಷ್ಟರಾಗಬೇಕು' ಎಂದ.

'ಇಲ್ಲ, ಈ ಬೇಜಬ್ದಾರಿತನಕ್ಕೆ ಮನುಷ್ಯನೇ ಕಾರಣ. ಅದಕ್ಕೆ ನಾವು ಸಾಂಸ್ಕೃತಿಕ, ನೈತಿಕ, ಧಾರ್ಮಿಕ ಸಮಸ್ಯೆಗಳೆಂದು ಇಲ್ಲದ ಹೆಸರುಗಳನ್ನು ಜೋಡಿಸುತ್ತೇವೆ. ನಿಜ ಹೇಳಬೇಕೆಂದರೆ ಈ ಸಮಸ್ಯೆಗಳನ್ನು ಮನುಷ್ಯ ತಾನೇ ನಿರ್ಮಿಸಿಕೊಂಡಿದ್ದಾನೆ. ಅವನು ಇದನ್ನು ಪೂರ್ತಿ ಅರ್ಥಮಾಡಿಕೊಂಡಾಗ ಮಾತ್ರ ಈ ಸಮಸ್ಯೆಗಳು ದೂರವಾಗಬಲ್ಲವು' ಎಂದು ಹೇಳಿ ಸೂರ್ಯೋನೊ ಎದ್ದುನಿಂತ.

ಹೊರಗೆ ಬಂದು, ಈಸ್ ಇಶಾಕ್‌ಳಿಗೆ 'ನಿನ್ನನ್ನು ಮನೆಗೆ ಬಿಟ್ಟು ಬರುತ್ತೇನೆ, ನಿನ್ನ ಸೈಕಲ್ ಇಲ್ಲೇ ಬಿಟ್ಟಿರು. ನನ್ನ ಡಾಜ್ ಕಾರಿನಲ್ಲಿ ಕುಳಿತುಕೋ' ಎಂದು ಹೇಳಿದ.

ಒಂದು ನಿಮಿಷ ಯೋಚನೆ ಮಾಡಿ ನಂತರ ಈಸ್ ಇಶಾಕ್ 'ನಡಿ, ಹೋಗೋಣ' ಎಂದಳು.

ಸೂರ್ಯೋನೋ ತಂದೆಯದು ಈ ಕಾರು. ಆದರಿಂದ ಈಸ್ ಹೇಳಿದಳು,

'ನಾನು ಇಂತಹ ಮೋಟಾರು ಕಾರಿನಲ್ಲಿ ಕುಳಿತಿರುವುದನ್ನು ನೋಡಿ ಜನ ಯಾರಾದರೂ ಒಬ್ಬ ಸ್ಮಗಲರೊ, Block marketer ಜೊತೆಯಲ್ಲೋ ಅಲೆಯುತ್ತಿರುವೆನೆಂದು ತಿಳಿದುಕೊಂಡರೆ ಕಷ್ಟಕ್ಕೆ ಬಂದೀತು' ಎಂದಳು.

'ನನ್ನ ತಂದೆ ಪ್ರಾಮಾಣಿಕತನದಿಂದ ಸಂಪಾದಿಸಿಕೊಂಡಿರುವ ಕಾರು ಇದು. ವ್ಯಾಪಾರದಿಂದ ಗಳಿಸಿರುವ ಆಸ್ತಿ ಇದು. ನೀನೇನೂ ಸಂಕೋಚಪಡಬೇಕಾದ ಅಗತ್ಯವಿಲ್ಲ.'

ಸೂರ್ಯೋನೋ ಕೆನ್ನೆಗಳನ್ನು ಪ್ರೀತಿಯಿಂದ ತಟ್ಟಿ ಹೇಳಿದಳು, 'ನೀನು ಚರ್ಚೆಯನ್ನು ಬಹಳ ಸುಂದರವಾಗಿ ಕೊನೆಗೂಡಿಸಿದೆ' ಎಂದಳು. ಸೂರ್ಯೋನೋಗೆ ಅತಿ ಸಮೀಪವಾಗಿ ಕುಳಿತು ಅವಳಿಗೆ ಒಂದು ವಿಚಿತ್ರವಾದ ಥ್ರಿಲ್ ಸಿಗಲಾರಂಭಿಸಿತು. ಸೂರ್ಯೋನೋಗೂ ಅದೇ ಅನುಭೂತಿ ಸಿಗುತ್ತಿತ್ತು. ಈಸ್‌ಳನ್ನು ಚುಂಬಿಸಬೇಕೆನಿಸುತ್ತಿದ್ದರೂ ಸಂಯಮದಿಂದ ಅವನು 'ಮನುಷ್ಯ ತನ್ನ ಎಲ್ಲ ಕ್ರಿಯೆಗಳಿಗೂ ತಾನೇ ಜವಾಬ್ದಾರ ಎಂದು ನಾನು ನಂಬುತ್ತೇನೆ' ಎಂದು ನುಡಿದ.

---

* ಕಾದಂಬರಿಯ ಒಂದು ಭಾಗ.

# ದಂಗೆಕೋರರು

ಮೂಲ : ಯುವಾಲ್ ಚ್ಯಾಂಗ್ ನಿಯಾನ್
ಅನು : ಬಿ, ವೈ. ಲಲಿತಾಂಬಾ

ನನ್ನ ದೇಶದಲ್ಲಿ ರಕ್ತದ ಕೋಡಿ ಕರೆದ ಪ್ರತಿಯೊಬ್ಬರಿಗೂ, ಪೂರ್ವ–ಪಶ್ಚಿಮ ರಾಷ್ಟ್ರಗಳು, ಮಿಕ್ಕೆಲ್ಲರಿಗೂ, ನನ್ನ ದೇಶವನ್ನು ಹೋಳು–ಹೋಳಾಗಿಸಿದವರೆಲ್ಲರಿಗೂ ಧಿಕ್ಕಾರ !

ಅವರು ಬಾಗಿಲು ಬಡಿದರು, ಗೋಡೆಗಳ ಮೇಲೆ ಹಾರೆಗಳಲ್ಲಿ ತುತ್ತಿದರು ಮತ್ತು 'ಹೊರಕ್ಕೆ ಬಾ, ಹೊರಕ್ಕೆ ಬಾ' ಎಂದು ಅರಚಿದರು, 'ಪ್ರತಿಯೊಬ್ಬನೂ ಹೊರಕ್ಕೆ ಬಂದು ಕ್ರೀಡಾಂಗಣದಲ್ಲಿ ಭಾಗವಹಿಸು' ಎಂದರು.

ಭಯದಿಂದ ನಡುಗುತ್ತಾ ನಾವೆಲ್ಲ ಎದ್ದು ನಿಂತೆವು. ಕಂಪಿಸುವ ಚಳಿಯಲ್ಲಿ ಬೆಳಗಲ್ಲಿ ನಾವು ಕಂಬಳಿಗಳನ್ನು ಕಿತ್ತೆಸೆದೆವು, ನಮ್ಮಪ್ಪ, ನಮ್ಮಮ್ಮ, ನನ್ನ ತಂಗಿ–ತಮ್ಮ ಎಲ್ಲರೂ ಹೊರಕ್ಕೆ ! ಹೊರಕ್ಕೆ ಹೊರಟೆವು. ಚೀರಾಟ, ಅರಚಾಟ ಮುಂದ್ರು ವರೆಯಿತು, 'ಹೊರಕ್ಕೆ ಬನ್ನಿ, ಕ್ರೀಡಾಂಗಣದಲ್ಲಿ ಭಾಗಿಗಳಾಗಿ' ಸಾಗುತ್ತಲೇ ಇತ್ತು.

ನಮ್ಮಮ್ಮ ನನ್ನ ತಂದೆಯೊಡನೆ ಹೇಳಿದಳು. 'ಓಕ್‌ಸನ್‌ನ ಏನು ಮಾಡೋಣ, ಅವರಿಗೆ ಅವಳಿರುವುದು ಗೊತ್ತಿಲ್ಲ, ಅವಳನ್ನು ಎಲ್ಲಾದರೂ ಬಚ್ಚಿಡಬೇಕು.'

'ಬೇಡ, ಬೇಡ, ಅವರು ಅವಳನ್ನು ಖಂಡಿತ ಹುಡುಕಿ ತೆಗೆಯುತ್ತಾರೆ' ನಮ್ಮ ತಂದೆ ಹೇಳಿದರು.

'ಆದೇಕೆ ? ನಾವು ಅವಳನ್ನು ಹಿಂಭಾಗದಲ್ಲಿ ಬಚ್ಚಿಡೋಣ, ಆಗ ಅವಳನ್ನು ಯಾರೂ ಹುಡುಕಲಾರರು'.

'ಅವರು ಹುಡುಕಿ ಬಿಡುತ್ತಾರೆ, ಹುಡುಕುತ್ತಾರೆ, ಯಾವ ಮುನ್ಸೂಚನೆಯನ್ನೂ ಕೊಡದೆಯೇ ಅವರು ಮನೆಗಳೊಳಕ್ಕೆ ನುಗ್ಗುತ್ತಾರೆ, ನೆನ್ನೆ ರಾತ್ರಿ ತಾನೆ ಅವರು ನಮ್ಮ ಕೋಟೆಯೊಳಕ್ಕೆ 12 ಸಾರಿ ದಾಳಿ ಮಾಡಿದ್ದಾರೆ. ಅರ್ಧರಾತ್ರಿಯ ವೇಳೆಯಲ್ಲಿ ಬಾಗಿಲುಗಳನ್ನು ಮುರಿದು ಹಾಕಿ ಬೂಡ್ಸಿನ ಕಾಲುಗಳಲ್ಲಿ ಮನೆಗಳೊಳಗೆ ನುಗ್ಗಿ ಮನೆಯವರನ್ನೆಲ್ಲ ಹೊರಕ್ಕೆ ಎಳೆದುಕೊಂಡು ಬಂದಿದ್ದಾರೆ.'

'ಬೂಡ್ಸ್ ಕಾಲಿನಲ್ಲಾ' ಎಂದು ಹೇಳಿ ನಮ್ಮಮ್ಮ ಒಂದು ನಿಮಿಷಕಾಲ ಸುಮ್ಮ

ನಾದಳು. ನಂಬಲಾಗದ ಈ ಪಿಶಾಚಕೃತ್ಯದ ಬಗ್ಗೆ ಕೇಳಿ ಅವಳು ದಿಜ್ಮೂಢಳಾದಳು. ಕಡುಬಡವರಾದ ಭಿಕ್ಷುಕರೂ ದರಿದ್ರ ರೈತ ಕೂಡ ಬೂಟು ಬಿಚ್ಚದೆ ಯಾರ ಮನೆಯ ಒಳಗೆ ನುಗ್ಗುವ ಸಾಹಸ ಮಾಡುವುದಿಲ್ಲ.

ಇಷ್ಟಾಗಿಯೂ ಅವಳು ತನ್ನ ಜಾಡಿನಲ್ಲೇ ಹಟ ಹಿಡಿದಳು, 'ಅವಳನ್ನು ಸುರಕ್ಷಿತ ವಾಗಿ ಮುಚ್ಚಿಡಬಹುದೆಂಬ ನಂಬಿಕೆ ನನಗಂತೂ ಇದೆ.'

"ಬೇಡ, ಬೇಡ, ಇದು ಭಯಂಕರವಾದ ಹೆಜ್ಜೆ ಆದೀತು. ಅವಳು ನನ್ನ ಜೊತೆಯಲ್ಲಿ ಹೊರಡುವುದೇ ಒಳ್ಳೆಯದು," ನಮ್ಮ ತಂದೆ ಹೇಳಿದರು.

'ಆದರೆ...' ಆದರೆಗೆ ಅಲ್ಲಿ ಸಮಯಾವಕಾಶ ಇರಲಿಲ್ಲ. 'ಹೊರಕ್ಕೆ...ಹೊರಗೆ ಹೊರಡು' ಎಂಬ ಶಬ್ದ ನಿರಂತರ ಕೇಳಿ ಬರುತ್ತಿತ್ತು. ಬಾಗಿಲುಗಳು ಮುರಿಯು ತ್ತಿದ್ದವು. ಅವರು ಇನ್ನೂ ಅಲ್ಲೇ ಇದ್ದರೂ ಪ್ರತಿಯೊಬ್ಬರನ್ನೂ ದೂಡಿಕೊಂಡು ಹೋಗುವ ಪಣ ತೊಟ್ಟು ನಿಂತಿದ್ದರು. ಯಾವ ಹೆಣ್ಣು–ಗಂಡು, ಮಗುವನ್ನೂ ಬಿಡುತ್ತಿರಲಿಲ್ಲ. ನಮ್ಮ ತಂದೆಯ ಜೊತೆ ನಾನೂ ಕ್ರೀಡಾಂಗಣಕ್ಕೆ ಹೊರಟೆ.

ಒಂದು ತಿಂಗಳ ಹಿಂದೆ ತಾನೆ ನಾನು ಮನೆಗೆ ಹಿಂದಿರುಗಿದ್ದೆ. ಈಗಾಗಲೇ ನಾನು ಒಂದು ವರ್ಷದ ವಿದ್ಯಾರ್ಥಿ ಜೀವನವನ್ನು ಕಳೆದಿದ್ದೆ. 'ಬೆಳವಣಿಗೆಯ ಹಂತ ದಲ್ಲಿದ್ದ ಮಾತೃಭೂಮಿಗಾಗಿ ನಾನು ಪಶ್ಚಿಮ ದೇಶಗಳ ಬೆಳಕನ್ನು ನನ್ನ ಜೊತೆಯಲ್ಲಿ ತಂದಿದ್ದೆ. ನಿಗದಿಯಾಗಿದ್ದ ದಿನಕ್ಕೂ ಒಂದು ದಿನ ಮುಂಚೆ ನಾನು 'ಸಿಯೋಲ್' ಜಹಜಿನಲ್ಲಿ ಬಂದು ಸೇರಿದ್ದೆ. ರಾತ್ರಿಯ ಕೊನೆಯ ಜಾವದಲ್ಲಿ ನಾನು ಮನೆ ತಲಪಿದ್ದೆ ಹೀಗಾಗಿ ನೆರೆಹೊರೆಯವರು ಯಾರಿಗೂ ನಾನು ಬಂದಿದ್ದು ತಿಳಿದಿರಲಿಲ್ಲ. ನನ್ನನ್ನು ನೋಡಿ ಮನೆಯವರೆಲ್ಲ ಬಹಳ ಸಂತೋಷಪಟ್ಟರು. ನನ್ನ ಅಪ್ಪ ಹೇಳಿದರು, 'ಇನ್ನು ಮಲಗಿಕೊಳ್ಳಿ, ಸಾಕು, ರಾತ್ರಿ ತುಂಬಾ ವೇಳೆಯಾಗಿದೆ, ಅವಳಿಗೂ ಬಹಳ ಆಯಾಸ ವಾಗಿದೆ.'

ಆಯಾಸವಾಗಿದ್ದುದು ಅಂತೂ ನಿಜ. ದೂರದ ಪ್ರಯಾಣ ಬೇರೆ. ಆ ಆಯಾಸ ದಿಂದ ನನಗೆ ರಾತ್ರಿಯ ವೇಳೆಗೆ ತುಂಬಾ ಜ್ವರ ಬಂದಿತು. ಮನೆ ತಲುಪುವುದೇ ಕಾಯುತ್ತಿತ್ತೇನೋ ಅನ್ನುವ ಹಾಗೆ ಜ್ವರ ಕಾಯುತ್ತಿತ್ತು. ವಾರಗಳಗಟ್ಟಲೆ ಹಾಸಿಗೆ ಹಿಡಿದೆ.

ಅನಾರೋಗ್ಯದಿಂದ ನಾನು ಹೀಗೆ ಪೀಡಿತಳಾಗಿರುವಾಗಲೇ ಉತ್ತರದ ಕಡೆ ಯಿಂದ ಸೈನ್ಯ ನಮ್ಮ ಮೇಲೆ ಆಕ್ರಮಣ ಮಾಡಿತು. ಒಂದೇ ರಾತ್ರಿಯಲ್ಲೇ ಯಾವುದೋ ವಿಚಿತ್ರ ಗುಂಪೊಂದು ನಮ್ಮ ಶಾಸಕನಾಗಿ ಕುಳಿತುಕೊಂಡಿತು, ಅವರೆಲ್ಲ ನಮ್ಮ ದೇಶವಾಸಿಗಳೇ ಆಗಿದ್ದರೂ ವಿದೇಶ ಶಿಕ್ಷಣದ ರಂಗು ಮೆತ್ತಿಕೊಂಡಿದ್ದರು. ಹೃದಯ, ಬುದ್ಧಿ ಎಲ್ಲ ಕಠೋರವಾಗಿ, ಭಾವಶೂನ್ಯರಾಗಿ ವರ್ತಿಸುತ್ತಿದ್ದರು.

ಗೋಳದ ಯಾವುದೋ ಅಂಚಿನಲ್ಲಿ ಅಮೆರಿಕಾ ರಾಷ್ಟ್ರಪತಿ, ರಷ್ಯಾ ಪ್ರಧಾನ ಮಂತ್ರಿ, ಅವರ ಸೈನಿಕರು, ರಾಜಕೀಯ ಸಲಹೆಗಾರರೆಲ್ಲ ತಲೆಗಳನ್ನು ಜೋಡಿಸಿ

ತ್ತಿದ್ದರು. ಅವರು ತಮ್ಮ ಮುಂದೆ ನೀಲಿ, ಹಳದಿ, ಬಿಳಿಯ ಆಕರ್ಷಕ ಗುರುತುಗ ನಕ್ಷೆಗಳನ್ನು ಹರಡಿಕೊಂಡು ಪ್ರಪಂಚದ ಭಾಗ್ಯವನ್ನು ಕುರಿತು ನಿರ್ಣಯಿಸುತ್ತಿದ್ದರು. ಯಾವುದೋ ದೇಶವನ್ನು ಟುಕಡಿಗಳಾಗಿ ಕತ್ತರಿಸಿ, ನಕ್ಷೆಯಲ್ಲಿ ಆ ಜಾಗದಲ್ಲಿ ಕೃತಕ ವಾದ ರೇಖೆಗಳನ್ನು ಎಳೆಯಲಾಯಿತು. ಇತ್ತಕಡೆ ನೋಡಿದರೆ ಭೌಗೋಲಿಕವಾಗಿ ಗೋಡೆಗಳನ್ನು ಕಟ್ಟಿದರು. ಇತಿಹಾಸದ ಪುಸ್ತಕಗಳಲ್ಲಿ, 'ಸೈನಿಕರ ಸಹಕಾರ ಪಡೆದು ದೇಶವನ್ನು ಇಬ್ಭಾಗವಾಗಿ ಮಾಡಲಾಗಿದೆ' ಎಂದು ಬರೆದುಬಿಟ್ಟರು. ಇದರ ಜೊತೆ ಯಲ್ಲಿ ನಮ್ಮ ಮನಸ್ಸು-ಬುದ್ಧಿ, ನಮ್ಮ ಜೀವನ ನಮ್ಮ ಪರಿವಾರಗಳು ಹರಿದು ಹಂಚಿ ಹೋದವು.

ನನ್ನ ಪ್ರೀತಿಯ ಮಾತೃಭೂಮಿಯೇ ! ನನ್ನ ಅನ್ನ-ಶರಾಬಿನ ಆನಂದ ಮೊದಲಿ ನಂತೆ ಪುನಃ ಇರಬಲ್ಲುದೇ ? ನನ್ನ ಕೊಳಲಿನ ಗಾನ, ಮೊದಲಿನದಾಗಬಲ್ಲುದೆ, ಗರಿ ಮೂಡಬಲ್ಲುದೆ ?

ನಾವು ಕ್ರೀಡಾಂಗಣ ತಲಪಿದೆವು. ಅನೇಕಾನೇಕ ಸಿಹಿ ನೆನಪುಗಳನ್ನು ಹೊತ್ತ ಈ ಮೈದಾನ ... ಈಗ ಜೀವನದ ಕಹಿ ನೆನಪುಗಳ ಆಗರ ಆಗಲಿತ್ತು. ಈ ಮೈದಾನದಲ್ಲಿ ನಮ್ಮ ಸ್ನೇಹಿತರೊಂದಿಗೆ ಜೊತೆಗೂಡಿ ನಗಾಡುತ್ತಾ, ಕುಣಿಯುತ್ತ ಆಟವಾಡು ತ್ತಿದ್ದೆವು. ಜಪಾನಿನ ರಾಜರು ನಮ್ಮಲ್ಲಿ ರಾಜ್ಯಭಾರ ನಡೆಸುತ್ತಿದ್ದ ಆ ಕಾಲದಲ್ಲಿ ಈ ಮೈದಾನ ನಿರ್ಮಾಣವಾಗಿತ್ತು. ವಿದೇಶೀಯರಾದ ನಮ್ಮ ಆ ಯಜಮಾನರು ನಮಗೆ ಕೊರಿಯಾದಲ್ಲಿ ಓದು-ಬರಹ ಮಾಡಲು, ಚಿಂತಿಸಲು ಪ್ರತಿಯೊಂದಕ್ಕೂ ಅವರು ನಮ್ಮ ಮೇಲೆ ಪರಭಾಷೆಯನ್ನು ಹೇರುತ್ತಿದ್ದರು. ಯಾವುದೇ ಸಾರ್ವಜನಿಕ ಸ್ಥಳದಲ್ಲಿ ನಮ್ಮ ಮಾತೃಭಾಷೆಯ ಒಂದೇ ಒಂದು ಶಬ್ದವನ್ನು ಉಚ್ಚರಿಸಿದಾಗಲೂ ಆ ನಮ್ಮ ಪ್ರಭುಗಳು ನಮ್ಮನ್ನು ಹೊಡೆಯುತ್ತಿದ್ದರು. ಈ ಮೈದಾನದಲ್ಲಿ ಅನೇಕ ತಾಯಿ-ತಂದೆಯರೊಡನೆ ಶಿಂತೋ ಮಂದಿರದ ಮುಂದೆ ತಲೆಬಾಗಿ ನಮಸ್ಕರಿಸಲೆಂದು ನಮ್ಮಪ್ಪನನ್ನು ಕರೆಸುತ್ತಿದ್ದರು. ಈಗ ಅದೇ ಮೈದಾನದಲ್ಲಿ ನಮ್ಮ ಪ್ರಭುಗಳು ನವಯುವಕರ ಹಾಗೆ ಬದಲಾಯಿಸಿಬಿಟ್ಟರು. ಅವರು ನಮ್ಮನ್ನು ಸಹೋದರರೆಂದು ಕರೆದರು. ಅವರು ನಾವೆಲ್ಲರೂ ಒಂದೇ ಬಣಕ್ಕೆ ಸೇರಿದ ಜನರೆಂದು ಹೇಳಿ ನಮ್ಮ ಸಂಸ್ಕೃತಿ ಒಂದೇ ಎಂದು ಹೇಳಿ, ನಾವು ಅವರ ಸೈನ್ಯಕ್ಕೆ ಭರ್ತಿಯಾಗಿ ನಮ್ಮಿಬ್ಬರ ಪೂರ್ವಜರ ಗೌರವವನ್ನುಳಿಸಲು ಯುದ್ಧದಲ್ಲಿ ಪಾಲ್ಗೊಳ್ಳಿ ಎಂದು ಹೇಳಿದರು. ಯುದ್ಧದಲ್ಲಿ ಇವರು ದುರ್ಬಲ ಸ್ಥಿತಿಯಲ್ಲಿದ್ದಾರೆಂದೂ, ಇವರ ಜನ ಹೆಚ್ಚು ಸಂಖ್ಯೆ ಯಲ್ಲಿ ಸಾಯುತ್ತಿರುವರೆಂಬ ವಿಷಯ ನಮಗೂ ತಿಳಿಯಿತು.

ಮತ್ತೆ ಅದೇ ಮೈದಾನ ... ಅಲ್ಲಿ ಚಳಿಗಾಲದ ಬೆಳಿಗ್ಗೆ ನಾವು ಹೊಸ ಪ್ರಭುಗಳ ಆಣತಿಯ ಸಂಕೇತಕ್ಕಾಗಿ ಕಾದು ನಿಂತಿದ್ದೆವು. ಸಾವಿರಗಟ್ಟಲೆ ಜನ ತಂದೆ – ತಾಯಿ, ಮಕ್ಕಳು, ಮುದುಕರು ಅಲ್ಲಿ ಸೇರಿದ್ದರು. ನಮ್ಮ ನೆರೆಹೊರೆಯ ಜನ ಕೂಡ ಅಲ್ಲಿ ನಿಂತಿದ್ದರು. ಸುಮಾರು ಒಂದು ವರ್ಷವಾಗಿರಬಹುದು, ನಮ್ಮ ಅಕ್ಕಪಕ್ಕದಲ್ಲೇ

ವಾಸ ಮಾಡುತ್ತಿದ್ದರೂ ಅವರನ್ನು ನೋಡುವ ಅವಕಾಶವಾಗಿರಲಿಲ್ಲ, ಅಂತಹವರೆಲ್ಲ ಚಿಂತೆಯಲ್ಲಿ ಮುಳುಗಿರುವಾಗ ಅಲ್ಲಿ ನನ್ನನ್ನು ನೋಡಿ ವಿಸ್ಮಿತರಾದರು. ನಾವು ಶೀತ ಕಾಲದ ಬೆಳಿಗ್ಗೆ ಹೊಸ ಪ್ರಭುಗಳ ಸಂಕೇತಕ್ಕಾಗಿ ಕಾದು ನಿಂತಿದ್ದೆವು.

ಕೊನೆಗೆ ಅವರು ಬಂದರು. ಅವರು ಭಾರವಾದ ಬೂಟು, ಭಾರವಾದ ರೈಫಲ್‌ನೊಂದಿಗೆ ಬಂದರು. ತಮ್ಮ ಹಿಂದೆ ಅವರು ಹನ್ನೆರಡು ಜನರನ್ನು ಎಳೆದುಕೊಂಡು ತರುತ್ತಿದ್ದರು. ಆ ಹನ್ನೆರಡು ಮಂದಿ ನಮಗೆಲ್ಲ ಪರಿಚಿತರಾಗಿದ್ದರು. ಈ ಹನ್ನೆರಡು ಜನರೊಂದಿಗೆ ಕೂಡಿ ನಾವು ಬೆಳೆದಿದ್ದೆವು. ಬೂಟು ರೈಫಲ್‌ಧಾರಿಗಳು ಗುಂಪಿನಲ್ಲಿ ನುಗ್ಗಿದರು. ಆ ಗುಂಪಿನಲ್ಲಿ 100ಕ್ಕೂ ಹೆಚ್ಚು ಮಂದಿ ಇದ್ದರು. ಒಬ್ಬ ಇಲ್ಲಿದ್ದರೆ ಮತ್ತೊಬ್ಬ ಇನ್ನೊಂದು ಕಡೆ ನಿಂತಿದ್ದ. ಪ್ರತಿಯೊಬ್ಬನೂ ಅಲ್ಲಿ ತನ್ನ ಬಳಿ ಬೇರೆ ಯಾವನು ಯಾರೋ ಇದ್ದಾನೆಂಬ ಭಾವನೆ ತೋರಿಸುತ್ತಿದ್ದ. ಈ ಭಾವನೆ ಅವರ ಮನಸ್ಸಿನಲ್ಲಿ ಕ್ಯಾನ್ಸರ್ ರೋಗದ ಹಾಗೆ ಬೇರೂರಿ ಹರಡುತ್ತಿತ್ತು.

ಅವರ ನಾಯಕ ಕಲ್ಲು ಬೆಂಚಿನ ಮೇಲೆ ಹತ್ತಿ ನಮ್ಮ ಕಡೆ ಕಣ್ಣು ಹಾಯಿಸಿದ. ಅವನ ಸುತ್ತ ಮುಖಗಳ ಒಂದು ಸಮುದ್ರ ಹರಡಿತ್ತು. ಸಂಕೇತ ಕೊಟ್ಟ ನಂತರ ಆತನ ಬಳಿಯಲ್ಲಿ ಹನ್ನೆರಡರಲ್ಲಿ ಒಬ್ಬನನ್ನು ತಂದು ನಿಲ್ಲಿಸಿದರು. ಅವನನ್ನು ನಾವೆಲ್ಲ, ಪ್ರತಿಯೊಬ್ಬರೂ ಚೆನ್ನಾಗಿ ಬಲ್ಲೆವು, ಅವನು ಪುರಸಭೆಯ ಒಬ್ಬ ಕಾರಕೂನ, ಸಭ್ಯ ವ್ಯಕ್ತಿ, ತನ್ನ ಯೋಗ್ಯತೆಗೆ ತಕ್ಕಂತೆ ಅವನು ಪ್ರತಿಯೊಂದು ಕೆಲಸ ನಿರ್ವಹಿಸಿದ್ದ. ಸಂಬಳ ತೆಗೆದುಕೊಂಡು ಮನೆಗೆ ಹಿಂತಿರುಗುವುದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ಆ ಜನಜಂಗುಳಿಯ ನಡುವೆ ನಾನು ಆತನ ಹೆಂಡತಿ–ಮಕ್ಕಳನ್ನು ಕಂಡುಹಿಡಿದೆ, ಅವರ ಮುಖದ ಮೇಲೆ ಭಯದ ರೇಖೆಗಳು ಅರಿವಿಲ್ಲದೆಯೇ ಹರಡಿಕೊಂಡಿದ್ದುದನ್ನೂ ನಾನು ಕಂಡೆ.

'ಕಾಮರೇಡ್ಸ್' ಎಂದು ಹೇಳಿ ಆ ನಾಯಕ ಅರಚುತ್ತಾ, 'ಈ ದ್ರೋಹಿಯನ್ನು ಜನರ ಮುಂದೆ ನಿಲ್ಲಿಸಿ, ಇಷ್ಟು ವರ್ಷಗಳ ಕಾಲ ನಿಮ್ಮ ಪ್ರಾಣಗಳು ಇವನ ಕೈಲಿದ್ದುವು, ನಿಮಗೆ ಅಕ್ಕಿ ಯಾವಾಗ, ಎಷ್ಟು ಸಿಗಬೇಕೆಂದು ಇವನು ನಿರ್ಣಯಿಸುತ್ತಿದ್ದ. ಇವನು ಬಹಳ ದಾಂದಲೆಗಳನ್ನು ಮಾಡಿದ್ದಾನೆಂದು ತಿಳಿದುಬಂದಿದೆ. ಈ ಧೂರ್ತ ಅಪರಾಧಿಗೆ ನಿನ್ನ ತಪ್ಪುಗಳನ್ನು ಸರಿಪಡಿಸಿಕೋ ಎಂದು ಹೇಳಿದರೆ, ಇವನು ವಿದ್ರೋಹ ಮಾಡಿ, ಸಾಂಪ್ರದಾಯಿಕವಾದ ಮಾರ್ಗಗಳನ್ನೇ ಮುಂದುವರಿಸಿದ. 10 ದಿನಗಳಿಂದಲೂ ಆಹಾರವನ್ನು ಪ್ರಾಮಾಣಿಕವಾಗಿ ಹಂಚಲು ಮಾಡಿದ ಪ್ರತಿಯೊಂದು ಪ್ರಯತ್ನವನ್ನೂ ಇವನು ಹಾಳುಮಾಡುತ್ತಿದ್ದಾನೆ. ಮಿತ್ರರೇ, ಇವನಿಗೆ ನಾವು ಏನು ಶಿಕ್ಷೆ ವಿಧಿಸೋಣ?' ಎಂದು ಜೋರಾಗಿ ಕೇಳಿದ.

'ಇವನನ್ನು ಕೊಂದು ಹಾಕಿ' ಎಂದು ಸಮೂಹದಲ್ಲಿ ಸೇರಿಕೊಂಡಿದ್ದ ನೂರು ಮಂದಿ ಕಾರ್ಯಕರ್ತರೂ ಒಂದೇ ಧ್ವನಿಯಲ್ಲಿ ಸಾರಿ, ಮುಷ್ಟಿಯನ್ನು ಮಡಚಿ, 'ಇವನನ್ನು ಕೊಂದು ಹಾಕಿ' ಎಂದು ಅರಚಿದರು.

ಜಗುಲಿಯ ಮೇಲೆ ನಿಂತಿದ್ದ ನಾಯಕ ಅದನ್ನು ಒಪ್ಪಿಕೊಂಡಂತೆ ತಲೆ ಅಲ್ಲಾಡಿಸಿ, 'ಮಿತ್ರರೇ, ಈ ವಿದ್ರೋಹಿ ಪ್ರಾಣದಂಡಕ್ಕೇ ಅರ್ಹ' ಎಂದ.

ಅವನು ತನ್ನ ಭಾರವಾದ ಪಿಸ್ತೋಲನ್ನು ಹೋಲ್‌ಸ್ಟಾರ್‌ನಿಂದ ಹೊರತೆಗೆದು ಆ ಮನುಷ್ಯನ ಬುರುಡೆಯ ಮೇಲಿಟ್ಟು ಫಾಯರ್ ಮಾಡಿದ. ಕಣ್ಣು ಮುಚ್ಚಿ ತೆರೆಯುವುದರ ಒಳಗಾಗಿ ಆ ಕಾರಕೂನ ನಡುಗಿ ಜಗುಲಿಯ ಮೇಲೆ ಉರುಳಿದ. ಜನ ಸಮೂಹದ ನಡುವೆ ಸ್ಮಶಾನಶಾಂತಿ ಆವರಿಸಿತು.

'ನೀಚರಿಗೆಲ್ಲಾ ಮೃತ್ಯುದಂಡ' ಎಂದು ಆ ನೂರು ಜನ ಕಾರ್ಯಕರ್ತರೂ ಕಿರುಚಿದರು. ಸತ್ತವನ ರಕ್ತ ಜಗುಲಿಯ ಮೇಲೆಲ್ಲ ತೊಟ್ಟಿಕ್ಕಿ ಕೆಳಗೆ ಬಿತ್ತು, ಮೈದಾನದ ಮಣ್ಣಿನಲ್ಲಿ ಸೇರಿಹೋಯಿತು.

ಇನ್ನೊಬ್ಬನನ್ನೂ ಜಗುಲಿಯ ಮೇಲಕ್ಕೆ ಎಳೆತಂದರು.

ಆ ನಾಯಕ ಮತ್ತೊಮ್ಮೆ, 'ಕಾಮರೇಡ್ಸ್, ಈ ದಂಗೆಕೋರರನ್ನು ಜನರ ಮುಂದೆ ತಂದು ನಿಲ್ಲಿಸಿ' ಎಂದು ಅರಚಿದ,

ಜನರ ನಡುವೆ ಗುಸು–ಗುಸು ಮಾತು ಶುರುವಾಯಿತು. ಅವನನ್ನು ಎಲ್ಲರೂ ಗುರುತುಹಿಡಿದಿದ್ದರು. ನಮ್ಮಣ್ಣ ನಮ್ಮ ತಂದೆಯ ಬಳಿ ಸಾರಿ, 'ಈತ ಕಮ್ಯುನಿಸ್ಟ್ ಲೀಡರ್ ಅಲ್ಲವೇನಪ್ಪ' ಎಂದು ಹೇಳುತ್ತಿದ್ದುದನ್ನು ಕೇಳಿಸಿಕೊಂಡು,

'ಹೌದು.'

'ಮತ್ತೆ ?'

'ದಕ್ಷಿಣ ಕೊರಿಯಾದಲ್ಲಿ ಕಮ್ಯುನಿಸ್ಟರ 3 ಗುಂಪುಗಳಿವೆ. ರಷ್ಯಾ, ಚೈನಾ, ಉತ್ತರ ಕೊರಿಯಾದಲ್ಲಿ ಟ್ರೈನಿಂಗ್ ಪಡೆದಿರುವವರು. ಇವರು ಪರಸ್ಪರ ಕಾದಾಡುತ್ತಿದ್ದಾರೆ.'

ನಾಯಕ ತನ್ನ ದೂರುಗಳ ಪಟ್ಟಿಯನ್ನು ಓದಿ ಮುಗಿಸಿದ್ದ. ಅವನು ಜನ ಸಮೂಹವನ್ನು ನೋಡಿ, 'ಈ ದ್ರೋಹಿಗೆ ಯಾವ ಶಿಕ್ಷೆ ನೀಡಬೇಕು ?' ಎಂದು ಕೇಳಿದ.

ಮೊದಲಿನಂತೆಯೇ ನೂರು ಜನ 'ಇವನನ್ನು ಕೊಂದು ಹಾಕಿ' ಎಂದರು. ಆದರೆ ಈ ಬಾರಿ ನಾಯಕ ಯಾಕೋ ತೃಪ್ತಿ ಸೂಸಲಿಲ್ಲ.

'ಕಾಮರೇಡ್ಸ್, ಇವನನ್ನು ಹೇಗೆ ನಡೆಸಿಕೊಳ್ಳಬೇಕು' ಎಂದು ನಾನು ಕೇಳಿದ್ದು ಅಂದ. ಯಾರೂ ಜವಾಬು ಕೊಡಲಿಲ್ಲ. ಯೋಚನೆ ಮಾಡಿನೋಡಿ, ಒಂದು ನಿಮಿಷ ಬಿಟ್ಟು ನಾನು ಇನ್ನೊಮ್ಮೆ ನಿಮ್ಮನ್ನು ಕೇಳುತ್ತೇನೆ, ಎಂದ.

ನೂರು ಜನ ನಮ್ಮ ಕಡೆ ದುರುಗುಟ್ಟಿ ನೋಡಿದರು, ಮತ್ತೆ ಅವರು ಸುತ್ತ ತಿರುಗಾಡಿ ಒಬ್ಬರನ್ನೊಬ್ಬರು ನೋಡುತ್ತಾ ಜೋರಾಗಿ ಹೇಳಿದರು. 'ನಮ್ಮ ನಡುವೆ ಮತ್ತೆ ಯಾರೂ ದಂಗೆಕೋರ ಇರಲಾರನೆಂದು ನಮಗನ್ನಿಸುತ್ತದೆ' ಎಂದರು.

'ಇವನನ್ನು ಸಾಯಿಸಿಬಿಡಿ' ಎಂದು ನೂರು ಜನ ಕಿರುಚಿದರು.

'ಇವನನ್ನು ಸಾಯಿಸಿಬಿಡಿ' ನಾವೂ ಉಸುರಿದೆವು.

ನಾಯಕನಿಗೆ ಈಗ ತೃಪ್ತಿಯಾದಂತೆನಿಸಿತು. ಅವನು ಹೋಲ್‌ಸ್ಟರ್‌ನಿಂದ ಪಿಸ್ತೂಲ್ ತೆಗೆದು ಆ ಮನುಷ್ಯನ ಹಣೆಯ ಮೇಲಿಟ್ಟು ಒತ್ತಿದ್ದ, ಆ ಮನುಷ್ಯನ ಮಸ್ತಿಷ್ಕ ಹೊರಕ್ಕೆ ಚಿಮ್ಮಿತು. ಬಿಸಿ–ಬಿಸಿ ರಕ್ತ ಮತ್ತೊಮ್ಮೆ ಬಯಲನ್ನು ಚುಂಬಿಸ ತೊಡಗಿತು.

ಇದಾದನಂತರ ಆ ನಾಯಕ ನಮ್ಮನ್ನು ಹತ್ತು ಸಾರಿ ಪ್ರಶ್ನಿಸಿದ. ಹತ್ತು ಸಾರಿ ನಾವು ಆವೇಶಪೂರಿತರಾದಂತೆ ಉತ್ತರ ನೀಡಿದೆವು. 'ಇವನನ್ನು ಕೊಂದು ಹಾಕಿ' ಎಂದೆವು. ಹೀಗೆ ಇನ್ನೂ ಹತ್ತು ಸಾರಿ ಕೊರಿಯಾ ಸುಪುತ್ರರ ರಕ್ತ ಪವಿತ್ರವಾದ ಮಣ್ಣಿನಲ್ಲಿ ಕೂಡಿಕೊಂಡಿತು.

ನಾವು ನಿಸ್ಸಹಾಯಕರಾಗಿ, ವಿವಶತೆಯಿಂದ ಈ ಎಲ್ಲ ಘಟನೆಗಳನ್ನೂ ನೋಡುತ್ತಾ ನಿಂತಿದ್ದೆವು. ನಮ್ಮ ಶರೀರದಲ್ಲಿ ಭಯ ಕಂಪಿಸುತ್ತಿತ್ತು. ಬೆಳಗಿನ ಶೀತದ ನಡುವೆಯೂ ಬಿಸಿದಿನ ಹುಟ್ಟಿಕೊಂಡಿತ್ತು.

ನನ್ನ ಪ್ರೀತಿಯ ದೇಶ !

ನಿನ್ನ ಭತ್ತ, ನಿನ್ನ ಶರಾಬು ಮತ್ತೊಮ್ಮೆ ಹಳೆಯ ಉಲ್ಲಾಸ ನೀಡಬಲ್ಲುದೇ ?

ನಿನ್ನ ಶಂಖ–ಕೊಳಲಿನ ಮಧುರ ನಾದ ಪುನಃ ಕೇಳಿಸೀತೇ ? ಪೂರ್ವ-ಪಶ್ಚಿಮ ರಾಷ್ಟ್ರಗಳ ನಿವಾಸಿಗಳಿಗೆ ಧಿಕ್ಕಾರ. ನನ್ನ ದೇಶದ ರಕ್ತದಲ್ಲಿ ಮೀಯಿಸಿದವರಿಗೆಲ್ಲ, ನನ್ನ ದೇಶವನ್ನು ಹೋಳು ಮಾಡಿದವರಿಗೆಲ್ಲಾ ಧಿಕ್ಕಾರ !

# ಮಾರ್ಗದರ್ಶಿ

ಮೂಲ : ವಾನ್‌ಥಾನ್
ಅನು : ಬಿ. ವೈ. ಲಲಿತಾಂಬ

ಖೇಸಾತ್ ಬಳಿಯಿಂದ ಕೂಚು ಮಾಡಿದ ಶತ್ರುಗಳ ಸೈನ್ಯ ಜಪಾನಿನ ಮೇಲೆ ದಾಳಿ ಮಾಡಿತು. ಜಪಾನನ್ನು ಶತ್ರುಗಳು ಆಕ್ರಮಿಸಿಕೊಂಡರು ಎಂದರೆ ಕ್ಯಾಂಗ್-ಥೊ-ಥೆನ್‌ಗೆ ಪಶ್ಚಿಮ ಭಾಗದಲ್ಲಿರುವ ಸ್ವತಂತ್ರ ರಾಜ್ಯಗಳಿಗೆ ಸಂಚಕಾರ ಬಂದೊದಗಿತು ಎಂಬುದು ನಿರ್ವಿವಾದ. ಒಣಗಿನಿಂತ ಹೊಲಗಳಲ್ಲಿ ಕೆಲಸ ಮಾಡಿ ನಾವೆಲ್ಲ ಹಿಂದಿರುಗಿದ್ದೆವು. ಆದರೆ ತಕ್ಷಣ ನಮ್ಮ ಪೂರ್ತಿ ಕಂಪನಿಗೇ ಕೂಚ್ ಮಾಡಲು ಆಜ್ಞಾಪಿಸಲಾಯಿತು. ರಾತ್ರಿ ಹೇಗಾದರೂ ಮಾಡಿ ನಮ್ಮ ಕಂಪನಿ ಈಗ ಅಮಾನ್‌ನ್ನು ತಲಪಲೇಬೇಕಾಗಿತ್ತು. ಆಗುಡ್ಡಗಾಡಿನ ಗೆರಿಲ್ಲಾಗಳು ಟಾಕೋವರೆವಿಗೆ ನಮಗೆ ಮಾರ್ಗ ತೋರಿಸುವರೆಂದೂ ನಂತರ ನಾವು ಅಲ್ಲಿ ತಲಪಿ ಶತ್ರುಗಳ ಪ್ರಮುಖ ಸೇನಾ ತುಕಡಿಗಳೊಡನೆ ಸೇರಿಸಿ, ರೇಂಜರ್ಸ್ ಜೊತೆ ಕಾದಾಡಬೇಕಾಗಿತ್ತು.

ಅರ್ಧರಾತ್ರಿಯ ವೇಳೆಗೆ ನಾವು ಅಮಾನ್ ತಲಪಿದೆವು. ನಾವು ಅಲ್ಲಿಗೆ ತಲಪಿದ ಸಮಾಚಾರ ತಿಳಿದೊಡನೆಯೇ ಹಳ್ಳಿಯ ಜನಗಳು ನಮಗೆ ಸ್ವಾಗತ ಕೋರಲು ಹಳ್ಳಿಯ ಮಧ್ಯೆ ಬಯಲಿನಲ್ಲಿ ಒಟ್ಟುಗೂಡಿದರು. ಅಲ್ಲಿದ್ದ ಪ್ರತಿಯೊಬ್ಬರೂ ನಮ್ಮನ್ನು ಅತಿಥಿಗಳನ್ನಾಗಿ ಆದರಿಸುತ್ತೇವೆಂದು ಹಟ ಹಿಡಿದರು. ನಾವು ಮಾತ್ರ ತಕ್ಷಣ ಕೂಚ್ ಮಾಡಬೇಕಾಗಿದೆಯೆಂಬ ವಿಷಯವನ್ನು ಅವರಿಗೆ ತಿಳಿಸಿದೆವು. ಕೈಯಲ್ಲಿ ಹಾರವನ್ನಿಟ್ಟು ಕೊಂಡು ನಿಂತಿದ್ದ ಒಬ್ಬ ಗೆರಿಲ್ಲಾ ಹೆಂಗಸನ್ನು ನೋಡಿ ಕಮಿಟಿಯ ಮುಖ್ಯಸ್ಥನೆಲ್ಲಿದ್ದಾನೆಂದು ಕೇಳಿದೆ.

'ಅವನು ಗೆರಿಲ್ಲಾಗಳ ಗುಂಪಿನ ಜೊತೆ ಶತ್ರುಗಳ ಸೈನ್ಯದೊಂದಿಗೆ ಯುದ್ಧ ಮಾಡಲು ಹೋಗಿದ್ದಾನೆ' ಎಂದು ಅವಳು ಉತ್ತರ ನೀಡಿದಳು.

ನಾನು ಕಂಪನಿಯ ರಾಜಕೀಯ ಅಧಿಕಾರಿಯ ಕಡೆ ನಿರಾಶೆಯಿಂದ ನೋಡಿದೆ. ಆತ ಆಕೆಯೊಡನೆ ಈ ಊರಿನಲ್ಲಿ ಮತ್ತೆ ಯಾರು ಇರುವರೆಂದು ವಿಚಾರಿಸಿದ.

ಆಕೆ ನಮ್ಮಿಬ್ಬರಿಗೂ ತನ್ನ ಜೊತೆ ಬರುವಂತೆ ಸಂಕೇತ ಮಾಡಿ ಮುಂದೆ ಹೊರಟಳು. ಆಕೆ ಒಂದು ಮಹಡಿಯ ಮನೆಯ ಬಳಿ ನಮ್ಮನ್ನು ಕೊಂಡೊಯ್ದಳು

ಮತ್ತು ಅಲ್ಲಿ ಸೈನ್ಯದ ಕಮಿಟಿಯ ನಾಯಕನೊಂದಿಗೆ ನಮ್ಮ ಭೇಟಿ ಮಾಡಿಸಿದಳು. ಆತ ಒಳ್ಳೆಯ ಕಟ್ಟುಮಸ್ತಾದ ಯುವಕ, ನಾನು ಟಾಕೊವರೆವಿಗೆ ನಮ್ಮ ಜೊತೆ ಒಬ್ಬ ಮಾರ್ಗದರ್ಶಿಯನ್ನು ಕಳುಹಿಸಲು ಕೇಳಿದೆ. ಆತ ಕ್ಷಣಕಾಲ ಚಿಂತಿತನಾಗಿ ಸುಮ್ಮನೆ ಕುಳಿತ. ನಂತರ ತನ್ನ ಅಸಹಾಯಕ ಪರಿಸ್ಥಿತಿಯನ್ನು ತೋಡಿಕೊಂಡು, 'ನೀವು ಬಹಳ ಫಜೀತಿಗೆ ಸಿಕ್ಕಿಹಾಕಿಕೊಂಡಿದ್ದೀರಿ, ಈ ಮಾರ್ಗ ಗೊತ್ತಿರುವ ಯಾವೊಬ್ಬ ಮನುಷ್ಯ ಕೂಡ ಈಗ ಹಳ್ಳಿಯಲ್ಲಿಲ್ಲವಲ್ಲಾ' ಎಂದ.

'ನಮಗೆ ಕಾಡಿನ ಮೊಟಕು ದಾರಿ ತೋರಿಸುವವನು ಸಿಕ್ಕರೂ ಸಾಕು' ನಾನೆಂದೆ. ಫೌಜಿ ಕಮಿಟಿಯ ನಾಯಕನು ಕಣ್ಣಿಂದ ಪಿಳಿಪಿಳಿ ನೋಡಿ ತನ್ನ ವಿವಶತೆಯನ್ನೇ ತೋಡಿಕೊಂಡ. ಎಂಥ ಪೇಚಿನ ಸ್ಥಿತಿ ಅಂದರೆ ಅಂಥ ಮೊಟಕು ದಾರಿ ಯಾವುದೂ ಇಲ್ಲ. ಟಾಕೋವರೆವಿಗೆ ಹೋಗಲು ಇರುವುದೊಂದೇ ಒಂದು ದಾರಿ. ಆ ದಾರಿಯಲ್ಲಿ ಗೆರಿಲ್ಲಾಗಳು ಭಯಂಕರವಾಗಿ ಹರಡಿಕೊಂಡಿದ್ದಾರೆ. ಅದಕ್ಕೇ ರಸ್ತೆ ಸರಿಯಾಗಿ ಗೊತ್ತಿಲ್ಲದೆ ಇರುವ ಯಾರನ್ನೂ ನಾನು ನಿಮ್ಮ ಜೊತೆ ಕಳುಹಿಸುವ ಹಾಗಿಲ್ಲ. ಎಲ್ಲಿ, ಯಾವಾಗ ಬೇಕಾದರೂ ವಿಪತ್ತು ಬಂದೊದಗಬಹುದು. ಅದರಿಂದ ಬೇಜವಾಬ್ದಾರಿ ತೋರಿ ಇಂಕ್‌ಲಾಬ್‌ಗೆ ನಷ್ಟ ಒದಗಿಸುವ ಕೆಲಸ ಯಾವುದೂ ನಾನು ಮಾಡುವಂತಿಲ್ಲ.

ಆ ಯುವಕ ಒಂದು ಸೌದೆ ತುಂಡನ್ನು ಕೈಗೆತ್ತಿಕೊಂಡು ಬೆಂಕಿ ಕೆದಕತೊಡಗಿದ. ಬೆಂಕಿಯ ಬೆಳಕಿನಲ್ಲಿ ಆತನ ದಟ್ಟವಾದ ಹುಬ್ಬುಗಳ ಮಧ್ಯೆ ಚಿಂತೆಯಿಂದಾವರಿಸಿದ ಕಣ್ಣುಗಳು ಮಿನುಗುತ್ತಿದ್ದವು.

ಗುಂಪಿನಿಂದ ಇದ್ದಕ್ಕಿದ್ದ ಹಾಗೆ ಒಂದು ಕೈ ಮೇಲೆ ಕಾಣಿಸಿತು. ಒಂದು ಹೆಣ್ಣು ಧ್ವನಿ, 'ಅವರ ಜೊತೆ ನಾನು ಹೋಗುತ್ತೇನೆ' ಎಂದಿತು.

'ಹೋಗಬಹುದು, ನಿಮ್ಮಮ್ಮ ಕಾಹಿಲೆ ಬಿದ್ದಿದ್ದಾಳಲ್ಲಾ' ಎಂದು ಹೇಳಿ ವಾಹ್ ಹುವಾಳ ಕರೆಯನ್ನು ಕಡೆಗಣಿಸಿದ.

'ನಿಜ, ಆದರೆ ಸ್ವಾತಂತ್ರ್ಯ ಸೈನ್ಯಕ್ಕೆ ನಾನು ಮಾರ್ಗ ತೋರಿಸದೆ ಹೋದರೆ ಅವರು ಹೋಗಿ ಶತ್ರುಗಳ ಜೊತೆ ಯುದ್ಧ ಮಾಡುವುದಾದರೂ ಹೇಗೆ ? ಹಾಗಾಗದಿದ್ದಲ್ಲಿ ಶತ್ರುಗಳು ಅಮಾನ್‌ವರೆವಿಗೂ ಬಂದ ನಮ್ಮ ತಾಯಿಯನ್ನೂ ಕೊಂದು ಹಾಕುತ್ತಾರೆ, ನನ್ನ ಫಸಲನ್ನೂ ಹಾಳು ಮಾಡುತ್ತಾರೆ.'

ಫೌಜಿ ಕಮಿಟಿಯ ನಾಯಕ ಮುಖ ಸಿಂಡರಿಸಿಕೊಂಡು ಆ ಹೆಣ್ಣಿನ ಮಗುವಿನ ಕಡೆ ಬೆರಳು ಮಾಡಿ 'ನಿನ್ನ ಮಗಳ ಗತಿಯೇನು ?' ಎಂದು ಹೇಳಿ, 'ನೀನು ಇವಳನ್ನು ನಿನ್ನ ಜೊತೆ ಕರೆದುಕೊಂಡು ಹೋಗಲು ಸಾಧ್ಯವಿಲ್ಲ. ಹೊಡೆದು ಓಡಿಹೋಗುವ ಗುಂಪು ಅಲ್ಲಿಲ್ಲ. ಪಟ್ಟಾಗಿ ಹೊಡೆದಾಟ, ಕದನ ನಡೆಯುತ್ತದೆ' ಎಂದ.

ಇವಳನ್ನ ಬೆನ್ನಿಗೆ ಕಟ್ಟಿಕೊಂಡು ನಾನು ಜೋರಾಗಿ ಓಡಬಲ್ಲೆ. ಗುಂಡು ಹಾರಿಸಬಲ್ಲೆ, ಅಳಿಲಿನ ಹಾಗೆ ತೀವ್ರವಾಗಿ ಓಡಬಲ್ಲೆ' ಎಂದು ಹೇಳುವಾಗ ವಾಯ್ ಹುವಾಗೆ

ರೋಷ ಉಕ್ಕೇರುತ್ತಿತ್ತು. ತನ್ನ ಬಂದೂಕದ ಹಿಡಿಯನ್ನು ನೆಲಕ್ಕೆ ಒತ್ತಿ ಅವಳು ಬೆಂಕಿಯ ಕಡೆ ದುರುಗುಟ್ಟಿ ನೋಡುತ್ತಿದ್ದಳು.

'ಬೇಡ, ಬೇಡ, ನನ್ನ ಮಗಳು ಇದಕ್ಕೊಪ್ಪುವುದಿಲ್ಲ. ಹಳ್ಳಿಯಲ್ಲಿ ಯಾರಾದರೂ ತಮ್ಮ ಮಕ್ಕಳನ್ನು ಬೇರೆಯವರ ವಶಕ್ಕೆ ಒಪ್ಪಿಸಿ ಹೋಗಿರುವುದನ್ನು ನೀನು ನೋಡಿದ್ದೀಯಾ ? ಕಾಡು ಮನುಷ್ಯ, ಕೋತಿಗಳು ಕೂಡ ತಮ್ಮ ಮಕ್ಕಳನ್ನು ಬಿಟ್ಟಿರುವುದಿಲ್ಲ. ಮನುಷ್ಯ ಹೀಗೆಲ್ಲ ಮಾಡಿದರೆ ಅದು ಅಪರಾಧವಾಗುತ್ತೆ. ನಾನು ಹೊಲಕ್ಕೆ ಹೋಗುವಾಗ ಸಹಿತ ಮಗಳನ್ನು ಜೊತೆಗೇ ಕರೆದುಕೊಂಡು ಹೋಗುತ್ತೀನಿ. ನಾನು ಸ್ವಯಂ ಸೇವಕಿಯಾಗಿ ಇಂಕ್‌ಲಾಬ್ ಕೆಲಸಗಳನ್ನು ಮಾಡುವಾಗ ಕೂಡ ನನ್ನ ಮಗಳನ್ನು ಜೊತೆಯಲ್ಲೇ ಕರೆದುಕೊಂಡು ಹೋಗುತ್ತೇನೆ. ಈ ಯುದ್ಧದಲ್ಲೂ ನನ್ನ ಮಗಳನ್ನು ಬೆನ್ನಿಗೆ ಕಟ್ಟಿಕೊಂಡೇ ಹೊರಡುತ್ತೇನೆ, ಇಲ್ಲದಿದ್ದರೆ ನನಗೆ ಮನಃಶಾಂತಿ ಸಿಗುವುದಿಲ್ಲ.'

ನನಗಾದರೋ ಹೇಳತೀರದ ಅಶಾಂತಿ. ನನ್ನ ಗಡಿಯಾರದ ಚಿಕ್ಕ ಮುಳ್ಳು ಈಗಾಗಲೇ 3ನ್ನು ತಲಪುತ್ತಿತ್ತು. ಈವರೆಗೂ ನಮಗೆ ಯಾವ ಗೈಡೂ ಸಿಕ್ಕಿರಲಿಲ್ಲ. ಒಂದು ನಿಮಿಷ ತಡಮಾಡಿದರೂ ಶತ್ರುವಿಗೇ ಲಾಭವಾಗುತ್ತಿತ್ತು. ಹಾಗಿದ್ದರೂ ವಾಯ್‌ಹೂವಾನ ಅಹವಾಲು ಒಪ್ಪಿಕೊಳ್ಳುವುದೂ ನನಗೆ ಸರಿಯೆನಿಸುತ್ತಿರಲಿಲ್ಲ. ನಾವು ನಮ್ಮ ದೇಶಕ್ಕಾಗಿ, ನಮ್ಮ ಜನಗಳನ್ನು ಉಳಿಸುವುದಕ್ಕೋಸ್ಕರ ಯುದ್ಧ ಮಾಡುತ್ತಿದ್ದೇವೆ. ಹೆಂಗಸರು, ಮಕ್ಕಳನ್ನು ನಾವು ಉಳಿಸಬೇಕಾಗಿದೆ. ಯುದ್ಧದ ಕಣದಲ್ಲಿ ಈ ಹೆಂಗಸು ಮತ್ತು ಇವಳ ಎರಡು ವರ್ಷದ ಮಗಳಿಗೇನಾದರೂ ಆದರೆ ಆಗೇನು ಮಾಡುವುದು ಎಂದುಕೊಂಡು ನಾನು ಒಂದು ನಿರ್ಣಯಕ್ಕೆ ಬಂದು ತಲಪಿದವನ ಹಾಗೆ ಹೇಳಿದೆ, 'ವಾಯ್ ಹುವಾ, ನಿನಗೆ ಅನೇಕಾನೇಕ ವಂದನೆಗಳು, ಆದರೆ ನಿನ್ನನ್ನು ನಾವು ನಮ್ಮ ಜೊತೆ ಕರೆದುಕೊಂಡು ಹೋಗುವುದು ಆಗದ ಮಾತು.'

ವಾಯ್ ಹುವಾ ನನ್ನನ್ನು ನೋಡಿದಳು. ಅದು ಬೆಂಕಿಯ ಬೆಳಕೋ ಅಥವಾ ಅವಳ ಕಣ್ಣಿನ ದೃಷ್ಟಿಯೋ, ಯಾವುದೂ ಹೇಳುವುದು ಕಷ್ಟವಾಗಿತ್ತು. ನಾನು ಅವಳ ದೃಷ್ಟಿಯನ್ನು ಎದುರಿಸಲಾಗಲಿಲ್ಲ. ನಾನು ಬೇರೆಯ ಕಡೆ ನೋಡತೊಡಗಿದೆ. ವಾಯ್ ಹುವಾಗೆ ಬಹುಶಃ ಇದೆಲ್ಲಾ ಅರ್ಥವಾಗಿರಬೇಕು. ನಾನು ಯೋಚನೆಯಲ್ಲಿ ಮುಳುಗಿದ್ದೆ. ಅದರಿಂದ ಅವಳು ಜೋರಾಗಿ ಕಿರುಚಿದಳು. 'ಅಂದರೆ ನೀವು ಹೆಂಗಸರನ್ನು ಕೀಳಾಗಿ ನೋಡುತ್ತೀರಿ ಎಂದರ್ಥವಾಯಿತು. ಶತ್ರುಗಳ ಜೊತೆ ಕಾದಾಡುವ ನಮ್ಮ ಹಕ್ಕನ್ನು ವಿರೋಧಿಸುತ್ತೀಯೇನು ? ಶತ್ರುಗಳೇನಾದರೂ ಹೆಂಗಸರು–ಮಕ್ಕಳನ್ನು ಹೃದಯಹೀನತೆಯಿಂದ ತುಂಡು ಮಾಡುವುದು ಬಿಟ್ಟಿದ್ದಾರೇನು ? ನೀನೇ ಯೋಚಿಸಿ ನೋಡು' ಅವಳ ಮಾತುಗಳು ಚಾಟಿಯ ಏಟಿನ ಹಾಗೆ ತೀಕ್ಷ್ಣವಾಗಿತ್ತು. ನಾನಂತೂ ಬಹಳ ಅಸಮಂಜಸದಲ್ಲಿ ಸಿಕ್ಕಿಬಿದ್ದಿದ್ದೆ. ಏನು ಮಾಡುವುದೆಂದು ತೋಚುತ್ತಿರಲಿಲ್ಲ.

ಫೌಜಿ ಕಮಿಟಿಯ ನಾಯಕ ನಕ್ಕ. ತನ್ನ ಬಲಿಷ್ಠವಾದ ಕೈಗಳಿಂದ ತನ್ನ ಕೂದಲನ್ನ ಹಿಂದಕ್ಕೆ ಹಾಕಿ ಅವನು ರಾಜಕೀಯ ಅಧಿಕಾರಿಯೊಡನೆ ಹೇಳಿದ, 'ಅವಳ ಪ್ರಸ್ತಾಪವನ್ನು ನೀವಿನ್ನು ಒಪ್ಪಲೇಬೇಕು. ಅವಳು ಹಟವಾದಿ. ಟಾಕೋವರೆಗಿನ ಮಾರ್ಗವನ್ನು ನೋಡಿರುವದೂ ಅವಳೊಬ್ಬಳೇ.'

ನಂತರ ಆತ ಆ ಹೆಣ್ಣಿನ ಬಗೆಗೆ ಸಂಕ್ಷಿಪ್ತ ಪರಿಚಯ ನೀಡಿದ. ಅವಳಿಗೆ ಈಗ 25 ವರ್ಷಗಳಾಗಿದ್ದವು. ಅವಳ ಮನೆಮಂದಿಯೆಲ್ಲಾ ಇಂಕಲಾಬಿಗಳೇ, ಅವಳಣ್ಣ ಮನೆಯಲ್ಲಿ ಎಲ್ಲರಿಗಿಂತ ದೊಡ್ಡವನು, ಅವನು ಸ್ವಾತಂತ್ರ್ಯ ಸೈನ್ಯದ ಸಿಪಾಯಿಯಾಗಿದ್ದ. ಇದೀಗ ಖೇಸಾನ್ ಯುದ್ಧದಲ್ಲಿ ಮಡಿದಿದ್ದ. ಅವಳ ತಂಗಿ ಸಂಪರ್ಕ ಸೂತ್ರವನ್ನು ಏರ್ಪಾಡುಮಾಡುವ ಕಾರ್ಯಕರ್ತಳಾಗಿದ್ದಳು. ರಾತ್ರಿ – ಬೆಳಿಗ್ಗೆ ಯಾವಾಗಲೂ ಅವಳು ರಸ್ತೆಯಲ್ಲೇ ಇರುತ್ತಿದ್ದಳು. ಯಾವಾಗಲಾದರೊಮ್ಮೆ ಅವಳು ಮನೆಯಲ್ಲಿ ಕಾಣಿಸಿಕೊಳ್ಳುತ್ತಿದ್ದಳು. ಅವಳ ತಂದೆ ಮಾತೃಭೂಮಿಯ ಎಲ್ಲೆಯ ಸಂರಕ್ಷಕ ವರ್ಗದ ಸಿವಿಲ್ ವಿಭಾಗದಲ್ಲಿದ್ದ. ತನ್ನ ಕೆಲಸದಲ್ಲಿ ಮಗ್ನನಾಗಿ ಅವನು ಮನೆ, ಹೊಲ–ಗದ್ದೆ ಎಲ್ಲವನ್ನೂ ಮರೆತು ಕೂತಿದ್ದ. ಅವಳ ಅಮ್ಮ ಕೂಡ ಹೆಣ್ಣು ಸೈನ್ಯದ ಕ್ರಿಯಾಶೀಲ ಕಾರ್ಯಕರ್ತಳಾಗಿದ್ದಳು. ಎಲ್ಲೆಯನ್ನು ರಕ್ಷಿಸುವ ಸೇನಾದಳದ ಒಂದು ತುಕಡಿ ಇದಾಗಿತ್ತು. ಹೀಗಾಗಿ ವಾಯ್ ಹುವಾ ಮನೆಕೆಲಸ, ಹೊಲ-ಗದ್ದೆ ಎಲ್ಲ ಕಡೆ ದುಡಿಯಬೇಕಾಗಿತ್ತು. 20 ವರ್ಷದವಳಾದಾಗ ಅವಳು ಕು ಎಂಬ ಯುವಕನ ಜೊತೆ ಮದುವೆ ಮಾಡಿಕೊಂಡಳು. ಅವನು ಈಗ ಹಳ್ಳಿಯ ಫೌಜಿ ಕಮಿಟಿಯ ಅಧ್ಯಕ್ಷನಾಗಿದ್ದ. ಅವಳ ಮದುವೆಯಾದ ವರ್ಷ ಅವಾನ್‌ಗೆ ಬಹಳ ಕಷ್ಟಕರವಾದ ಪರಿಸ್ಥಿತಿ ಬಂದೊದಗಿತು. ಆ ವರ್ಷ ಅಮೇರಿಕಾದ ಡ್ಯಾಮ್ ಆಫೀಸರ್‌ಗಳು ಹಳ್ಳಿಗಳಿಗಾಗಿ ಬರುವ ಉಪ್ಪಿನ ಸರಬರಾಜನ್ನು ಪೂರ್ತಿಯಾಗಿ ನಿಲ್ಲಿಸಿ ಬಿಟ್ಟಿದ್ದರು. ಹಳ್ಳಿಯವರು ತಮ್ಮ ಕಾಲು ಹಿಡಿದುಕೊಳ್ಳಲಿ ಎಂದು ಅವರು ಹೀಗೆ ಮಾಡಿದ್ದರಾದರೂ ಅವರ ಉದ್ದೇಶ ಫಲಿಸಲಿಲ್ಲ. ಅವಾನ್ ಜನ ನಾವು ಗೋಗರೆಯುದಿಲ್ಲವೆಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ಶತ್ರುವಿಗೆ ಈ ಜನರ ಕ್ರಾಂತಿಕರವಾದ ಭಾವನೆಗಳ ಅಂದಾಜು ಇರಲಿಲ್ಲವಾದುದರಿಂದ ಅವರು ಹೀಗೆಲ್ಲಾ ಕನಸು ಕಂಡಿದ್ದರು.

ವಾಯ್ ಹುವಾ ಆ ಸಂದರ್ಭ ಬಂದಾಗ ತನ್ನ ಪತಿಗೆ ಹೇಳಿದ್ದಳು, 'ನಮ್ಮ ಗೆರಿಲ್ಲಾಗಳು ಚೆನ್ನಾಗಿ ಯುದ್ಧಮಾಡುವ ಕಡೆ ಮಾತ್ರ ನಿನ್ನ ಗಮನವಿರಲಿ. ನಮ್ಮ ಭಲ್ಲೆ ಮತ್ತು ಶತ್ರುಗಳನ್ನು ನಾಶಪಡಿಸುವುದಕ್ಕಾಗಿ ಮಾಡಿಟ್ಟಿರುವ ಉಪಾಯಗಳನ್ನೆಲ್ಲ ಚೆನ್ನಾಗಿ ಉಪಯೋಗಿಸಿಕೊಳ್ಳಿ. ನಾನೊಬ್ಬಳೇ ಮನೆ-ಮಠದ ಕೆಲಸವನ್ನು ನಿಭಾಯಿಸಿಕೊಳ್ಳುತ್ತೇನೆ. ಹೋದವರ್ಷ ಸ್ವಾತಂತ್ರ್ಯಯೋಧರಿಗೆ ಅಕ್ಕಿಯ ಕೊರತೆ ಇರುವುದೆಂಬುದು ತಿಳಿದಾಕ್ಷಣ ಅವಳು ತನ್ನೊಡನೆ ಅನೇಕರನ್ನು ಜೊತೆ ಮಾಡಿಕೊಂಡು ಯುದ್ಧಕ್ಷೇತ್ರಕ್ಕೆ ಅಕ್ಕಿಯ ಸರಬರಾಜು ಮಾಡಿ ಬಂದಳು. ಸೈನಿಕರನ್ನು ಕಂಡು ಅವಳು 'ಶತ್ರುಗಳ ಜೊತೆ ಕಾದಾಡಲು ನೀವು ಬಲಶಾಲಿಗಳಾಗಿರಲು ಒಳ್ಳೆಯ

ಅಕ್ಕಿಯ ಅಗತ್ಯವಿದೆ. ತೆಗೆದುಕೊಳ್ಳಿ, ನಮ್ಮ ಬಗ್ಗೆ ಚಿಂತಿಸಲು ಕಾರಣವಿಲ್ಲ. ನಾವು ಮುಸುಕಿನ ಜೋಳ, ಬೇರು, ಸೊಪ್ಪು-ಸದೆ ತಿಂದುಕೊಂಡು ಬದುಕಿಕೊಳ್ಳುತ್ತೇವೆ' ಎಂದು ಹೇಳಿದ್ದಳು.

ಬೆಳಗಾಗಿಹೋಯಿತ್ತು. ಬಿದಿರಿನ ಪೊದೆಗಳಿಂದ ಹಕ್ಕಿಗಳು ಪಿಲಿ–ಪಿಲಿ ಹಾಡತೊಡಗಿದ್ದವು. ಪೂರ್ವದಿಕ್ಕಿನಲ್ಲಿ ಉಷೆ ಪ್ರಭೆ ಬೀರುತ್ತಿತ್ತು. ಕಾಡಿನಲ್ಲಿ ಇನ್ನೂ ಎಲೆಗಳ ಮಧ್ಯೆ ಮಂಜಿನ ಚಳಿಯ ಕೊರೆತ ಇದ್ದೇಇತ್ತು. ನಾವಿನ್ನೂ ನಡೆಯುತ್ತಲೇ ಇದ್ದೆವು. ನೂರಾರು ಆಯಾಸಗೊಂಡ ಕಾಲುಗಳು ಅಡ್ಡಾದಿಡ್ಡಿ ರಸ್ತೆ, ಬೆಟ್ಟದ ತಪ್ಪಲು, ಕಾಡುಗಳನ್ನೆಲ್ಲ ಪಾರುಮಾಡುತ್ತ ಮುಂದೆ ಸಾಗುತ್ತಿದ್ದವು. ಈ ತುಕಡಿಯು ಮುಂಭಾಗ ವಾಯ್ ಹುವಾ ಜೊತೆ ಮುಂದೆ–ಮುಂದೆ ಸಾಗಿತ್ತು. ಅಪರಿಚಿತ ಪರಿಚಯವಿಲ್ಲದ ಭಾಗದಲ್ಲಿ ಗೆರಿಲ್ಲಾಗಳ ಸಂಚಿಗೆ ಸಿಕ್ಕಿಬೀಳಬಹುದೆಂಬ ಭಯ. ಕೈಕಾಲು ಬೇರೆ ಅತಿಯಾಗಿ ಸೋತುಹೋಗಿದ್ದು ಕಾರಣವಾಗಿ ಸೈನಿಕರು ಆಯಾಸಗೊಂಡಂತೆ ಹೆಜ್ಜೆ ಇಡುತ್ತಿದ್ದರು. ವಾಯ್ ಹುವಾಗೆ ಅದು ಇಷ್ಟವಾಗುತ್ತಿರಲಿಲ್ಲ. ಅವಳು ಎಲ್ಲರಿಗೂ ಮುಂದಾಗಿ ನಿರ್ಭೀತಿಯಿಂದ ದಿಟ್ಟವಾಗಿ ಹೆಜ್ಜೆ ಇಡುತ್ತಿದ್ದಳು. ಅವಳು ನಮ್ಮನ್ನು ಹತ್ತಿರದ ದಾರಿಯಲ್ಲಿ ಕರೆದೊಯ್ಯುತ್ತಿದ್ದಳು. ಮಧ್ಯೆ-ಮಧ್ಯೆ ಅವಳು ಹಿಂದಿರುಗಿ ಅತ್ತಿತ್ತ ನೋಡುತ್ತಿದ್ದಳು.

'ನೀನು ಏನು ನೋಡುತ್ತಿದ್ದೆ' ಎಂದು ನಾನು ಕೇಳಿದೆ.

'ನನ್ನ ಗಂಡ ಚಾಕುವಿನಿಂದ ಮಾಡಿಟ್ಟಿದ್ದ ಗುರುತುಗಳನ್ನು ಹುಡುಕುತ್ತಿದ್ದೇನೆ. ಶತ್ರುವೇನಾದರೂ ಇದ್ದಕ್ಕಿದ್ದ ಹಾಗೆ ದಾಳಿ ಮಾಡಿಯಾನು ಎಂದು ಅವನು ಅಂತಹ ಸಂದರ್ಭಕ್ಕೆ ಎಂದು ಒಂದು ಹೊಸ ರಸ್ತೆ ಮಾಡುವುದಕ್ಕೆಂದು ಈ ಗುರುತುಗಳನ್ನು ಮಾಡಿಟ್ಟಿದ್ದಾನೆ. ಅಂತಹ ಸಂದರ್ಭದಲ್ಲಿ ನಾವು ಹಿಂದಿನಿಂದ ಬಂದು ಶತ್ರುವಿನ ಮೇಲೆ ದಾಳಿ ಮಾಡುವುದು ಸುಲಭವಾಗುತ್ತದೆ.

ಅವಳ ಮಗಳು ಅವಳ ಬೆನ್ನಿನ ಮೇಲೆ ತೂಕಡಿಸುತ್ತಿದ್ದಳು. ನಾನು ಅವಳಿಗೆ 'ನಮ್ಮಿಂದ ನಿನಗೆ, ನಿನ್ನ ಮಗಳಿಗೆ ಬಹಳ ತೊಂದರೆಯಾಯಿತು' ಎಂದೆ.

ಅವಳು ತಲೆಯಲ್ಲಾಡಿಸಿ, ನೀವು ಸ್ವಾತಂತ್ರ್ಯ ಸೈನ್ಯದ ಯೋಧರು. ನನಗಿಂತ, ನನ್ನ ಮಗಳಿಗಿಂತ ಹೆಚ್ಚಿನ ವಿಪತ್ತಿಗೆ ಸಿಕ್ಕಿಹಾಕಿಕೊಂಡಿದ್ದೀರಿ. ಹಳ್ಳಿಯವರ ಕಷ್ಟಗಳಿಗಿಂತ ನಿಮ್ಮ ಸ್ಥಿತಿ ಚಿಂತಾಜನಕವಾಗಿದೆ. ನಾನು, ನನ್ನ ಗಂಡ ಅಂತಹ ಬಲಿದಾನವನ್ನೇನೂ ಮಾಡುತ್ತಿಲ್ಲ. ಜನ ಬಲಿದಾನಕ್ಕೆ ಹೆಚ್ಚು ಹೆಚ್ಚು ಸಿದ್ಧವಾದಾಗ ಮಾತ್ರ ಈ ಲೂಟಿಕೋರರನ್ನು ನಾವು ಕೊನೆಗೊಳಿಸಲು ಸಾಧ್ಯವಾದೀತು.

ಈಗ ನಾವು ಒಂದು ಗುಡ್ಡ ಹತ್ತುತ್ತಿದ್ದೆವು. ಆಕಾಶದ ಛತ್ರಿ ಕೆಳಗಿಳಿದಿರುವ ಹಾಗೆ ಅನಿಸುತ್ತಿತ್ತು. ಒಂದು ದೈವೀಸರ್ಪ ಉದ್ದಕ್ಕೆ ಮಲಗಿರುವ ಹಾಗೆ ಪೂರ್ತಿ ಕಂಪನಿ ಗುಡ್ಡದ ಇಕ್ಕಟ್ಟಾದ ಮಾರ್ಗದಲ್ಲಿ ಹರಡಿಕೊಂಡಿತ್ತು. ವಾಯ್ ಹುವಾ ಕೈಲಿದ್ದ ಬಂದೂಕನ್ನು ನಾನು ಹಿಡಿದುಕೊಂಡು ಬರುವೆನೆಂದು ಅವಳಿಗೆ ಹೇಳಿದೆ.

ಭಾರ ಕಡಿಮೆ ಮಾಡಬಹುದಾಗಿತ್ತು. ಆದರೆ ಆವಳು ತಲೆಯಲ್ಲಾಡಿಸಿ ನಕ್ಕು 'ಬೇಡ, ವಂದನೆಗಳು. ಇದ್ದಕ್ಕಿದ್ದ ಹಾಗೆ ಯಾರಾದರೂ ಲೂಟಿಕೋರರ ಬಂದು ನಮ್ಮ ಮೇಲೆರಗಿದರೆ ನಾನೂ ನನ್ನ ಮಗಳು ಅವನ ಜೊತೆ ಹಲ್ಲಿನಿಂದ ಯುದ್ಧಮಾಡಬೇಕಾ ಗುತ್ತದೆ' ಎಂದಳು.

ಅವಳು ಬೇಗ-ಬೇಗ ನಡೆಯುತ್ತಲೇ ಇದ್ದಳು. ವೇಗವಾಗಿ ಚಲಿಸುವ ಪ್ರಾಣಿಯ ಹಾಗೆ ಅವಳು ಹುಲ್ಲಿನ ಮೇಲೆ ಹೆಜ್ಜೆಗಳನ್ನಿಡುತ್ತಿದ್ದಳು. ಅವಳ ಹೆಜ್ಜೆಗಳ ಜೊತೆ ಹೆಜ್ಜೆ ಹಾಕುವುದೂ ಕೂಡ ನಮಗೆ ಕಷ್ಟವಾಗುತ್ತಿತ್ತು. ವಾಯ್‌ಹುವಾ ನಮಗೆ ಉತ್ಸಾಹ ತುಂಬಿ ಇನ್ನು ಎರಡು ದಿಣ್ಣೆಗಳನ್ನು ಹತ್ತಿಳಿದರೆ ಸಾಕು, ನಾವು ಟಾಕೋಗೆ ಹೋಗಿ ತಲಪುತ್ತೇವೆ. ಈಗ ನಾವು ಬಯಲಿಗೆ ಬರುತ್ತಿದ್ದೇವಾದುದರಿಂದ ಎಚ್ಚರದಿಂದಿರಿ' ಎಂದು ಹೇಳಿದಳು.

ಇದ್ದಕ್ಕಿದ್ದ ಹಾಗೆ ನಾವು ದಕ್ಷಿಣ ಭಾಗದಲ್ಲಿ ಮುಂದುವರಿಯುತ್ತಿರುವಾಗಲೇ, ಮೆಷಿನ್‌ಗನ್‌ನ ಫಾಯರಿಂಗ್‌ನ ಧ್ವನಿ ಕೇಳಿಸಿತು. ಆದಾದನಂತರ ಲಘುವಾಗಿ ಗಲಾಟೆ ಕೂಡ ಆಯಿತು. ನಮ್ಮ ಸೈನ್ಯ ಶತ್ರುಗಳೊಂದಿಗೆ ಯುದ್ಧ ಮಾಡುತ್ತಿದ್ದರೆಂದು ಕಾಣುತ್ತೆ.

ಕಂಪನಿಗೆ ಯುದ್ಧಕ್ಕೆ ಸಿದ್ಧವಾಗುವ ಹಾಗೆ ಹೇಳಿ ನಾನು ಬೇಗ–ಬೇಗ ನಡೆಯು ವಂತೆ ಆಜ್ಞಾಪಿಸಿದೆ. ನಾವು ಒಂದಾದ ಮೇಲೊಂದರಂತೆ ದಿಣ್ಣೆಗಳನ್ನು ಇಳಿಯುತ್ತಾ ಹೋದೆವು. ರಾತ್ರಿಯೆಲ್ಲಾ ನಡೆದಿದ್ದುದರಿಂದ ನಮಗೆಲ್ಲಾ ಬಹಳ ಆಯಾಸವಾಗಿತ್ತು. ಹಾಗಿದ್ದೂ ನಾವು ಆ ಪರಿಸ್ಥಿತಿಯಲ್ಲಿ ಬೇಗ ನಡೆಯದೇ ವಿಧಿಯಿರಲಿಲ್ಲ. 5 ನಿಮಿಷ ತಡಮಾಡಿದ್ದರೂ ಶತ್ರುಗಳು ಆರ್ಧಕಿಲೋಮೀಟರ್ ಮುಂದುವರೆಯಲು ಅವಕಾಶ ವಾಗುತ್ತಿತ್ತು. ನಾನು ಸೇನಾನಕ್ಷೆಯನ್ನು ಸೂಕ್ಷ್ಮವಾಗಿ ನೋಡಿದೆ. 720 ನಂಬರಿನ ಗುಡ್ಡ ನಮ್ಮ ಮುಂದಿತ್ತು. ಶತ್ರುವನ್ನು ತಡೆಯಬೇಕಾದರೆ ಆ ಗುಡ್ಡದ ಶಿಖರ ವನ್ನು ವಶಪಡಿಸಿಕೊಳ್ಳಲೇಬೇಕಾಗಿತ್ತು. ತೋಪುಗಳ ಶಬ್ದ ಹತ್ತಿರದಲ್ಲೇ ಕೇಳಿಸು ತ್ತಿತ್ತು. ಶತ್ರು ಕೂಡ ಮುಂದುವರೆಯುತ್ತಿದ್ದ. ನಾನು ಜೋರಾಗಿ ಕಂಪನಿಗೆ ಆದೇಶ ನೀಡಿದೆ. 'ಕಂಪನಿ ಸಿದ್ಧವಾಗಿ 720 ನಂಬರಿನ ಗುಡ್ಡದ ಕಡೆಗೆ ಡಬಲ್ ಮಾರ್ಚ್ ಮಾಡಿ.' ವಾಯ್‌ಹುವಾಗೆ ಈ ತೆರನಾದ ಯುದ್ಧದ ಆಜ್ಞೆಗಳು ಅನುಭವಕ್ಕೆ ಬಂದಿರಲಿಲ್ಲವೆಂದು ಕಾಣುತ್ತೆ. ಈ ಆಜ್ಞೆ ನೀಡಿದ ಮೇಲೂ ಅವಳು ದಿಗ್ಭ್ರಮಿತಳಾಗಿ ನಿಂತೇ ಇದ್ದಳು. ಸೈನಿಕರೆಲ್ಲಾ ಓಡತೊಡಗಿದಾಗ ಅವಳಿಗೆ ವಿಷಯ ಅರ್ಥವಾಯಿತು. ಅವಳೂ ಓಡಲಾರಂಭಿಸಿದಳು. ಅವಳು ನಗುನಗುತ್ತಾ ಓಡಿ ಪುರುಷರ ಬಳಿ ಬಂದು ಸೇರಿಕೊಂಡಳು. ನಂತರ ಅವರಿಗಿಂತಲೂ ಮುಂದಕ್ಕೆ ಹೋದಳು. ನಾನು ಕಿರುಚಿದ್ದನ್ನು ಕೇಳಿ ಅವಳ ಮಗಳು ಎದ್ದುಬಿಟ್ಟಿದ್ದಳು. ಅವಳು ಬಾಯಲ್ಲಿ ಬೆರಳುಹಾಕಿ ಚೀಪತೊಡಗಿದಳು. ತನ್ನ ಅಮ್ಮನ ಹಿಂದೆ-ಹಿಂದೆ ಓಡಿ ಬರುವ ಸೈನಿಕರನ್ನು ನೋಡಿ ಕೇಕೆಹಾಕಿ ನಕ್ಕಳು.

ವಾಯ್‌ಹುವಾ, ಅವಳ ಮಗಳು ಇಬ್ಬರನ್ನೂ ಸುರಕ್ಷಿತವಾಗಿ ಕೊಂಡೊಯ್ಯುವ ಜವಾಬ್ದಾರಿಯನ್ನು ಹೊತ್ತ ಸೇನಾತುಕಡಿ ಬೆಟ್ಟದಡಿಯಲ್ಲಿ ಒಂದು ಕಡೆ ಕಂದಕವನ್ನು ತೋಡಿತು. ನಾನು ಆ ಯುವತಿಗೆ, 'ನಿನ್ನ ಮಗಳ ಜೊತೆ ಕಂದಕದಲ್ಲಿರು, ಯುದ್ಧ ಕೊನೆಗೊಂಡ ಮೇಲೆ ಅವಾನ್‌ಗೆ ಹಿಂದಿರುಗುವಾಗ ನಿನ್ನನ್ನೂ ನಮ್ಮ ಜೊತೆ ಕೊಂಡೊಯ್ಯುತ್ತೇವೆ. ಈಗಿನ ಹಾಗೇ ಆಗಲೂ ನೀನೇ ನಮಗೆ ಮಾರ್ಗದರ್ಶನ ಮಾಡು. ಆದರೆ ಈ ದಾರಿ ಬೇಡ. ಬೇರೆ ದಾರಿಯಲ್ಲಿ ಕೊಂಡೊಯ್ಯಿ' ಎಂದು ಹೇಳಿದ.

ನನ್ನ ಈ ಸೂಚನೆಗೆ ಮೊದಲು ಅವಳು ಅಂಗೀಕಾರ ನೀಡಿದಳಾದರೂ ಮರುಕ್ಷಣ ಅದನ್ನು ನಿರಾಕರಿಸಿ ಅವಳೆಂದಳು, 'ಈ ಸೈನ್ಯದಲ್ಲಿ ಅಮೆರಿಕನ್ನರೂ ಇರಲೇ ಬೇಕು, ನಾನು ಅವರನ್ನು ನನ್ನ ಬಂದೂಕಕ್ಕೆ ಗುರಿಯಾಗಿಸಿಕೊಳ್ಳಬೇಕು, ಆದ್ದರಿಂದ ನಾನೂ ನಿಮ್ಮ ಜೊತೆಯಲ್ಲೇ ಇರುತ್ತೇನೆ. ನನ್ನ ಗುರಿ ಕೂಡ ಅಂತಹ ದುರ್ಬಲ ವಾಗಿಲ್ಲ. ಬೆಟ್ಟದ ಹಿಂದೆ ಕಂದಕದೊಳಗೆ ಕುಳಿತುಕೊಂಡು ಯುದ್ಧ ಮಾಡುವುದೆಲ್ಲಾ ನನಗೆ ಹಿಡಿಸುವುದಿಲ್ಲ, ನನ್ನ ಉಲ್ಲಾಸ-ಉತ್ಸಾಹ ಮುರುಟಿಹೋಗುತ್ತದೆ. ಆದ್ದರಿಂದ ನಾನು ನಿಮ್ಮಗಳ ಜೊತೆಯಲ್ಲೇ ಇರುತ್ತೇನೆ, ಕ್ರಾಂತಿಕಾರಿ ಮಿತ್ರರೇ, ದಯವಿಟ್ಟು ಬೇಡ ಎಂದು ಹೇಳಬೇಡಿ.'

ತನ್ನ ಮಗಳನ್ನು ಅವಳು ತಟ್ಟಿದಳು.

'ನೋಡಿ, ಎಷ್ಟು ಚೆನ್ನಾಗಿ ಮಲಗಿಕೊಂಡಿದ್ದಾಳೆ' ಎಂದಳು.

ನನ್ನ ರಾಜಕೀಯ ಅಧಿಕಾರಿಯ ಅಭಿಪ್ರಾಯ ಪಡೆಯಲೆಂದು ನಾನು ಆತನ ಕಡೆ ತಿರುಗಿ ನೋಡಿದೆ. ಶತ್ರುಗಳು ಎರಡು ಗುಂಪುಗಳಲ್ಲಿ ಮುಂದುವರಿಯುತ್ತಿದ್ದರು. ಒಂದು ಗುಂಪು ನೇರವಾಗಿ ನಮ್ಮ ಕಡೆಗೇ ಹೊರಟಿತ್ತು. ಮತ್ತೊಂದು ಎಡಗಡೆಗೆ ಮುಂದುವರಿಯುತ್ತಿತ್ತು. ಬೆಟ್ಟದ ತಪ್ಪಲನ್ನು ಅವರು ಈಗಾಗಲೇ ತಲಪಿದ್ದರು. ಅವರ ಬೈಗಳು, ಗಲೀಜು ಮಾತುಗಳೆಲ್ಲಾ ಕೇಳಿಸುತ್ತಿದ್ದವು. ಎಚ್ಚರಿಕೆ ವಹಿಸುವುದಕ್ಕಾಗಿ ಅವರು ಇಳಿಜಾರಿನ ಪ್ರದೇಶಗಳ ಮೇಲೆ ಕೆಲವು ಗುಂಡುಗಳನ್ನು ಹಾರಿಸಿದರು. ನಂತರ ಹರಡಿಹೋಗಿದ್ದ ಗುಂಪುಗಳ ನಡುವೆ ಅಲ್ಲಲ್ಲಿ ಗೂಟದಿಂದ ಇದೀಗ ಬಿಚ್ಚಿದ ಕುರಿಗಳ ಹಾಗೆ ಮುಂದುವರಿದರು. ನಾನು ಸೂಚನೆ ಕೊಟ್ಟೆ. ವಾಯ್ ಹುವಾ ಹತ್ತಿರದಿಂದ ಹೊಡೆಯಲು ಅನುಕೂಲವಾಗುವಂತೆ ಸರಿಯಾಗಿ ಇಟ್ಟುಕೊಂಡಳು.

15 ಮೀಟರ್....ಮತ್ತೊಮ್ಮೆ 10 ಹೀಗೆ ತನ್ನ ಕೋಲ್ಟ್ ಪಿಸ್ತೂಲಿನಿಂದ ಫಾಯರ್ ಮಾಡಿದಳು. ನಂತರ ಅನೇಕ ಮೆಷಿನ್‌ಗನ್‌ಗಳು ಶತ್ರುಗಳ ಎರಡೂ ಕಾಲಮ್‌ಗಳನ್ನು ತಡೆಹಿಡಿಯಲು ಫಾಯರಿಂಗ್ ಮಾಡಿದವು. ಮತ್ತೆ ಪೊದೆಗಳಲ್ಲಿ ಮುಚ್ಚಿಟ್ಟಿದ್ದ ಮೆಷಿನ್‌ಗನ್‌ಗಳು ಶತ್ರುವಿನ ಪೃಷ್ಠಭಾಗವನ್ನು ಚಿಂದಿಮಾಡಿದವು. ಗುಂಡಿನ ಹೊಡೆತಕ್ಕೆ ಶತ್ರುಗಳು ಗಾಯಗೊಂಡ ನಾಯಿಗಳ ಹಾಗೆ ಚೀರಾಡುತ್ತಾ ಕೆಳಗುರುಳುತ್ತಿದ್ದರು. ಎಷ್ಟೋ ಜನ ಓಡಿಹೋದರು.

ಅಷ್ಟರಲ್ಲಿ ಎಡಗಡೆಯ ಕಾಲಂನವರು ಮೆಷಿನ್‌ಗನ್‌ಗಳಿಂದ ನಮ್ಮ ಮೇಲೆ ಗುಂಡಿನ ಸುರಿಮಳೆ ಕರೆದರು. ಖೇಸಾನ್‌ನಿಂದ ತೋಪುಗಳ ನಂ. 720ರ ಬೆಟ್ಟದಿಂದ ಆಕ್ರಮಣ ಶುರುವಾಯಿತು. ಒಂದು ಸಿಡಿಮದ್ದು ನಮ್ಮ ಹತ್ತಿರ ಬಂದು ಸಿಡಿಯಿತು. ಅದರಿಂದ ಮಣ್ಣಿನ ಹೆಂಟೆಗಳು ಗಾಳಿಯಲ್ಲೆಲ್ಲಾ ಹರಡಿಹೋದವು. ಅದರಲ್ಲಿ ಕೆಲವು ವಾಯ್ ಹುವಾ ಬಳಿ ಬಂದು ಬಿದ್ದವು. ಅವಳು ಮಾತ್ರ ಇದರಿಂದೆಲ್ಲಾ ವಿಚಲಿತ ಳಾಗಲೇ ಇಲ್ಲ. ತನ್ನ ಮಗಳನ್ನು ಸಮಾಧಾನಮಾಡುವುದಕ್ಕಾಗಿ ತಟ್ಟಲಾರಂಭಿ ಸಿದಳು.

ಶತ್ರುಗಳು ಈಗ ಪುನಃ ಆಕ್ರಮಣ ಮಾಡಿದರು. ಬೆಟ್ಟದ ತಪ್ಪಲಿನಿಂದ ವಿಚಿತ್ರ ವಾದ ಧ್ವನಿಗಳು ಕೇಳಿಬರತೊಡಗಿದವು. ವಾಯ್ ಹುವಾ ಆ ಕಡೆ ಕಿವಿಗೊಟ್ಟು ಕೇಳಿಸಿ ಕೊಂಡಳು. ಆಗ ಆಕೆ ಮುಖ ವಿಚಿತ್ರವಾದ ಹೊಳಪಿನಿಂದ ಮಿಂಚತೊಡಗಿತು.

'ಸರಿಹೋಯಿತಾ ?' ಎಂದಳು.

ನಾನು ತಲೆ ಅಲ್ಲಾಡಿಸಿದೆ.

ಶತ್ರುವಿನ ತೋಪುಗಳು ನಮ್ಮ ಮೇಲೆ ಮತ್ತೊಮ್ಮೆ ಮಳೆಗರೆದವು. ಅವರ ಭಾರಿ ಮೆಷಿನ್‌ಗನ್‌ಗಳು ನಮ್ಮ ಮೇಲೆ ಆಕ್ರಮಣ ನಡೆಸಿದವು. ಈ ಸಿಡಿಮದ್ದಿನ ಸಿಡಿತಗಳಿಂದ ನಮ್ಮ ಕಂದಕ ಮತ್ತು ಹಳ್ಳದ ನೆಲೆ ನಡುಗುತ್ತಿತ್ತು. ನಮ್ಮ ಜನ ಆಗತಾನೆ ಸಿದ್ಧಪಡಿಸಿದ್ದ ಇನ್ನೊಂದು ಕಂದಕಕ್ಕೆ ನಾನು ವಾಯ್ ಹುವಾನ ಕರೆದು ಕೊಂಡು ಹೊರಟುಹೋದೆ.

ಈಗ ಶತ್ರು ನಮಗೆ ಅತಿ ಹತ್ತಿರದಲ್ಲಿದ್ದ. ಅವರು ಈಗ ತೆವಳಿಕೊಂಡು ಮುಂದೆ ಬರುತ್ತಿದ್ದರು. ಬೆಟ್ಟದ ತಪ್ಪಲಿನಿಂದ ಅಮೇರಿಕನ್ನರು ಅವರಿಗೆ ಹುಕುಂ ನೀಡುತ್ತಿದ್ದರು. ಅವರ ಕೈಗೊಂಬೆಗಳಾದ ಈ ಸೈನಿಕರು ನಮ್ಮ ಎಲ್ಲೆಯನ್ನು ತಲಪಿದ ತಕ್ಷಣ ನಾವು ಅವರ ಮೇಲೆ ಕೈಬಾಂಬುಗಳನ್ನೆಸೆದೆವು. ವಾಯ್ ಹುವಾ ತನ್ನ ಬಂದೂಕದಿಂದ ಫಾಯರಿಂಗ್ ಮಾಡುತ್ತಲೇ ಇದ್ದಳು. ಮೂರು ಜನ ಸೈನಿಕರು ಅವಳ ಕಂದಕಕ್ಕೆ ತೀರ ಹತ್ತಿರ ಬಿದ್ದರು. ಅವರಲ್ಲಿ ಒಬ್ಬನ ಬಳಿ ಹೊಚ್ಚ ಹೊಸದಾದ ಟಾಮಿ ಗನ್ ಬಿದ್ದಿತ್ತು. ಇದು ಕೆಂಪುಪಟ್ಟಿಯ ರೇಂಜರ್ ಆಗಿದ್ದ. ವಾಯ್ ಹುವಾ ಆ ಟಾಮಿಗನ್ ಬಳಿ ಹೋಗಲು ಪ್ರಯತ್ನಿಸಿದಳು. ಆದರೆ ಅವರ ತಲೆಯ ಮೇಲೆ ಗುಂಡುಗಳು ಸರಸರ ಹೋಗುತ್ತಿದ್ದುದರಿಂದ ಅವಳು ಅಲ್ಲೇ ಅದುಮಿಕೊಂಡು ಕುಳಿತು ಕೊಳ್ಳಬೇಕಾಯಿತು.

ಮೂರನೆಯ ಬಾರಿ ದಾಳಿ ಆರಂಭವಾಯಿತು. ಈ ಬಾರಿ ಆಕ್ರಮಣಕಾರರು ಮಗುಚಿ ಮಲಗಿಕೊಂಡು ಜೋರು-ಜೋರಾಗಿ ಕಿರುಚುತ್ತಿದ್ದರು. ಅಮೆರಿಕನ್ನರು ಅವರಿಗೆ ಎಡಪಕ್ಕದಿಂದ ನಮ್ಮ ಮೇಲೆರಗುವಂತೆ ಹುಕುಂ ನೀಡುತ್ತಿದ್ದರೂ ನಮ್ಮ ಎಡಭಾಗದಲ್ಲಿದ್ದ ಕಾಲಂಗೆ ಕೂಡ ಪಕ್ಕದಿಂದ ದಾಳಿಮಾಡಲು ಧೈರ್ಯವಾಗುತ್ತಿರ

ಲಿಲ್ಲ. ಅವರು ತಮ್ಮ ಜಾಗದಲ್ಲಿ ಉರುಳಿಕೊಂಡೇ ರೈಫಲ್‌ನಿಂದ ಗುಂಡು ಹಾರಿಸುತ್ತಿದ್ದರು.

ಈಗ ನಾನು ಆಕ್ರಮಣ ಮಾಡುವಂತೆ ಆಜ್ಞಾಪಿಸಿದೆ. ನಾವು ಎಲ್ಲರೂ ಕಂದಕ ಹಳ್ಳಗಳಿಂದ ಹೊರಕ್ಕೆ ಬಂದೆವು. ವಾಯ್ ಹುವಾ ಸತ್ತುಬಿದ್ದಿದ್ದ ರೇಂಜರ್ ಬಳಿಗೆ ಹಾರಿ ಅವನ ಬಳಿ ಇದ್ದ ಟಾಮಿಗನ್‌ನ್ನು ತೆಗೆದುಕೊಂಡು ಮುಂದಕ್ಕೆ ಓಡಿದಳು. ನಾನು ಅರಚಿಕೊಂಡು ಕಟುವಾಗಿ 'ವಾಯ್ ಹುವಾ, ನಿಂತಿಕೋ' ಎಂದು ತಡೆದೆ.

ಅವಳು 'ನನ್ನ ಹಿಂದೆ ಬನ್ನಿ' ಎಂದು ಪುನಃ ಕಿರುಚಿದಳು. ಮತ್ತು ಸರಿಯಾಗಿ ಗುರಿಪಚ್ಚುತ್ತ ಹೊರಟೇಬಿಟ್ಟಳು. ಈಗ ಶತ್ರುಗಳು ಸೋತುಹೋಗಿದ್ದರು. ಮೇಲೆ ಆಕಾಶದಲ್ಲಿ ಓಲಾಡುತ್ತಿದ್ದ ಅವರ ವಿಮಾನಗಳೂ ಅವರಿಗೆ ಯಾವುದೇ ರೀತಿ ಸಹಾಯ ಮಾಡಲು ಆಗಲಿಲ್ಲ.

ಯುದ್ಧ ಮುಗಿದ ತಕ್ಷಣ ನಮ್ಮ ಕಂಪನಿ ವಾಯ್ ಹುವಾ ಹಿಂದೆ ಕಾಡಿನಲ್ಲಿ ಕಣ್ಮರೆಯಾಯಿತು. ಈ ಬಾರಿ ಅವಳ ಮುಂದಾಳುತನದಲ್ಲಿ ನಾವು ಬೇರೆ ಮಾರ್ಗದಲ್ಲಿ ಮುಂದುವರೆದೆವು. ಶತ್ರುವಿಮಾನಗಳು ನಾವು ಬಂದ ರಸ್ತೆಯಲ್ಲೇ ಹಿಂದಿರುಗಬಹುದೆಂದುಕೊಂಡು ಆ ಮಾರ್ಗದಲ್ಲಿ ಬಿರುಸಾಗಿ ಬಾಂಬಿನ ಮಳೆಗರೆದರು. ಎಲ್ಲಾ ವ್ಯರ್ಥ, ಏನೂ ಪ್ರಯೋಜನವಾಗಲಿಲ್ಲ.

ನಾವು ಮಾರನೆಯ ಜಾವ ಅಮಾನ್ ತಲಪಿದೆವು. ಬಹಳ ಸೊಬಗಿನ, ಚೆನ್ನಾಗಿ ಬೆಳಕಾಗಿತ್ತು. ಮೊದಲಿನ ಹಾಗೆಯೇ ವಾಯ್‌ಹುವಾ ಮುಂದೆ ಇದ್ದಳು. ಊರಿನ ಚಪ್ಪಾಳೆ ತಟ್ಟಿ, ಘೋಷಣೆಗಳನ್ನು ಕೂಗಿ ನಮಗೆ ಅಮೋಘವಾದ ಸ್ವಾಗತನೀಡಿದರು. ಅವರ ಮಧ್ಯೆ ವಾಯ್ ಹುವಾ ಗಂಡ ಕೂಡ ಇದ್ದ. ಆತ ಇದೀಗ ಇನ್ನೊಂದು ಕಡೆ ಹೋರಾಟ ಮುಗಿಸಿ ಹಿಂದಿರುಗಿದ್ದ. ಚಿಕ್ಕ ಹುಡುಗಿ ಅವರಪ್ಪನ ಕಂಕುಳಿಗೆ ಹೋಗಲು ಕೈಗಳನ್ನು ಹರಡಿಕೊಂಡಳು. ವಾಯ್ ಹುವಾ ಅದೇ ಕ್ಷಣ ಟಾಮಿಗನ್‌ನ್ನು ಕೂಗೆ ಕೊಟ್ಟಳು. ಅದು ಈ ಯುದ್ಧದ ವಿಜಯದ ಸಂಕೇತವಾಗಿತ್ತು.

# ಒಂದು ಅಮೂಲ್ಯ ಬಳುವಳಿ

ಮೂಲ : ಡೋರೊಥಿ ಸ್ಟೀವ್‌ಜನ್
ಹಿಂದಿ : ರಾಜೇಂದ್ರ ವೊಹರಾ
ಅನು : ಎಚ್. ವಿ. ರಾಮಚಂದ್ರರಾವ್

ಹೋಹೆಂಗ ಸ್ಥಿರಗತಿಯಲ್ಲಿ ರಿಕ್ಷಾ ನಡೆಸಿದ್ದ. ಅವನ ಬಲಹೀನ ಭುಜಗಳನ್ನು ಬಡಿಯುತ್ತಿದ್ದ. ಅವನ ಕೈಯ ನರಗಳು ಹಗ್ಗದಂತೆ ಉಬ್ಬಿಕೊಂಡಿದ್ದವು. ಆದರೆ ಅವನ ಗಮನ ಅತ್ತ ಇರಲೇ ಇಲ್ಲ. ಕಾರಣ, ಅವನ ಮನಸ್ಸಿನಲ್ಲಿ ಒಂದು ಭಯಂಕರ ಯೋಜನೆ ಸುರಳಿ ಬಿಚ್ಚುತ್ತಿತ್ತು.

ಅವನ ಯೋಜನೆ – ಕನ್ನಹಾಕುವುದು. ಆದರೆ ಇದು ಅವನಿಗೆ ಕನ್ನಹಾಕುವುದು ಅನಿಸುತ್ತಿರಲಿಲ್ಲ. ಏಕೆಂದರೆ ತನ್ನ ರುಗ್ಣ ಮಗುವಿನ ಮುಖದಲ್ಲಿ ಮಂದಹಾಸ ಅರಳಿಸಬೇಕೆಂದು ಅವನು ಹಂಬಲಿಸಿದ್ದ. ಆ ಬಾಲ ಮನಸ್ಸಿನ ಹಂಬಲವನ್ನೂ ಈಡೇರಿಸಿಕೊಡುವ ಇಚ್ಛೆ ಅವನ ನೋವು ತುಂಬಿದ ಜೀವಕ್ಕೆ ಇರಲಿಲ್ಲವೇ ? ಅವನು ರಿಕ್ಷಾ ನಡೆಸುವ ಸರ್ವಸಾಮಾನ್ಯನಾದರೇನಾಯಿತು ? ದೇವತೆಗಳು ಅವನ ಅಂಗವಿಕಲ ಮಗುವಿಗೆ ನೀಡಿದ್ದ ಅಲೌಕಿಕ ಗುಣಗಳನ್ನು ಹಾಳಾಗದಂತೆ ನೋಡಿಕೊಂಡು, ಅವನ್ನು ಬೆಳೆಸುವ ಆಸೆ ಉಳಿದೆಲ್ಲರಂತೆ ಅವನಿಗೂ ಇತ್ತು. ಕೊಳಕು ಪೆನ್ಸಿಲ್ ಹಿಡಿದರೂ, ತನ್ನ ಸೂಕ್ಷ್ಮದೃಷ್ಟಿಯಿಂದ ಜ್ಯೋತಿಷಿಯೊಬ್ಬನ ಮುಖದ ಸುಕ್ಕುಗಳನ್ನೂ, ಅವನ ಮೂಗಿನ ಹೊಳ್ಳೆಯಿಂದ ಇಳಿಬಿದ್ದ ಕೂದಲುಗಳ ಸಮೇತ ಅವನ ಇಡೀ ಚಹರೆಯನ್ನು ಚಾಚೂ ತಪ್ಪದೆ ಕೆಲವೇ ದಟ್ಟ ರೇಖೆಗಳಲ್ಲಿ ಬಿಡಿಸಿಟ್ಟಿರಲಿಲ್ಲವೆ ? ಹಣ್ಣಿನ ಅಂಗಡಿಯಲ್ಲಿನ ಕಲ್ಲಂಗಡಿ ಮತ್ತು ದ್ರಾಕ್ಷಿಯ ಚಿತ್ರಗಳನ್ನು ಎಷ್ಟು ನೈಜವಾಗಿ ಪೈಂಟ್ ಮಾಡಿದ್ದ! ಗಿರಾಕಿಗಳು ಅವನ್ನೇ ನೋಡಿ ಜೊಲ್ಲು ಸುರಿಸುವ ಹಾಗಿತ್ತು. ಅಕ್ಕಪಕ್ಕದವರು ಕೂಡ ಮಗುವಿಗೆ ಒಲಿದಿರುವ ಬೆರಗುಗೊಳಿಸುವಂತಹ ಕಲೆಯನ್ನು ಕಂಡು ಬೆರಳು ಕಚ್ಚುತ್ತಿದ್ದರು. ಆದರೆ ಈಗ ಅವನ ಬಳಿ ಇದ್ದ ಅಗ್ಗದ ಬಣ್ಣ ಕೂಡ ಮುಗಿದುಹೋಗಿತ್ತು. ಹೊಸದಾಗಿ ಬಣ್ಣ ಕೊಳ್ಳಲು ಕಾಸು ಇರಲಿಲ್ಲ. ಮಗು ಬಹಳ ಬೇಜಾರು ಮಾಡಿಕೊಂಡಿತ್ತು. ಅದಕ್ಕೆ ಬಹಳ ದುಃಖವಾಗಿತ್ತು. ಅದು ಕಿಟಕಿಯ ಕಂಬಿಗಳಿಗೆ ಮುಖ ಆನಿಸಿಕೊಂಡು ಶೂನ್ಯದತ್ತ ನೋಡುತ್ತಾ ಕೋಣೆ

ಯೊಳಗೆ ಕೂತಿರುತ್ತಿತ್ತು. ಅವನ ಮುದುಡಿದ ಮನಸ್ಸನ್ನು ಮತ್ತು ಮುಖದ ಮುಗುಳ್ನಗೆಯನ್ನು ಅವನ ಗೆಳೆಯರಾದ ರೆಡಿ ಜನರ ಧ್ವನಿಗಳೂ ಅರಳಿಸಲಾರ ದಾಗಿದ್ದವು.

ಕಾರುಗಳ ಕಿವಿಗಡಿಚಿಕ್ಕುವ ಹಾರ್ನನ್ನು ಕೇಳಿ ಇದ್ದಕ್ಕಿದ್ದಂತೆ ತನ್ನ ಚಿಂತನ ಪ್ರಪಂಚದಿಂದ ಬೆಚ್ಚಿ ಹೊರಬಿದ್ದಾಗ ಹಸಿರು ದೀಪ ಅಂಟಿ ಈಗಾಗಲೇ ಬಹಳ ಹೊತ್ತಾಗಿ ಹೋಗಿದ್ದರೂ ಚೌಕದ ಹತ್ತಿರ ನಿಂತೇ ಇದ್ದೇನೆ ಎಂಬ ಪರಿವೆ ಹೋಹೆಂಗಗೆ ಬಂದಿತ್ತು. ಈಗ ಅವನು ತನ್ನ ಗಮನವನ್ನೆಲ್ಲಾ ತನ್ನ ಕೆಲಸದತ್ತ ಹರಿಸಿ ಪ್ರಯಾಣಿಕರನ್ನು ಅವರವರ ತಾಣಕ್ಕೆ ತಲುಪಿಸಿದ ಮೇಲೆ ಅವನು ತನ್ನ ಯೋಜನೆಯ ಬಗ್ಗೆ ಮತ್ತೆ ಧ್ಯಾನ ಹರಿಸಿದ್ದ.

ಅವನು ಹಾಕಿದ ಯೋಜನೆ ಅಂದರೆ – ಮೈನ್ ರೋಡಿನಲ್ಲಿ ಒಂದು ಪೈಂಟಿಂಗ್ ಗಳ ಅಂಗಡಿ ಇತ್ತು. ಅದರಲ್ಲಿ ಕಿಟಕಿಯಲ್ಲಿ ಕಾಣುವ ಹಾಗೆ ಒಂದು ಪೈಂಟ್‌ಬಾಕ್ಸ್ ಇಡಲಾಗಿತ್ತು. ಇಂತಹ ಸುಂದರ ಪೈಂಟ್‌ಬಾಕ್ಸನ್ನು ಅವನು ಎಂದೂ ಕಂಡಿರಲಿಲ್ಲ. ಪೈಂಟ್‌ನ ಚೌಕಾಕಾರದ ಖಾನೆಗಳು, ಪೈಂಟ್ ಟ್ಯೂಬ್‌ಗಳು ಮತ್ತು ನವಿರಾದ ಕೂದಲುಳ್ಳ ಬ್ರಷ್, ಒಂದು ತೆಳುವಾದ ಕಲಾತ್ಮಕ ಚಾಕು ಮತ್ತು ಒಳ್ಳೆಯ ಕಲಾ ಕಾರನು ಬಣ್ಣ ಬೆರಸಲು ಉಪಯೋಗಕ್ಕೆ ಬರುವ ಒಂದು ಮಣೆ ಇವೆಲ್ಲಾ ಅದರಲ್ಲಿ ದ್ದವು. ಎಷ್ಟು ಚೆನ್ನಾಗಿತ್ತು ಆ ಪೈಂಟ್‌ಬಾಕ್ಸ್ ಅಂದರೆ ಹೋಹೆಂಗೆಗೆ ಅದನ್ನು ಕದಿಯುವ ಮನಸ್ಸಾಯಿತು. ಬಟ್ಟೆಯಲ್ಲಿ ಅವಚಿ ಇಟ್ಟಿದ್ದ ಕಲ್ಲೊಂದನ್ನು ಒಗೆದು ಆ ಷೋಕೇಸಿನ ಗಾಜನ್ನು ರಾತ್ರಿಯೇ ಒಡೆಯುವುದು ಮತ್ತು ಆ ಪೈಂಟ್‌ಬಾಕ್ಸ್ ಅನ್ನು ಹಾರಿಸುವುದು ಎಂದು ಯೋಜನೆ ಹಾಕಿದ್ದ. ಆ ಕಲ್ಲು ಈಗಲೂ ರಿಕ್ಷಾದ ಒಳಗೆ ಅಡಗಿ ಕುಳಿತಿತ್ತು. ಈಗ ಅವನು ಕತ್ತಲು ಆವರಿಸಿಕೊಂಡು ಜನಸಂಚಾರ ನಿಂತುಹೋಗುವುದನ್ನೇ ಕಾಯುತ್ತಿದ್ದ.

* * *

ಚರ್ಚಿನ ಗಂಟೆ ಹನ್ನೆರಡು ಬಾರಿಸಿತು. ಜನಗಳು ರಸ್ತೆಗಳನ್ನು ಖಾಲಿ ಯಾಗಿಸಿ ಮನೆಯ ದಾರಿ ಹಿಡಿದಿದ್ದರು. ಚಿತ್ರಮಂದಿರಗಳು ಬಾಗಿಲು ಮುಚ್ಚಿ ದೀಪ ಆರಿಸಿದ್ದವು. ಹೋಹೆಂಗ ಬಲು ಎಚ್ಚರದಿಂದ ಒಂದು ಬಾರಿ ಎಲ್ಲವನ್ನೂ ನಿರೀಕ್ಷಿಸಿ ಕೊಂಡ. ಸಮೀಪದಲ್ಲೇ ಮೋಚಿಯ ಅಂಗಡಿ ಒಂದರ ಬಳಿ ತನ್ನ ರಿಕ್ಷಾ ನಿಲ್ಲಿಸಿದ. ಅಂಗಡಿಯಿಂದ ಮಾಲು ಹಾರಿಸಿ, ಗಲ್ಲಿ ಬಿದ್ದು ಜನರ ಕಣ್ಣಿಗೆ ಬೀಳುವ ಮೊದಲೇ ರಿಕ್ಷಾ ಓಡಿಸಿಕೊಂಡು ಓಡಿಬಿಡಬಹುದೆಂದು ಅಂದಾಜು ಹಾಕಿಕೊಂಡಿದ್ದ.

ಗಲ್ಲಿಯಲ್ಲಿ ಜನವಿಲ್ಲದಾದಾಗ ಅಲ್ಲೇ ಒಂದು ಕಡೆಗೆ ರಿಕ್ಷಾ ನಿಲ್ಲಿಸಿದ. ಅಲ್ಲಿಂದ ಕ್ಷಣಮಾತ್ರದಲ್ಲಿ ರಿಕ್ಷಾ ಓಡಿಸಿಕೊಂಡು ಹೋಗಬಹುದೆಂದು ಅವನಿಗೆ ಅನಿಸಿತು. ಬಣ್ಣ ಕೆಟ್ಟ ನೀಲಿ ಬಟ್ಟೆಯ ಒಳಗಿನಿಂದ ಕಲ್ಲನ್ನು ಹೊರತೆಗೆದ. ಈಗ ಅದನ್ನು ಬಳಸಿ

ಗಾಜನ್ನು ಒಡೆಯುವ ವೇಳೆ ಸನ್ನಿಹಿತವಾದಾಗ ಕೈ ನಡಗುತ್ತಿದೆ ಎನಿಸಿತು. ತಣ್ಣಗೆ ಮೈ ಬೆವರಿತು. ರಾತ್ರಿಯ ಚಳಿಯಲ್ಲಿ ಅವನ ಹಣೆಯಿಂದ ಬೆವರಿಳಿಯಿತು. ಅವನು ನಿಧಾನವಾಗಿ ಹೆಜ್ಜೆ ಇಡುತ್ತಾ ಅಂಗಡಿಯತ್ತ ಸಾಗಿದ. ಕಾಲುಗಳು ಜಡವಾಗಿವೆ ಅನಿಸಿತು.

ಅಂಗಡಿಯ ಹತ್ತಿರ ಯಾರೂ ಇರಲಿಲ್ಲ. ಕಲ್ಲನ್ನು ಗಟ್ಟಿಯಾಗಿ ಅದುಮಿ ಹಿಡಿದು ಮೋಚಿಯ ಅಂಗಡಿಯ ಮುಂದಿನಿಂದ ಹಾದು ಮುಂದೆ ಬಂದ. ಈಗಂತೂ ಅವನು ಆರ್ಟ್ ಅಂಗಡಿಯ ಮುಂದೆಯೇ ಬಂದು ನಿಂತಿದ್ದ. ಪೈಂಟ್‌ಬಾಕ್ಸ್ ವಿದ್ಯುತ್ ಪ್ರಕಾಶದ ಹೊಳಪಿನಲ್ಲಿ ನಗುತ್ತಿತ್ತು. ಅವನು ಕಲ್ಲನ್ನು ಬಲವಾಗಿ ಹಿಡಿದ. ಅವನ ಬಲಗೈಯ ಮಾಂಸಖಂಡಗಳು ಉಬ್ಬಿದವು. ಕಲ್ಲು ಬೀರಲೆಂದು ಕೈಯನ್ನು ಹಿಂದಕ್ಕೆ ಮಾಡಿದ. ಆದರೆ ಅವನು ಎಸೆಯಲಾರದೆ ಹೋದ. ಅವನ ಬಾಯಿ ದ್ರವ ಒಣಗಿತ್ತು. ಉಸಿರು ಕಟ್ಟಿದಂತಾಯಿತು. ಅವನ ಬಾಹುಗಳು ಅವನ ಮನದಾಜ್ಞೆಯನ್ನು ಧಿಕ್ಕರಿಸಿದವು. ಇದ್ದಕ್ಕಿದ್ದಂತೆ ಅಗ್ನಿಶಾಮಕವಾಹನದ ಇಂಜನ್ನಿನ ಸೈರನ್ ಕಿರುಚಿತು. ಜನಗಳು ಗಲಿಬಿಲಿಗೊಂಡು ಎಚ್ಚರಗೊಂಡರು. ಬಾಗಿಲಿಂದ ತಲೆ ಹೊರಗಿಟ್ಟು 'ಏನಾಯಿತು ? ಏನಾಯಿತು ?' ಎಂದು ಕೇಳತೊಡಗಿದರು. ಈ ಎಲ್ಲ ಗದ್ದಲ ಗಲಭೆಗಳಲ್ಲಿ ಹೋಹೆಂಗೆಯ ಬಾಯಿಂದ ಹೊರಬಂದಿದ್ದ ಬಿಕ್ಕಳಿಕೆ ಮುಳುಗಿಹೋಯಿತು. ಸತ್ತಂತಿದ್ದ ಬೆರಳುಗಳಲ್ಲಿ ಕಲ್ಲನ್ನು ಹಿಡಿದು ಅವನು ಅಲ್ಲಿಂದ ಮಾಯವಾದ.

ಅವನು ಸೋತಿದ್ದ. ಅವನಷ್ಟೇ ಅಲ್ಲ, ಅವನ ಮಗುವಿಗೂ ಅವನು ಸೋಲನ್ನು ನೀಡಿದ್ದ. ಅವನೊಳಗಿಂದಲೇ ಯಾರೋ ಅವನನ್ನು ಅವನ ಪ್ರಯತ್ನದ ಕಡೆಯ ಕ್ಷಣಗಳಲ್ಲಿ ಹಿಡಿದುಬಿಟ್ಟಿದ್ದರು. ತಲೆಬಾಗಿಸಿಕೊಂಡು ಭಾರವಾದ ಮನಸ್ಸಿನಿಂದ ರಿಕ್ಷಾ ನಡೆಸಿಕೊಂಡು ಮನೆಯತ್ತ ನಡೆದಿದ್ದ. ಇದ್ದಕ್ಕಿದ್ದಂತೆ ಒಂದು ವಿಚಾರ ನೀಲಕಂಠದಂತೆ ಅವನ ತಲೆಯಲ್ಲಿ ಗರಿಬಿಚ್ಚಿತ್ತು. ಇದು ಸೋಲಲ್ಲ ; ಗೆಲವು. ಕಳ್ಳನಾಗಲು ಹೊರಟಿದ್ದ. ಆದರೆ ಅವನ ಅಂತರಾತ್ಮ ಅದಕ್ಕೆ ಆಸ್ಪದ ಕೊಡಲಿಲ್ಲ. ದೇವತೆಗಳು ಅವನತ್ತ ನೋಡುತ್ತಿದ್ದಾರೆ. ಇದು ನಿಜವಾಗಿ ಒಂದು ಒಳ್ಳೇ ಶಕುನವೇ. ಈಗ ಅವನು ಶಾಂತನಾಗಿದ್ದ. ಮಗವಿನ ಬಾಳು ಹೇಗಾಗುವುದೋ ಹಾಗೆ ಹಾಗಾಗುವುದು. ಆದರೆ ಮಗು ಈಗ ತಂದೆಯನ್ನು ಗೌರವ ಭಾವದಿಂದ ಕಾಣುವುದು.

'ರೆಡಿ'ಗಳ ಮನೆಯ ದೀಪಗಳು ಬೀದಿಗೆ ಬೆಳಕನ್ನು ಚೆಲ್ಲುತ್ತಿದ್ದವು. ಅವನಿಗೆ ಸ್ವಾಗತ ನೀಡಲು ಬಯಸಿದವೇ ? ಒಂದಿಬ್ಬರು 'ರೆಡಿ'ಗಳು 'ಇಷ್ಟು ಹೊತ್ತು ಏಕಾಯಿತು' ಅಂತ ಕೇಳಿದರು. 'ನಿನ್ನ ಹೆಂಡತಿ ನಿನಗೆ ಸರಿಯಾಗಿ ಪೂಜೆ ಮಾಡುತ್ತಾಳೆ' ಎಂದು ತಮಾಷೆ ಮಾಡಿದರು. ಅವನು ತನ್ನ ಮನೆಯ ಕಿಟಕಿಯತ್ತ ನೋಡಿದ. ಮಗು ಅವನನ್ನೇ ಕಾದು ಕುಳಿತಿರುವುವನ್ನು ಕಂಡ. ಅದು ಕಿಟಕಿಯ ಕಂಬಿಯಿಂದ ಕೈ ಹೊರಚಾಚಿ, 'ಬೇಗ ಬಾ' ಎಂದು ಕರೆಯುತ್ತಿದೆ ಎನಿಸಿತು.

ಅದು ಖುಷಿಯಲ್ಲಿ ಏರು ದನಿಯಲ್ಲಿ ಕೂಗಿತು. "ಪಪ್ಪಾ, ಪಪ್ಪಾ, ಏಕೆ ಇಷ್ಟು ಹೊತ್ತು ಮಾಡಿದೆ ? ಬೇಗ ಒಳಗೆ ಬಾ."

ಹೋಹೆಂಗ ರಿಕ್ಷಾ ಇಂದ ಕೆಳಕ್ಕೆ ಜಿಗಿದ. ಪಾಚಿಕಟ್ಟಿದ ಹಲಗೆಯ ಇಕ್ಕಟ್ಟಾದ ಪಾವಟಿಗೆಗಳನ್ನು ದಡದಡಿಸಿ ಏರಿದ. ಕೋಣೆಯಲ್ಲಿ ಮಸಿಕಟ್ಟಿದ ಲ್ಯಾಂಪ್ ಉರಿಯುತ್ತಿತ್ತು. ಅದರ ಮಂದ ಬೆಳಕು ಮಗುವಿನ ಹೊಳಪು ಕಣ್ಣುಗಳ ಮೇಲೆ, ಅದರ ಮುಖದಲ್ಲಿ ಅರಳಿದ್ದ ಮಂದಹಾಸದ ಮೇಲೆ ಬಿದ್ದಿತ್ತು.

"ಏನು? ಏನಾಯಿತು?" ಎಂದು ಗಾಬರಿಯಿಂದ ಕೇಳಿದ. ಅವನ ನೆರೆಯವರು ಮತ್ತು 'ರೆಡಿ'ಗಳು ಕೋಣೆ ಹಾಗೂ ಪಾವಟಿಗಳನ್ನು ಆವರಿಸಿ ಗುಂಪು ಕಟ್ಟಿದ್ದರು.

"ಓಹೋ, ಪಪ್ಪಾ, ಎಂತಹ ಚಮತ್ಕಾರ ಗೊತ್ತಾ ? ನೀನೇ ನೋಡು ಬಾ" ಅಂತ ಹೇಳಿ ಮಗು ಬೆನ್ನು ಹಿಂದೆ ಇಟ್ಟುಕೊಂಡಿದ್ದ ಕೈಯನ್ನು ಮುಂದೆ ಮಾಡಿತು. ಅದರಲ್ಲಿ ಬಲು ಸುಂದರವಾದ ಪೈಂಟ್‌ಬಾಕ್ಸ್ ಇತ್ತು. ಅದು ಅವನು ಅಂಗಡಿಯ ಶೋ ಕೇಸಿನಲ್ಲಿ ನೋಡಿದ್ದಂತೆಯೇ ಇತ್ತು.

* * *

ಹೋಹೆಂಗನ ಕಣ್ಣುಗಳು ಅದರಲ್ಲಿ ಕೀಲಿಸಿಹೋಗಿದ್ದವು. ಅವನ ಬಾಯಿಂದ ಮಾತು ಹೊರಡದಿದ್ದರೂ ಅದಕ್ಕೆ ಚಾಲನೆ ಬಂದಿತ್ತು. ಅಲ್ಲಿ ಇದ್ದ ಜನರು ನಗುತ್ತಿದ್ದರು. ಅವನ ಹೆಂಡತಿ ಮಗುವಿನ ಮೇಲೆ ಬಾಗಿ ಅದನ್ನು ಮುದ್ದು ಮಾಡುತ್ತಿದ್ದಳು. ಅವನ ಕಣ್ಣಿಂದ ಉದುರಿದ ಹನಿಗಳು ಆ ಮಗುವಿನ ಮುಖವನ್ನು ನೆನಸಿದ್ದವು. ಮಗು ಜನಗಳತ್ತ ಬೊಟ್ಟು ಮಾಡಿ ತೋರಿಸಿ ಜೋರಾದ ದನಿಯಲ್ಲಿ ಹೇಳಿತು –

"ಇವರೆಲ್ಲಾ ಸೇರಿ ನನಗೆ ಕೊಟ್ಟರು ಪಪ್ಪಾ, ಇವರೆಲ್ಲಾ ಸೇರಿ ಇದನ್ನು ಕೊಂಡು ತಂದಿದ್ದಾರೆ." ಹೋಹೆಂಗೆಯ ಕಣ್ಣಿಂದ ಆನಂದ ನೀರಾಗಿ ಹರಿಯಿತು. ಅದು ಅವನ ಮುಖದ ಧೂಳಿನಲ್ಲಿ ಗೆರೆಗಳನ್ನು ಬರೆಯಿತು. ಅವನು ಎಷ್ಟು ಅತ್ತನೋ ಗೆಳೆಯರು ಅಷ್ಟೇ ನಕ್ಕರು ; ಚಪ್ಪಾಳೆ ಇಕ್ಕಿದರು.

ಆದರೆ ಮಗುವಿನ ಮುಖ ಶಾಂತವಾಗಿ ಅದು ಪೈಂಟ್‌ಬಾಕ್ಸಿನ ಮೇಲೆ ಬಾಗಿತ್ತು. ತನ್ನ ನೀಳಾದ ಸಂವೇದನಶೀಲ ಬೆರಳುಗಳಿಂದ ಅದನ್ನು ನೇವರಿಸುತ್ತಿತ್ತು. ಇವೆಲ್ಲವನ್ನು ಕಂಡು ದೇವತೆಗಳು ಎಲ್ಲರಿಗಿಂತ ಮಿಗಿಲಾಗಿ ನಿಜವಾಗಿ ನಕ್ಕರು.

# ಜನತೆಯ ನಡುವೆ

ಅನು : ಟಿ. ವಿ. ಅನ್ನಪೂರ್ಣಮ್ಮ

ಕೆಲಸ ಕಲಿಯಲು ಚಪ್ಪಲಿ ಅಂಗಡಿಯಲ್ಲಿ ನನ್ನನ್ನು ನಮ್ಮ ತಾತ ಬಿಟ್ಟು ಹೋದರು. ನನ್ನ ಮಾವನ ಮಗ ಸಾಶಾ ಸಹ ಅಲ್ಲೇ ಕೆಲಸ ಮಾಡುತ್ತಿದ್ದ. ಒಂದು ದಿನ ಚರ್ಚಿನ ಕಾವಲುಗಾರ ತನ್ನ ಮುದಿತನದ ಬಗ್ಗೆ ಗೋಳಾಡುತ್ತಾ, ಅಂಗಡಿಯಿಂದ ಒಂದು ಕಂಬಳಿ ಕದ್ದು ತಂದುಕೊಡಲು ನನಗೆ ಹೇಳಿದ. ನಾನು ಒಪ್ಪಿಕೊಂಡೆ. ಆಗ ಅವನು–ನೀನು ಅಂಗಡಿಯಿಂದ ಸಾಮಾನನ್ನು ಕದ್ದು ನನಗೆ ಮಾರುತ್ತೀಯೆಂದು ನಿನ್ನ ಯಜಮಾನನಿಗೆ ಹೇಳಿದರೆ-ಎಂದ. ಆಗ ನಾನು ಗಾಬರಿಗೊಂಡೆ. ಆಗ ಅವನು "ತಮಾಷೆಗಾಗಿ ಹೇಳಿದೆ, ಆದರೆ ನೀನು ಯಾರ ಮಾತಿಗೂ ಮರುಳಾಗಬೇಡ" ಎಂದ. ಮ್ಯಾನೇಜರ್ ಮಾಡುತ್ತಿದ್ದ ಚಪ್ಪಲಿಯ ಕಳುವಿಗೆ, ಸಾಶಾ ತನ್ನ ಸಹಕಾರವನ್ನು ಕೊಡುತ್ತಿದ್ದ ಮತ್ತು ಈ ವಿಷಯದಲ್ಲಿ ನಿರ್ಲಕ್ಷ್ಯದಿಂದ ಇರುತ್ತಿದ್ದ.

ಒಂದು ದಿನ ಸಾಶಾ ನನ್ನನ್ನು ತೋಟಕ್ಕೆ ಕರೆದುಕೊಂಡು ಹೋದ. ಒಂದು ಮರದ ಕೆಳಗೆ ಭೂಮಿಯನ್ನು ಅಗೆದಾಗ ಒಂದು ಚಿಕ್ಕ ಹೆಣದ ಪೆಟ್ಟಿಗೆ ಕಾಣಿಸಿಕೊಂಡಿತು. ಹೆಣದ ಪೆಟ್ಟಿಗೆಯಲ್ಲಿ ಪಕ್ಷಿಯ ಕೊಕ್ಕು ಮತ್ತು ಬಲವಾದ ಪಂಜ ಕಾಣಿಸಿತು. ಸಾಶಾ ಹೇಳಿದ "ಯಾರಿಗೆ ಗೊತ್ತು ? ಈ ಶವ ಒಂದು ಪವಿತ್ರ ಸ್ಮಾರಕವಾಗಿ ಬದಲಾಗುವಂತಹ ಚಮತ್ಕಾರ ನಡೆದರೂ ನಡೆಯಬಹುದು." ಪಕ್ಷಿಯನ್ನು ಅದುಮಿ ಕೊಲ್ಲಲಾಗಿತ್ತು. "ಇದು ನಿನಗೆ ಇಷ್ಟವಾಗಲಿಲ್ಲವೇ"–ಎಂದು ಅವನು ಕೇಳಿದ. ಪಕ್ಷಿಯ ಮೇಲೆ ನನಗೆ ಕರುಣೆ ಬರುತ್ತದೆಂದು ನಾನು ಹೇಳಿದೆ. ನಾನು ಅವನನ್ನು ನೋಡಿ ಹೊಟ್ಟೆಕಿಚ್ಚುಪಡುತ್ತೇನೆಂದು ಅವನು ಕಿರುಚಿ ಹೇಳಿದ. ಈ ವಿಷಯಕ್ಕಾಗಿ ನಾವು ಪರಸ್ಪರ ಕಾದಾಡತೊಡಗಿದೆವು. ನಾನು ಅವನನ್ನು ಬೀಳಿಸಿಬಿಟ್ಟೆ. ಯಜಮಾನನಿಗೆ ಹೇಳಿ ನನ್ನನ್ನು ಕೆಲಸದಿಂದ ತೆಗೆಸಿಹಾಕುವುದಾಗಿ ಅವನು

ಹೇಳಿದ. ನಾನು ಅವನ ಪಕ್ಷಿಯ ಸಮಾಧಿಯನ್ನು ಅಗೆದು ಎಸೆದೆ. "ಮುಂದೆ ಏನಾಗುವುದೋ ಕಾದುನೋಡು" ಎಂದ. ಮಾರನೆಯ ದಿನ ಚಪ್ಪಲಿಯನ್ನು ಪಾಲೀಷ್ ಮಾಡುವಾಗ ಪಿನ್ ಕೈಗೆ ಚುಚ್ಚಿಕೊಂಡಿತು. ಪುನಃ ಸಾಯಂಕಾಲ ಸಾರು ಕುದಿಯುವಾಗ ಕೈಗಳ ಮೇಲೆ ಬಿದ್ದಿತು. ನನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಲಾಯಿತು. ಇದೆಲ್ಲಾ ಅವನ ಗೋಳಿನ ಪರಿಣಾಮವೆನಿಸಿತು. ಅಜ್ಜಿ ನನ್ನನ್ನು ಮನೆಗೆ ಕರೆದುಕೊಂಡು ಹೋಗುವವರೆಗೂ, ಆಸ್ಪತ್ರೆಯಲ್ಲೂ ನಾನು ಹೆದರುತ್ತಲೇ ಇದ್ದೆ.

ತಾತನು ತನ್ನ ಸಂಪತ್ತನ್ನೆಲ್ಲಾ ತನ್ನ ಧರ್ಮಪುತ್ರನಿಗೆ ಕೊಟ್ಟುಬಿಟ್ಟನು. ತಮ್ಮ ಹೆಸರಿನಲ್ಲಿ ಅವನು ವ್ಯಾಪಾರ ಮಾಡಲಿ ಎಂದು ಅವರ ಅನಿಸಿಕೆ. ಆದರೆ ಅವರು ಮೋಸಹೋದರು. ಆದ್ದರಿಂದ ಯಾವಾಗಲೂ ಸಿಡುಕುತ್ತಿದ್ದರು. ಆ ಓಣಿಯಲ್ಲಿ ಚೆಸ್ನಾಕೋವ್ ಕುಟುಂಬದಲ್ಲಿ, ಒಬ್ಬ ಸುಂದರಿ, ಆದರೆ ಕುಂಟಿಯಾದ ಹುಡುಗಿ ಇದ್ದಳು. ಅವಳನ್ನು ಪದೇಪದೇ ಭೇಟಿ ಮಾಡಬೇಕೆಂಬ ಆಸೆ, ಸ್ವಲ್ಪ ದಿನಗಳಲ್ಲೇ ಪ್ರಬಲವಾಗುತ್ತಾಹೋಯಿತು. ಅವಳು ಒಂದು ಮೂಲೆಯಲ್ಲಿ ಕಥೆ ಪುಸ್ತಕವನ್ನು ಓದಿ ಹೇಳಲು ಪ್ರಾರಂಭಿಸಿದಳು. ಅಜ್ಜಿ ಹೇಳುತ್ತಿದ್ದಳು. "ಹುಡುಗ ಹುಡುಗಿಯರು ಒಬ್ಬರನ್ನೊಬ್ಬರು ಭೇಟಿ ಮಾಡಿದರೆ ಪರವಾಗಿಲ್ಲ. ಆದರೆ ಹುಚ್ಚು ಚೇಷ್ಟೆಗಳನ್ನು ಮಾಡಬಾರದು. ಕಾಸ್ಟ್ರಾಮಾ ಮತ್ತು ಚಸ್ಕಾ ಸಹ ತಮ್ಮ ಸಾಹಸದ ವರ್ಣನೆ ಮಾಡಲು, ಲುದ್ಮಿಲಾಳಲ್ಲಿಗೆ ಹೋಗುತ್ತಿದ್ದರು. ಒಂದು ದಿನ ಸ್ಮಶಾನ ಮತ್ತು ಭೂತಗಳ ಮಾತು ಬಂದಿತು. ಬೆಳಗಿನವರೆಗೆ ಸಮಾಧಿಯಮೇಲೆ ನಿದ್ರಿಸುವವನಿಗೆ ತಾನು ಇಪ್ಪತ್ತು ಕೋಪೆಕ್‌ಗಳನ್ನು ಕೊಡುವುದಾಗಿ ವಾಲ್ಲೋಕನು ಹೇಳಿದ. ನಾನು ಹೇಳಿದೆ "ನನಗೆ ಒಂದು ರೂಬಲ್‌ಕೊಡು. ನಾನು ಹೋಗಲು ಸಿದ್ಧನಿದ್ದೇನೆ! ಅಜ್ಜಿ ರೂಬಲ್ ತೆಗೆದುಕೊಂಡು ಹೇಳಿದಳು. "ಕೋಟನ್ನು ಭುಜದ ಮೇಲೆ ಹಾಕಿಕೊ. ಮತ್ತು ಒಂದು ಕಂಬಳಿಯನ್ನೂ ತೆಗೆದುಕೊ. ಬೆಳಗಾಗುವಾಗ ಛಳಿಯಾಗುತ್ತದೆ". ಹುಲ್ಲಿನಿಂದ ತುಂಬಿದ ಸ್ಮಶಾನ ಕಂದುಬಣ್ಣದ ಕ್ರಾಸುಗಳಿಂದ ತುಂಬಿದ ದಟ್ಟ ಕಾಡಿನಂತೆನಿಸಿತು. ನನಗೆ ಭಯವೇನೋ ಆಗುತ್ತಿತ್ತು. ಆದರೆ ಯಾರಿಗೂ ಹೇಳ ಬೇಡವೆಂದು ಅಜ್ಜಿಗೆ ಹೇಳಿದೆ, ಅಜ್ಜಿ ಹೇಳಿದಳು. "ಪ್ರಪಂಚದಲ್ಲಿ ಪ್ರತಿಯೊಂದು ವಸ್ತುವನ್ನೂ ಸ್ವತಃ ಅನುಭವಿಸಿ ನೋಡಬೇಕು. ಯಾರು ಸ್ವತಃ ಕಲಿಯಲು ಹಿಂದು ಮುಂದು ನೋಡುತ್ತಾರೋ, ಅವರಿಗೆ ಯಾರೂ ಕಲಿಸಲಾರರು". ಸಂಜೆಯ ಹೊತ್ತಿಗೆ ನಾನು ಆ ಓಣಿಯ ಪ್ರಸಿದ್ಧ ವ್ಯಕ್ತಿಯಾಗಿ ಹೋದೆ.

ನನ್ನ ಸಹೋದರ ಕೋಲ್ಯಾ ಸತ್ತುಹೋದ. ಅವನನ್ನು ಹೂಳಲು ತನ್ನಲ್ಲಿ ಒಂದು ಬಿಡಿಗಾಸೂ ಇಲ್ಲವೆಂದು ತಾತ ಹೇಳಿದ. ಕೋಲ್ಯಾನನ್ನು ಹೂಳುವವರೆಗೆ ನಾನು ತಾಯಿಯ ಸಮಾಧಿಯ ಹತ್ತಿರ ಕುಳಿತಿದ್ದೆ.

ಒಂದು ದಿನ ಅಜ್ಜಿ ಮತ್ತು ತಾತನ ಸಂಗಡ ಕಾಡಿಗೆ ಹೋದೆ. ಭೂಮಿಪ್ರವಾಹ ದಿಂದ ಮುಳುಗಿದಾಗ, ಮಾತೆ ಮರಿಯಮ್ಮಳು, ಮುಚ್ಚಿಟ್ಟಿದ್ದ ಬೀಜಗಳಿಂದ ಭೂಮಿ ಯನ್ನು ಹಸುರಾಗಿಸಿದಳೆಂದು ಅಜ್ಜಿ ಹೇಳುತ್ತಿದ್ದಳು. "ಮಾತೆ ಮರಿಯಮ್ಮಳು ಪ್ರವಾಹ ಬಂದ ಬಹಳ ದಿನಗಳ ನಂತರ ಹುಟ್ಟಿದ್ದಳಲ್ಲವೇ"–ಎಂದು ನಾನು ಕೇಳಿದೆ. 'ಶಾಲೆಯಲ್ಲಿ ಪ್ರಪಂಚದಲ್ಲಿರುವ ಸುಳ್ಳು ವಿಷಯಗಳನ್ನೇ ಕಲಿಸುತ್ತಾರೆ'–ಎಂದು ಅಜ್ಜಿ ಹೇಳಿದಳು. 'ಏಸುಕ್ರಿಸ್ತ ನನಗಿಂತ ಕೇವಲ ಒಂದು ವರ್ಷ ದೊಡ್ಡವರಾಗಿದ್ದ ರಲ್ಲ' ಎಂದು ನಾನು ಯೋಚಿಸುತ್ತಿದ್ದೆ. ಈ ವಿಚಾರಗಳಲ್ಲಿ ಮುಳುಗಿದ ನಾನು ಒಂದು ಹಳ್ಳದಲ್ಲಿ ಬಿದ್ದೆ. ಅಜ್ಜಿ ನನ್ನನ್ನು ಹೊರಕ್ಕೆ ಎತ್ತಿದಳು. ಅದು ಹಳ್ಳವಲ್ಲ, ಕರಡಿಯ ಗುಹೆಯಾಗಿತ್ತು. ನಾನು ಮರದ ಮೇಲೆ ಹತ್ತಿ ಅಳಿಲಿನ ಬಾಲವನ್ನು ಎಳೆಯುತ್ತಿದ್ದೆ. ಆಗ ಶಿಕಾರಿಯು ಬಂದೂಕದಿಂದ ಎಂಬತ್ತೆ ಇಪ್ಪತ್ತೇಳು ಏಟುಗಳು ನನ್ನ ಶರೀರವನ್ನು ಹೊಕ್ಕವು. ನಂತರ ಅಜ್ಜಿ ಸೂಜಿಯಿಂದ ಕೆದಕಿಕೆದಕಿ ಮುಳ್ಳು ಗಳನ್ನು ತೆಗೆದಳು. ನಾನು 'ಅಯ್ಯೋ' ಎಂದು ಸಹ ಹೇಳಲಿಲ್ಲ. ಅಜ್ಜಿಯು ಹೇಳಿ ದಳು. "ಯಾರು ನೋವನ್ನು ಸಹಿಸಿಕೊಳ್ಳುವ ಶಕ್ತಿ ಪಡೆದಿದ್ದಾರೋ ಅವರು ಯುದ್ಧ ವನ್ನೇ ಗೆದ್ದಂತೆ."

ಮತ್ತೆ ತಾತ ನಕ್ಷೆ ಬರೆಯುವ ಕಲೆಯನ್ನು ಕಲಿಯಲು, ನನ್ನನ್ನು ಅಜ್ಜಿಯ ಸಹೋದರಿಯ ಮಗನಲ್ಲಿಗೆ ಕಳುಹಿಸಲು ನಿಶ್ಚಯಿಸಿದರು. ಲುದಾಮಿಲಾ ಸಹ ನಗರಕ್ಕೆ ಹೊರಡುತ್ತಿದ್ದಳು. ಕಾಲು ಕತ್ತರಿಸುವುದರಿಂದ, ಅವಳು ಗುಣಮುಖಳಾಗು ವಳು ಎಂಬುದು ಅವಳ ತಂದೆಯ ಅಭಿಪ್ರಾಯವಾಗಿತ್ತು.

ನಾನು ಮತ್ತೆ ನಗರದಲ್ಲಿ ಹೋಗಿ ಇರಲಾರಂಭಿಸಿದೆ. ನನ್ನ ಅಜ್ಜಿಯ ಸಹೋ ದರಿ ಸಿಡುಕಿ ಮತ್ತು ಜಗಳಗಂಟಿಯಾಗಿದ್ದಳು. ಜಗಳದ ಕಾರಣದಿಂದ ಮನೆಯಲ್ಲಿ ಅಶಾಂತಿಯಿತ್ತು. ಒಮ್ಮೆ ಯಜಮಾನನ ಹೆಂಡತಿ ಕೋಪದಿಂದ ಬ್ರೆಡ್ಡನ್ನು ಕತ್ತರಿ ಸುವ ಚಾಕುವನ್ನು ತೆಗೆದುಕೊಂಡು ಕಕ್ಕಸ್ಸಿನೊಳಗೆ ಹೋಗಿ ಒಳಗಿನಿಂದ ಚಿಲಕ ಹಾಕಿಕೊಂಡಳು. ಬಹಳ ಕಷ್ಟಪಟ್ಟು ಬಾಗಿಲು ತೆಗೆದು ಅವಳನ್ನು ಹೊರಕ್ಕೆ ತರ ಲಾಯಿತು. ಯಜಮಾನನ ಪತ್ನಿ ಮತ್ತು ತಾಯಿ ನನ್ನನ್ನು ದೂರುತ್ತಿದ್ದರು. ಯಜಮಾನರು ನನ್ನನ್ನು ಬಯ್ಯುತ್ತಿದ್ದರು. ಒಂದು ದಿನ ಕಂಪಾಸು, ರೂಲುದೊಣ್ಣೆ, ಮತ್ತು ಕಾಗದ ಮುಂತಾದುವನ್ನು ಕೊಟ್ಟು ಬಿಂದುವನ್ನು ಹಾಕಿ ಗೆರೆಗಳನ್ನು ಎಳೆ ಯಲು ಹೇಳಿದರು. ಗೆರೆಗಳು ತಪ್ಪಾಗಿ ಹಾಕಿದ್ದರಿಂದ ಕಾರ್ನಿಸ್, ಛಾವಣಿಗಿಂತ ಎತ್ತರವಾಗಿ ಹೋಯಿತು. ನಾನು ಕಲ್ಪನೆಯಿಂದ ಕಾರ್ನಿಸ್ ಮತ್ತು ಸೂರುಗಳ ಮೇಲೆ ಪಕ್ಷಿಗಳು ಮತ್ತು ಕಾಗೆಗಳನ್ನು ಕೂರಿಸಿದೆ. ನಕ್ಷೆಯನ್ನು ಬರೆಯುವ ನನ್ನ ಕಲೆ ಮುಂದುವರಿಯಲಿಲ್ಲ. ವೃದ್ಧ ಯಜಮಾನಿ ರೇಗಿ ನನ್ನನ್ನು ಹೊಡೆದಳು. ಅಜ್ಜಿಯ ಕೈಕಟ್ಟಿಹೋಗಿತ್ತು. ಇನ್ನೂ ಒಂದೆರಡು ವರ್ಷ ಅಲ್ಲೇ ಇರುವಂತೆ ಅವರು ನನ್ನಿಂದ ಮಾತು ತೆಗೆದುಕೊಂಡರು.

ಕೊನೆಗೆ ವಸಂತದ ದಿನಗಳಲ್ಲಿ ನಾನು ಓಡಿಹೋದೆ. ನನ್ನ ಮುಷ್ಟಿಯಲ್ಲಿ ಇಪ್ಪತ್ತು ಕೋಪೆಕ್‌ಗಳಿದ್ದುವು. ನಾನು ವೋಲ್ಗಾ ನದಿಯ ದಡವನ್ನು ತಲುಪಿದ್ದೆ. ಅಜ್ಜಿಗೆ ಕೊಟ್ಟ ಮಾತನ್ನು ನಡೆಸಲಾರದೆ ಹೋದೆ. ಆದ್ದರಿಂದ ಅಲ್ಲಿ ಹೋಗಲು ಹಿಂದೇಟು ಹಾಕುತ್ತಿದ್ದೆ. ಎರಡು ಮೂರು ದಿನ ನದಿಯ ದಡದಲ್ಲೇ ಕಳೆದೆ. ಘಟ್ಟದ ಕೂಲಿಯವರು ನನಗೆ ಊಟವನ್ನು ಕೊಡುತ್ತಿದ್ದರು. ಮತ್ತು ತಮ್ಮ ಜೊತೆಯಲ್ಲಿ ಮಲಗಿಸಿಕೊಳ್ಳುತ್ತಿದ್ದರು. ನಂತರ ಹಡಗಿನಲ್ಲಿ ತಟ್ಟೆಗಳನ್ನು ತೊಳೆಯುವ ಕೆಲಸ ಸಿಕ್ಕಿತು. ನನ್ನ ಅಜ್ಜಿಯ ಒಪ್ಪಿಗೆಯೂ ಸಿಕ್ಕಿತು. ಅಡಿಗೆಯವನು ಚಹ ಮತ್ತು ಬ್ರೆಡ್ಡಿನ ತುಂಡುಗಳನ್ನು ಕೊಡುತ್ತಲೇ ಕೇಳಿದ. "ಕಳ್ಳತನ ಮಾಡುವುದು ಗೊತ್ತಿದೆಯೋ ? ಪರವಾಗಿಲ್ಲ; ಬೇಗನೇ ಕಲಿತುಕೊಳ್ಳುವೆ."

ಆತುರವಿಲ್ಲದವರು ಮಾತ್ರ ನಮ್ಮ ಹಡಗಿನಲ್ಲಿ ಪಯಣಿಸುತ್ತಿದ್ದರು. ಬೆಳಗ್ಗಿನಿಂದ ರಾತ್ರಿಯವರೆಗೆ ತಿನ್ನುತ್ತಾ, ಕುಡಿಯುತ್ತಾ, ತಿನ್ನಿಸುತ್ತಾ ಬಹಳಷ್ಟು ತಟ್ಟೆಗಳನ್ನು ಎಂಜಲು ಮಾಡುತ್ತಿದ್ದರು. ಅಡಿಗೆಯವನಾದ ಸ್ಮೂರಿ ವಿರಾಮದ ಸಮಯದಲ್ಲಿ ನನ್ನಿಂದ ಪುಸ್ತಕವನ್ನು ಓದಿಸಿ ಕೇಳುತ್ತಿದ್ದ. ಅವನ ಪೆಟ್ಟಿಗೆ ಪುಸ್ತಕಗಳಿಂದ ತುಂಬಿತ್ತು. ಪುಸ್ತಕಗಳನ್ನು ಓದುವುದರಿಂದ ಮನುಷ್ಯ ವಿವೇಕಿಯಾಗುತ್ತಾನೆಂದು ಅವನು ಹೇಳುತ್ತಿದ್ದ. ಉತ್ತಮ ಪುಸ್ತಕವನ್ನು ಹುಡುಕಲು ಎಲ್ಲ ತರದ ಪುಸ್ತಕಗಳನ್ನು ಓದಬೇಕೆಂದು ಅವನು ಹೇಳುತ್ತಿದ್ದ. ಪುಸ್ತಕದ ವಿಷಯವನ್ನು ಕೇಳುವಾಗ ಅವನು ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಿದ್ದ. ನಾನು ಅವನಿಗೆ ಪುಸ್ತಕ ಓದಿ ಹೇಳುವಾಗ, ನನ್ನ ಕೆಲಸವನ್ನು ಮಕ್ಸಿಮ್ ಮಾಡಬೇಕಾಗುತ್ತಿತ್ತು. ಅವನು ನನ್ನನ್ನು ಕಂಡರೆ ಉರಿದುಬೀಳಲಾರಂಭಿಸಿದ. ಸಾಯಂಕಾಲ ಒಂದು ಚಿಕ್ಕ ಘಟ್ಟದಿಂದ, ಒಬ್ಬ ಹೆಂಗಸು ಮತ್ತು ಒಬ್ಬ ಹುಡುಗಿ ನಮ್ಮ ಹಡಗನ್ನೇರಿದರು. ಇಬ್ಬರೂ ಮತ್ತಿನಲ್ಲಿದ್ದರು. ಕೆಲಸ ಕಾರ್ಯಗಳನ್ನು ಮುಗಿಸಿ ನಿದ್ರಿಸಲು ಹೊರಟಾಗ ಸೆರ್ಗೇಯಿ ನನ್ನ ಕೈಯನ್ನು ಎಳೆದು ಹೇಳಿದ "ನಡಿ, ಈದಿನ ನಿನಗೊಬ್ಬ ಜೋಡಿಯನ್ನು ಸೇರಿಸೋಣ." ಮಕ್ಸಿಮ್ ಸಹ ಅವನನ್ನು ಸಮರ್ಥಿಸಿದ. ಯಾಕೋಬ್ ಬಾಗಿಲಲ್ಲಿ ಹುಡುಗಿಯನ್ನು ತಡೆದು ನಿಂತಿದ್ದ. ಸ್ಮೂರಿ ನನ್ನನ್ನು ಮಕ್ಸಿಮ್ ಮತ್ತು ಸೆರ್ಗೇಯಿಯ ಹಿಡಿತದಿಂದ ಬಿಡಿಸಿದ.

ನಂತರ, ಆ ಹುಡುಗಿಯ ಸಮಾಚಾರವೇನೆಂದು ನಾನು ಅವರನ್ನು ಕೇಳಿದೆ. ಅಶ್ಲೀಲ ಶಬ್ದಗಳಲ್ಲಿ ಅವನು ಹುಡುಗಿಯನ್ನು ನಿಂದಿಸಿದ. 'ಇಲ್ಲಿ ಎಲ್ಲರೂ ಹಂದಿಗಳು' ಎಂದು ಹೇಳಿದ. ಸೌದೆಯನ್ನು ತೆಗೆದುಕೊಂಡು ಬರುವ ಹೆಂಗಸರ ಎದೆಯನ್ನು ಹಡಗಿನವರು ಹಿಡಿಯುತ್ತಿದ್ದರು. ಮತ್ತು ಅವರು ಹಡಗಿನವರ ಹಿಡಿತದಿಂದ ಬಿಡಿಸಿಕೊಳ್ಳುವ ವ್ಯರ್ಥಪ್ರಯತ್ನವನ್ನು ಮಾಡುತ್ತಿದ್ದರು. ನಾನು ಒಬ್ಬ ವೃದ್ಧ ಮನುಷ್ಯನೆಂದು, ವಯಸ್ಸಿನ ಸಾಕಷ್ಟು ಹೆಚ್ಚು ಸಮಯವನ್ನು ಈ ಹಡಗಿನಲ್ಲೇ

ಕಳೆದಿರುವೆನೆಂದೂ ಎನಿಸತೊಡಗಿತು. ನನಗೆ ಅಳಬೇಕೆನಿಸುತ್ತಿತ್ತು. ಆದರೆ ಕಣ್ಣೀರು ಬರುತ್ತಿರಲಿಲ್ಲ. ಇದರಿಂದ ನನ್ನ ಹೃದಯ ಇನ್ನೂ ಕೊರಗುತ್ತಿತ್ತು.

ಅಜ್ಜಿ ಮತ್ತು ತಾತ ಪುನಃ ನಗರಕ್ಕೆ ಬಂದಿದ್ದರು. ಭಾರವಾದ ಹೃದಯದಿಂದ ನಾನು ಅವರಲ್ಲಿಗೆ ಹೋದೆ. ಅಜ್ಜಿ ನನ್ನನ್ನು ಪ್ರೀತಿಯಿಂದ ಸ್ವಾಗತಿಸಿದಳು. ಆದರೆ ತಾತ ವ್ಯಂಗ್ಯಮಾತುಗಳನ್ನಾಡುತ್ತಿದ್ದರು. ನಾನು ನನ್ನ ಕೋಪದಲ್ಲಿ ಅವರಿಗೆ ಹೊಡೆದೆ. ಅಜ್ಜಿ ನನ್ನ ಮೇಲೆ ರೇಗಿದಳು. ನಾನು ಅಜ್ಜಿಗೆ ನನ್ನ ಹಡಗಿನ ಜೀವನದ ಬಗ್ಗೆ ಹೇಳಿದೆ. ನಾನು ಇನ್ನೂ ಚಿಕ್ಕವನೆಂದೂ, ನಾನು ಜೀವನವನ್ನು ನೋಡಿಲ್ಲವೆಂದೂ ಹೇಳಿದರು. ಪ್ರತಿಯೊಬ್ಬರೂ ಇನ್ನೊಬ್ಬರಿಗೆ ಹೀಗೇ ಹೇಳುತ್ತಿದ್ದರು. ಜೀವನದಲ್ಲಿ ನೋಡುವಂತಹ – ತಿಳಿದುಕೊಳ್ಳುವಂತಹ ವಿಷಯತಾನೇ ಏನಿದೆ ? ಅಜ್ಜಿಗೂ ಗೊತ್ತಿರಲಿಲ್ಲ.

ನಾನು ಪಕ್ಷಿ ಹಿಡಿಯುವ ಕೆಲಸವನ್ನು ಪ್ರಾರಂಭಿಸಿದೆ. ಅಜ್ಜಿ ಅವನ್ನು ಪೇಟೆಯಲ್ಲಿ ಮಾರುತ್ತಿದ್ದಳು. ಪುರಸತ್ತಿನ ಸಮಯದಲ್ಲಿ ನಾನು ಸುತ್ತಾಡಲು ಹೋಗುತ್ತಿದ್ದೆ.

ತಾತನಿಗೆ ನಾನು ಪಕ್ಷಿ ಹಿಡಿಯುವ ಕೆಲಸ ಇಷ್ಟವಿರಲಿಲ್ಲ. ಹಿಮಬೀಳಲು ಪ್ರಾರಂಭವಾದೊಡನೆಯೇ ಅವರು ನನ್ನನ್ನು ಪುನಃ ಅಜ್ಜಿಯ ಸಹೋದರಿಯಲ್ಲಿ ಬಿಟ್ಟರು. ಇಬ್ಬರು ಯಜಮಾನತಿಯರೂ ಹಡಗು ಪ್ರಯಾಣದ ಕಥೆಗಳನ್ನು ಕೇಳುತ್ತಿದ್ದರು. ಪುಸ್ತಕಗಳ ವಿಷಯ ಬಂದಾಗ ಅವರು ತಿರಸ್ಕಾರ ತೋರಿಸುತ್ತಿದ್ದರು. ಚಿಕ್ಕ ಯಜಮಾನತಿ ಪುಸ್ತಕಗಳನ್ನು ಭಯಂಕರಪ್ರಾಣಿ ಎಂದು ತಿಳಿದಿದ್ದಳು. ಯಜಮಾನತಿಯ ಮಕ್ಕಳ ಹರಕುಬಟ್ಟೆಗಳನ್ನೂ ಸಹ ನಾನು ಒಗೆಯಬೇಕಾಗುತ್ತಿತ್ತು. ಅಲ್ಲಿದ್ದ ಒಂದೇ ಒಂದು ಸಂತೋಷದ ವಿಷಯವೆಂದರೆ ನೆರೆಮನೆಯ ಕಟರ್‌ರವರ ಪತ್ನಿಯಿಂದ ಓದಲು ನನಗೆ ಪುಸ್ತಕಗಳು ಸಿಕ್ಕುತ್ತಿದ್ದುವು. ಅವುಗಳನ್ನು ನಾನು ಕದ್ದುಮುಚ್ಚಿ ಓದುತ್ತಿದ್ದೆ. ಒಮ್ಮೆ ಓದುತ್ತಾ ಸಿಕ್ಕಿಹಾಕಿಕೊಂಡಾಗ ಯಜಮಾನತಿ ನನ್ನನ್ನು 'ಪುಸ್ತಕದ ಹುಳು' ಎಂದು ಹೇಳಲಾರಂಭಿಸಿದಳು.

ವೃದ್ಧ ಯಜಮಾನತಿ ನನ್ನ ಪುಸ್ತಕಗಳನ್ನು ಅನೇಕ ಸಲ ಹರಿದುಹಾಕಿದ್ದಳು. ನಾನು ಅಂಗಡಿಯವನಿಗೆ ನಲವತ್ತೇಳು ಕೋಪೆಕ್ ಕೊಡಬೇಕಾದ ಸಾಲಗಾರನಾದೆ. ಸಾಲ ತೀರಿಸಲು ಕಳ್ಳತನ ಮಾಡುವ ತೀರ್ಮಾನವನ್ನು ನಾನು ಮಾಡಿದೆ. ಆದರೆ ಯಜಮಾನನಿಗೆ ನನ್ನ ಚಿಂತೆಯನ್ನು ಹೇಳಿದೆ. ಯಜಮಾನ ಹೇಳಿದ, "ನೋಡು ಪುಸ್ತಕಗಳಿಂದ ಯಾವಾಗಲೂ ನಷ್ಟವೇ."

ಆದರೆ ಹೆಂಡತಿ ಮತ್ತು ತಾಯಿಗೆ ತಿಳಿಯದಂತೆ ನನಗೆ ಐವತ್ತು ಕೋಪೆಕ್‌ಗಳನ್ನು ಕೊಟ್ಟನು. ನನಗಾಗಿ ವರ್ತಮಾನ ಪತ್ರಿಕೆಯನ್ನೂ ತರಿಸಲು ಪ್ರಾರಂಭಿಸಿದನು. ನಾನು ಅದನ್ನು ಓದಿ ಅವನಿಗೆ ಹೇಳುತ್ತಿದ್ದೆ. ಆ ದಿನಗಳಲ್ಲಿ ಕೆಲವು ಪುಸ್ತಕ

ಗಳೂ ನನಗೆ ಇಷ್ಟವಾದವು. ಇಬ್ಬರು ಯಜಮಾನತಿಯರೂ ಕವಿತೆಯ ವಿಷಯದಲ್ಲಿ ಈ ರೀತಿ ಹೇಳುತ್ತಿದ್ದರು. "ವಿದೂಷಕರು ಮತ್ತು ನಾಟಕದವರನ್ನು ಬಿಟ್ಟರೆ ಕವಿತೆಗೂ ಬೇರೆಯವರಿಗೂ ಸಂಬಂಧವೇ ಇಲ್ಲವೇ ?" ಆದರೆ ಪುಸ್ತಕಗಳು ನನ್ನ ಅನುಭವವನ್ನು ಹೆಚ್ಚಿಸುತ್ತಿದ್ದುವು. ಅದೇ ದಿನಗಳಲ್ಲಿ ಜಾರ್‌ನ ಕೊಲೆಯಾಯಿತು. ಆದರೆ ಈ ವಿಷಯದಲ್ಲಿ ಮಾತನಾಡುವುದು ನಿಷಿದ್ಧವಾಗಿತ್ತು.

ಒಂದು ದಿನ ಆಹಾರವನ್ನು ಸರಿಯಾಗಿ ಬಿಸಿಮಾಡಲಿಲ್ಲವೆಂದು ವೃದ್ಧ ಯಜಮಾನತಿ ನನ್ನನ್ನು ಹೊಡೆದಳು. ನನ್ನ ಶರೀರದಲ್ಲೆಲ್ಲಾ ಬಾಸುಂಡೆಗಳು ಬಂದವು. ಮಾರನೆಯ ದಿನ ನನ್ನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕಾಯಿತು. ಡಾಕ್ಟರು ಅವರನ್ನು ಹೆದರಿಸಿದರು. ಈ ಅತ್ಯಾಚಾರದ ಬಗ್ಗೆ ಸರ್ಕಾರಕ್ಕೆ ರಿಪೋರ್ಟ್ ಮಾಡುವುದಾಗಿ ಹೇಳಿದರು. ಮನೆಗೆ ಹೋದಾಗ ಎಲ್ಲರೂ ನನ್ನನ್ನು ಸ್ವಾಗತಿಸಿದರು. ಅವರ ವಿರುದ್ಧ ದೂರನ್ನು ಬರೆದುಕೊಡಲು ನಾನು ನಿರಾಕರಿಸಿದೆನೆಂದು ಅವರಿಗೆ ತಿಳಿಸಿದೆ. ಇದರ ಪರಿಣಾಮವಾಗಿ ಕಟರ್‌ರವರ ಪತ್ನಿಯಿಂದ ಪುಸ್ತಕಗಳನ್ನು ತೆಗೆದುಕೊಂಡು ಓದಲು ಅನುಮತಿ ಸಿಕ್ಕಿತು. ನಾನು ಅವರಿಂದ ಪುಸ್ತಕ ತೆಗೆದುಕೋಡು ರಾತ್ರಿಯೆಲ್ಲಾ ಓದುತ್ತಿದ್ದೆ. ನನ್ನ ಕಣ್ಣುಗಳು ಊದಿಕೊಂಡವು. ಗೌನ್‌ಕೋರ್ಟ್, ಗ್ರೀನ್‌ವುಡ್ ಮತ್ತು ಬಾಲಜಾಕ್‌ರ ಕಾದಂಬರಿಗಳಲ್ಲಿ ನನಗೆ ಜೀವನದ ನೈಜಚಿತ್ರಣ ಸಿಕ್ಕಿತು. ವಸಂತದಲ್ಲಿ ಕಟರ್‌ನ ಪತ್ನಿ ಎಲ್ಲೋ ಹೊರಟುಹೋದರು. ಖಾಲಿಯಾದ ಮನೆಯಲ್ಲೆಲ್ಲಾ ಹುಡುಕಿ ನಿರಾಶನಾದೆ.

ನಮ್ಮ ಮನೆಯ ಕೆಳಭಾಗದಲ್ಲಿ ಒಬ್ಬ ಯುವತಿ ಇದ್ದಳು. ಜೊತೆಯಲ್ಲಿ ಒಬ್ಬ ಚಿಕ್ಕ ಹುಡುಗಿ ಮತ್ತು ಯುವತಿಯ ತಾಯಿಯೂ ಇದ್ದರು. ಯುವತಿ ಸುಂದರಳಾಗಿದ್ದಳು ಮತ್ತು ಕುದುರೆಯ ಸವಾರಿಯನ್ನು ಮಾಡುತ್ತಿದ್ದಳು. ಆ ಪ್ರಾಂತದ ಸೈನ್ಯಾಧಿಕಾರಿ ಆಗಾಗ್ಗೆ ಅವಳಲ್ಲಿಗೆ ಬರುತ್ತಿದ್ದರು. ಒಂದು ದಿನ ಸಂಜೆ ಚಿಕ್ಕ ಹುಡುಗಿ ನನ್ನ ತೊಡೆಯಲ್ಲೇ ನಿದ್ರೆಮಾಡಿಬಿಟ್ಟಳು. ನಾನು ಮಗುವನ್ನು ಕೊಡಲು ಹೋದಾಗ ಆ ಯುವತಿಯು (ರಾಣಿ ಮಾರ್ಗರೆಟ್) "ನೀವೇನನ್ನು ತೆಗೆದುಕೊಳ್ಳಲು ಅಪೇಕ್ಷಿಪಡುತ್ತೀರಿ ?" ಎಂದು ಕೇಳಿದಳು. ಯಾವುದಾದರೂ ಪುಸ್ತಕ ಸಿಕ್ಕಿದರೆ ಒಳ್ಳೆಯದೆಂದು ನಾನು ಹೇಳಿದೆ. ಅವರು ನನಗೆ ಕೊಟ್ಟ ಪುಸ್ತಕದಲ್ಲಿ ಲಾಠಿ ಮತ್ತು ಸ್ವಾತಂತ್ರ್ಯದ ಸಂಭಾಷಣೆ ಇತ್ತು. ಬಹಳ ಆಕರ್ಷಕವಾಗಿತ್ತು. ಸ್ವಾತಂತ್ರ್ಯ ಹೇಳಿತು "ನಾನು ನಿನಗಿಂತ ಶ್ರೇಷ್ಠ. ಏಕೆಂದರೆ ನನ್ನಲ್ಲಿ ಬುದ್ಧಿ ಇದೆ. ಲಾಠಿ ಹೇಳಿತು. ನಾನು ನಿನಗಿಂತ ಶ್ರೇಷ್ಠ. ಏತಕ್ಕೆಂದರೆ ನಾನು ಶಕ್ತಿಶಾಲಿ. ಲಾಠಿಯು ಸ್ವಾತಂತ್ರ್ಯವನ್ನು ಚೆನ್ನಾಗಿ ಥಳಿಸಿತು. ಅವರು ಕೊಟ್ಟ ಪುಶ್ಕಿನ್‌ನ ಕವಿತೆಗಳ ಪುಸ್ತಕವೂ ನನಗೆ ಇಷ್ಟವಾಯಿತು. ಅವರು ನನಗೆ ಪುಸ್ಕಿನ್‌ನ ಜೀವನದ ವಿಷಯವಾಗಿ ಹೇಳಿದರು. "ನೋಡಿದೆಯಾ ಹೆಂಗಸನ್ನು ಪ್ರೀತಿಸುವುದು ಎಷ್ಟು ಅಪಾಯಕಾರಿ ?" ಹೆಂಗಸರೂ

ಬಹಳಷ್ಟು ಕಷ್ಟಗಳನ್ನು ಅನುಭವಿಸುತ್ತಾರೆ–ಎಂದು ನಾನು ಹೇಳಿವೆ. ಸತ್ಯವನ್ನು ಎಂದಿಗೂ ಮರೆಯಬಾರದೆಂದು ಅವರು ಹೇಳಿದರು.

ಒಂದು ದಿನ ನನಗೆ ಶೆಡ್ಡಿನಲ್ಲಿ ಒಂದು ಖಾಲಿ ಪರ್ಸ್ ಸಿಕ್ಕಿತು. ಈ ಪರ್ಸನ್ನು ನಾನು ಸಿದರೋವ್‌ನಲ್ಲಿ ನೋಡಿದ್ದೆ. ಅದನ್ನು ಅವನಿಗೆ ಕೊಡಲು ಹೋದಾಗ ಅವನು ಅದರಿಂದ ಒಂದು ರೂಬಲ್, ಇಪ್ಪತ್ತು ಕೋಪೆಕ್‌ಗಳನ್ನು ಕದ್ದ ಆರೋಪ ವನ್ನು ಹೊರಿಸಿದ. ಈ ಆರೋಪದಿಂದ ನಾನು ಅಲ್ಲಿಂದ ಹೊರಡಬೇಕಾಯಿತು. ಯಜಮಾನನು ಹೇಳಿದನು "ನೀನು ಎಂತಹ ಅದೃಷ್ಟವನ್ನು ಪಡೆದಿದ್ದೀಯ, ಪೇಶಿಕೋವ್ ? ಯಾರೋ ತಪ್ಪು ಮಾಡಿದರೆ, ಯಾರೋ ದಂಡ ಅನುಭವಿಸ ಬೇಕೇ ?"

ಒಮ್ಮೆ ಹಡಗಿನ ಅಡಿಗೆಮನೆಯಲ್ಲಿ ಪಾತ್ರೆ ತೊಳೆಯುವ ಕೆಲಸಕ್ಕೆ ಹೋದೆ. ಹಡಗಿಗೆ ಕಲ್ಲಿದ್ದಲು ಹಾಕುವ ಯಾಕೋವ್ ಬಹಳ ಆಸಕ್ತಿಯುಳ್ಳ ಮನುಷ್ಯನಾಗಿದ್ದ. ಅವನು ದೊಡ್ಡ ಜೂಜುಗಾರನಾಗಿದ್ದ. ಒಮ್ಮೆ ಅವನು ಇಸ್ಪೀಟು ಆಡಲು ಕರೆದ. ಮೊದಲು ನಾನು ಅರ್ಧ ಪೌಂಡು ಸಕ್ಕರೆಯನ್ನು ಸೋತೆ. ಪುನಃ ಐದು ರೂಬೆಲ್, ಉಲ್ಲನ್‌ಕೋಟು, ಮತ್ತು ಕೊನೆಗೆ ಹೊಸ ಚಪ್ಪಲಿಗಳನ್ನು ಸೋತೆ. ಅವನು ನನಗೆ ನಾಲ್ಕು ರೂಬಲ್, ಕೋಟು, ಮತ್ತು ಚಪ್ಪಲಿಗಳನ್ನು ಹಿಂತಿರುಗಿಸಿದ. ತನ್ನ ಫೀಸೆಂದು ಒಂದು ರೂಬಲ್‌ನ್ನು ಹಿಡಿದುಕೊಂಡು ಈ ರೀತಿ ಹೇಳಿದ, "ನಿನಗೆ ಸಹನೆ ಯಿಲ್ಲ. ಆದ್ದರಿಂದ ಆಟಗಾರನಾಗಲಾರೆ."

ಎಲೆ ಉದುರುವ ಕಾಲ ಮುಗಿಯಿತು. ಮತ್ತು ನೀರಿನಲ್ಲಿ ಹಡಗುಗಳು ಹೋಗುವುದನ್ನು ನಿಲ್ಲಿಸಲಾಯಿತು. ಹಡಗಿನ ನೌಕರಿಯನ್ನು ಬಿಟ್ಟು ನಾನು ಒಂದು ಕಾರ್ಖಾನೆಗೆ ಸೇರಿಕೊಂಡೆ. ಅಲ್ಲಿ ಪ್ರತಿಮೆಗಳನ್ನು ಮಾಡಿ ಬಣ್ಣ ಹಾಕಲಾಗುತ್ತಿತ್ತು. ನನ್ನ ಯಜಮಾನನೆ ನನ್ನನ್ನು ಮುನ್ಸಿಗೆ ಒಪ್ಪಿಸಿದಳು. ಅವನು ಹೇಳುತ್ತಿದ್ದ, "ಗ್ರಾಹಕರು ಮೂರ್ಖರು. ಅವರಿಗೆ ಅಗ್ಗವಾದ ವಸ್ತುಗಳು ಬೇಕು. ಅವರ ದೃಷ್ಟಿ ಯಲ್ಲಿ ಕುದುರೆ–ಕತ್ತೆ ಒಂದೇ ಸಮ.

ಮುನ್ಸಿ ಗ್ರಾಹಕರೊಡನೆ ಹೇಗೆ ನಡೆದುಕೊಳ್ಳಬೇಕೆಂದು ಕಲಿಸುವ ಪ್ರಯತ್ನ ಮಾಡುತ್ತಿದ್ದ. ಪ್ಯೋಗ್ ವಸೀಲೀಯೇವಿಚ್ ಎಂಬ ಎತ್ತರದ ವೃದ್ಧ ಬಹಳ ಆಸಕ್ತಿ ಹುಟ್ಟಿಸುವಂತಹ ಮನುಷ್ಯನಾಗಿದ್ದ. ಅವನ ಹತ್ತಿರ ಕಥೆಗಳ ಸಂಗ್ರಹವೇ ಇದ್ದಿತು. ಅವನು ಹೇಳುತ್ತಿದ್ದ, "ಕೆಲವರು ಅದೃಷ್ಟಶಾಲಿಗಳನ್ನು ದೇವತೆಗಳು ಸ್ವತಃ ತಾವೇ ತಮ್ಮ ಕೈಯಿಂದ ನಿರ್ಮಿಸುತ್ತಾರೆ. ಇನ್ನು ಕೆಲವರನ್ನು ಸೈತಾನ್ ತನ್ನ ಕೊಡಲಿಯ ಚೂಪಾದ ತುದಿಯಿಂದ ನಿರ್ಮಿಸುತ್ತಾನೆ."

ಕಾರ್ಖಾನೆಯಲ್ಲಿ ತೊಡಕು ತರುವಂತಹ ಕೆಲಸ ನನಗಿರಲಿಲ್ಲ. ಕಾರ್ಖಾನೆಯಲ್ಲಿ ಕಥೆಗಳನ್ನೂ, ಪುಸ್ತಕಗಳನ್ನೂ ಓದಿ ಹೇಳುವ ಕೆಲಸ ನನ್ನದಾಯಿತು. ಆಗ

ಲೋಮತೋವ್‌ನ ಕವಿತೆಗಳ ಒಂದು ಪುಸ್ತಕ ನನಗೆ ಸಿಕ್ಕಿತು. ಅದು ನನ್ನ ಮೇಲೆ, ಪ್ರಭಾವವನ್ನು ಬೀರಿತು. ವೃದ್ಧ ಗೋಗೋಲೇವ್ ಅಂಗಡಿಯ ಮುನ್ಷಿಯ ಹತ್ತಿರ ಹೋಗಿ ಕಾರಖಾನೆಯ ಜನಗಳ ವಿಷಯವಾಗಿ ದೂರು ಹೇಳುತ್ತಿದ್ದ. ಒಮ್ಮೆ ಮತ್ತಿನಲ್ಲಿ ಮುಳುಗಿದ್ದ ಆ ವೃದ್ಧನ ಮೂಗಿನ ಮೇಲೆ ಚಿನ್ನದ ಬಣ್ಣದ ಪೆಯಿಂಟ್ ಬಳಿಯಲಾಯಿತು. ವೃದ್ಧ ಯಜಮಾನತಿಯಲ್ಲಿಯೂ ದೂರು ಹೇಳುತ್ತಿದ್ದ. ಸಿತಾಲೋವ್‌ನ ವಿಚಾರಗಳು ಪಾವೇಲ್‌ನನ್ನೂ ಆಕರ್ಷಿಸಿದುವು. ಅವನು ಹೇಳುತ್ತಿದ್ದ "ಕೆಲವರು ಹಗಲೂ ರಾತ್ರಿ ಪರಿಶ್ರಮಪಟ್ಟು ಪದಾರ್ಥಗಳನ್ನು ತಯಾರಿಸುತ್ತಾರೆ. ಅನ್ಯರು ಹಿಂದೆ ಮುಂದೆ ನೋಡದೆ ಅವುಗಳನ್ನು ನಷ್ಟಪಡಿಸಲು ಯೋಚಿಸುತ್ತಿರುತ್ತಾರೆ."

ಭಾನುವಾರ ಸ್ಮಶಾನದ ಇನ್ನೊಂದು ಭಾಗದಲ್ಲಿ ಕುಸ್ತಿಯಾಟವಾಗುತ್ತಿತ್ತು. ಮೋರಿಯೋಬಿಯಾದ ನಿವಾಸಿ ಪ್ರಸಿದ್ಧ ಕುಸ್ತಿಪಟುವಾಗಿದ್ದ. ಕಾಪೇನ ದಯೂಖಿನ್ ನಮ್ಮ ಕಡೆಯಿಂದ ಅವನೊಡನೆ ಕುಸ್ತಿಮಾಡುತ್ತಿದ್ದ. ರಕ್ತ ಮತ್ತು ಮಣ್ಣಿನಲ್ಲಿ ಮುಳುಗಿಹೋಗುತ್ತಿದ್ದ. ಕೆಲವೊಮ್ಮೆ ಅವನು ಸೋತಾಗ ತನ್ನ ಕೈಗಳಲ್ಲಿ ಗಾಜಿನ ಚೂರುಗಳನ್ನು ತುಂಬಿಕೊಂಡ. ಸಿತಾನೋವ್ ಇದನ್ನು ಅಡ್ಡಿಪಡಿಸಿದ. ಆದರೆ ಅವನು ಒಪ್ಪಲಿಲ್ಲ. ಸಿತಾನೋವ್ ಆಟಕ್ಕೆ ಮೊದಲು ಈ ರಹಸ್ಯವನ್ನು ಹೇಳಿಬಿಟ್ಟನು. ನಮ್ಮ ಪಕ್ಷದವರು ಅವನನ್ನು ಬೈಯ್ದರು. ಸಿತಾನೋವ್ ಮೋರದೋವಿಯಾದ ನಿವಾಸಿಗಳನ್ನು ಸ್ಪರ್ಧೆಗೆ ಕರೆದು ಎಲ್ಲರನ್ನೂ ಚಕಿತಗೊಳಿಸಿದನು. ಅವನು ಬಹಳ ಚೆನ್ನಾಗಿ ಕುಸ್ತಿಮಾಡಿದನು. ಆದರೆ ಅವನ ಬಲಗೈ ಮೂಳೆ ಮುರಿಯಿತು, ಅವನು ಸದಾ ಪ್ರಾಮಾಣಿಕತೆಯ ಪಕ್ಷಪಾತಿಯಾಗಿದ್ದ.

ಕುಶಲಕರ್ಮಿಗಳು ಸದಾಕಾಲ ಜಂಬಕೊಚ್ಚಿಕೊಳ್ಳುತ್ತಿದ್ದರು ; ಅಥವಾ ಪಶ್ಚಾತ್ತಾಪಪಡುತ್ತಿದ್ದರು ; ಅಥವಾ ಯಾರಮೇಲಾದರೂ ದೋಷಾರೋಪಣೆ ಮಾಡುತ್ತಿದ್ದರು. ಜೀವನದಲ್ಲಿ ಕಠಿಣತೆಯನ್ನು ಹೆಚ್ಚು ಮಾಡುವಂತಹ ಎಷ್ಟೋ ವಿಷಯಗಳಿದ್ದುವು. ಅವುಗಳನ್ನು ಸುಲಭವಾಗಿ ಸರಿಪಡಿಸಬಹುದಾಗಿತ್ತು. ಆದರೆ ಇದಕ್ಕಾಗಿ ಯಾರೂ ಪ್ರಯತ್ನವನ್ನೇ ಪಡುತ್ತಿರಲಿಲ್ಲ. ದಾನಿದೋವ್ ರಕ್ತಕಾರುತ್ತಾ ಸತ್ತುಹೋದ. ಯಾರೂ ಅವನನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಲಿಲ್ಲ.

ನನ್ನ ಜನ್ಮದಿನದಂದು ಕುಶಲಕರ್ಮಿಗಳು ನನಗೆ ಸಂತ ಅಲೆಕ್ಸಿಯ ಒಂದು ಸಣ್ಣ ಪ್ರತಿಮೆಯನ್ನು ಕಾಣಿಕೆಯನ್ನಾಗಿ ಕೊಟ್ಟರು. ಹೊರಗೋಡೆಯ ಮೇಲ್ಭಾಗದಿಂದ ಮಂಜುಗಡ್ಡೆಯನ್ನು ಒಟ್ಟುಗೂಡಿಸಿ ನೆಲಮಾಳಿಗೆಯಲ್ಲಿ ಸಂಗ್ರಹಿಸಿಡಲು ಮುನ್ಷಿ ನನಗೆ ಹೇಳಿದ. ನಾನು ಗುದ್ದಲಿಯಿಂದ ಮಂಜುಗಡ್ಡೆಗಳನ್ನು ತೆಗೆದು ಹಾಕಲಾರಂಭಿಸಿದೆ. ಆದರೆ ನೆಲಮಾಳಿಗೆಯ ಬಾಗಿಲು ತೆರೆಯುವುದನ್ನು ಮರೆತುಬಿಟ್ಟೆ. ಮಂಜುಗಡ್ಡೆಯ ರಾಶಿಯಲ್ಲಿ ಬಾಗಿಲನ್ನು ಹುಡುಕುವ ಪ್ರಯತ್ನದಲ್ಲಿ ಗುದ್ದಲಿ

ಮುರಿದುಹೋಯಿತು. ಮುನ್ನಿ ಗುದ್ದಲಿಯ ಮುರಿದ ಭಾಗದಿಂದ ನನ್ನ ಕಾಲು ಗಳಿಗೆ ಹೊಡೆದ.

"ಅಂಗಳವನ್ನು ಶುಭ್ರಗೊಳಿಸುವುದು ನನ್ನ ಕೆಲಸವಲ್ಲ" ಎಂದು ನಾನು ಹೇಳಿದೆ. ಮತ್ತು ಉತ್ತರವಾಗಿ ಮಂಜುಗೆಡ್ಡೆಯಿಂದ ಅವನ ಮುಖಕ್ಕೆ ಹೊಡೆದೆ.

ಕೆಲವೊಮ್ಮೆ ಅವನು ತಿಳಿದೂ ತಿಳಿದು ಚಿಲ್ಲರೆ ಹಣವನ್ನು ನೆಲದ ಮೇಲೆ ಬೀಳಿಸುತ್ತಿದ್ದ. ನಾನು ಹೇಳಿದೆ "ಚಿಲ್ಲರೆ ಹಣದ ಬಲೆ ಬೀಸಿ ನೀನು ನನ್ನನ್ನು ಸಿಕ್ಕಿಸ ಲಾರೆ."

ಮುನ್ನಿಯ ಭಾವಿಪತ್ನಿ ಪಾವೇಲ್ ನನಗೆ ಒಗಟುಗಳನ್ನು ಬಿಡಿಸಲು ಹೇಳುತ್ತಿ ದ್ದಳು. ಅವುಗಳ ಉತ್ತರ ಅಶ್ಲೀಲವಾಗಿರುತ್ತಿತ್ತು. ಚುಂಬಿಸುವುದು ಹೇಗೆಂಬು ದನ್ನು ಅವಳು ನನಗೆ ಕಲಿಸಿಕೊಡಲು ಅಪೇಕ್ಷಿಸಿದಳು. ನಾನು ಅವಳನ್ನು ಎಚ್ಚರಿಸಿ ದಾಗ ಅವಳು ಬಹಳ ಕೋಪಗೊಂಡಳು. ತನಗೆ ಯಾವುದೇ ತರಹದ ಹೆದರಿಕೆಯಿಲ್ಲ ವೆಂದೂ ಇಷ್ಟು ದೊಡ್ಡ ವರದಕ್ಷಿಣೆಗೆ ಇಪ್ಪತ್ತು ಮಂದಿ ಗಂಡಂದಿರು ಬೇಕಾದರೂ ತನಗೆ ಸಿಕ್ಕಬಲ್ಲರೆಂದು ಅವಳು ಹೇಳಿದಳು.

ನಾನು ಅಲ್ಲಿಂದ ಓಡಿಹೋಗಬೇಕೆಂದು ನಿಶ್ಚಯಿಸಿದ್ದೆ. ಫಾರನಸ್ ತಲುಪ ಬೇಕೆಂದು ನನ್ನ ಮನಸ್ಸು ಅಪೇಕ್ಷಿಸುತ್ತಿತ್ತು. ಆಗ ಅಜ್ಜಿಯ ಸಹೋದರಿಯ ಮಗ (ನನ್ನ ಹಿಂದಿನ ಯಜಮಾನ)ನೊಡನೆ ನನ್ನ ಭೇಟಿಯಾಯಿತು. ಜಾತ್ರೆಯಲ್ಲಿ ಕೂಲಿ ಯಾಳುಗಳ ಮೇಲೆ ನಿಗಾ ಇಡುವ ಕೆಲಸವನ್ನು ವಹಿಸಿಕೊಳ್ಳುವಂತೆ ಅವರು ನನಗೆ ಹೇಳಿದರು. ಕುಶಲಕರ್ಮಿಗಳಿಂದ ನಾನು ಬೀಳ್ಕೊಂಡೆ.

ಜಾತ್ರೆಯ ಮೈದಾನದಲ್ಲಿ ವಸಂತದ ಪ್ರವಾಹ ಬಂದು ನೀರು ತುಂಬಿತ್ತು. ನಾನು ಮತ್ತು ನನ್ನ ಯಜಮಾನ ದೋಣಿಯಲ್ಲಿ ಹೋಗುತ್ತಿದ್ದೆವು. ಯಜಮಾನ ನನಗೆ ಈ ರೀತಿ ಹೇಳುತ್ತಿದ್ದ. "ಇಲ್ಲಿ ಜಾತ್ರೆಯ ಕಾವಲುಗಾರ ಇರುತ್ತಾನೆ. ಯಾವ ಕಳ್ಳನೂ ಕಾಣದಿದ್ದರೆ, ತಾನೇ ಕಳ್ಳತನ ಮಾಡುತ್ತಾನೆ."

ಕೋಳಿಗಳನ್ನು ಸಾಯಿಸುತ್ತಾ ಅವನು ನನ್ನನ್ನು ಕೇಳಿದ "ನಿನ್ನ ಉಪವಾಸವ್ರತ ಇನ್ನೂ ಮುಗಿಯಲಿಲ್ಲವೇ ?" ತನಗೆ ಹದಿಮೂರು ವರ್ಷಗಳಾಗಿದ್ದಾಗ ಇದ್ದ ತನ್ನ ಪ್ರೇಮಿಕೆಯ ವಿಷಯವನ್ನು ಹೇಳಲಾರಂಭಿಸಿದ. ತನ್ನ ಪತ್ನಿಗೆ ಈ ವಿಷಯ ತಿಳಿಯ ದಂತೆ ಎಚ್ಚರ ವಹಿಸಿದ್ದ. ಅವನು ಹೇಳುತ್ತಿದ್ದ "ಪತ್ನಿ ಋತುವಿನಂತೆ. ಅವಳನ್ನು ಬದಲಾಯಿಸಲಾಗುವುದಿಲ್ಲ."

ರಾಣಿ ಮಾರಗೋಟಳ ಕಟ್ಟಡದಲ್ಲಿ ಒಂದು ದೊಡ್ಡ ಕುಟುಂಬವಿತ್ತು. ಅವರಿಂದ ನನಗೆ ಪುಸ್ತಕಗಳು ಸಿಕ್ಕುತ್ತಿದ್ದುವು. ಡಿಕೆನ್ಸ್ ಮತ್ತು ವಾಲ್ಟರ್ ಸ್ಕಾಟ್‌ನ ಪುಸ್ತಕ ಗಳನ್ನು ನಾನು ಆಸಕ್ತಿಯಿಂದ ಓದುತ್ತಿದ್ದೆ. ಯಾರಿಗಿಂತ ನಾನೇನು ಕಡಿಮೆ ಎನ್ನು ವಂತೆ ನಾನು ಸಹ ಒಬ್ಬ ಹುಡುಗಿಯನ್ನು ಪ್ರೇಮಿಸತೊಡಗಿದೆ. ಅಗ್ನಿಕುಂಡದ

ಪ್ರದಕ್ಷಿಣೆ ಮಾಡಲು ನಾನು ಹಲಗೆಯನ್ನು ಎಳೆದು ತಂದೆ. ಆದರೆ ಹಲಗೆಯ ಮೇಲೆ ಕಾಲಿಟ್ಟ ಕೂಡಲೇ ಅವಳು ಜಾರಿದಳು. ಕೊಚ್ಚೆಯಲ್ಲಿ ಮುಳುಗಿದ ಅವಳಿಗೆ, ನಾನೇ ನೂಕಿ ಅವಳನ್ನು ಬೀಳಿಸಿದೆನೆನಿಸಿತು. ಈ ಕಥೆ ಇಲ್ಲಿಗೆ ಮುಗಿಯಿತು.

ಯಜಮಾನನು ತನ್ನ ಸಹಾಯಕ್ಕೋಸ್ಕರ ನನ್ನ ಮಲತಂದೆಯನ್ನು ಕರೆಸಿ ಕೊಂಡ. ಮನೆಯ ಹೆಂಗಸರು ನನ್ನ ಮಲತಂದೆಯನ್ನು ಕಂಡರೆ ಉರಿದುಬೀಳು ತ್ತಿದ್ದರು. ಅವನು ನನಗೆ ಆಗಾಗ್ಗೆ ಸಲಹೆಕೊಡುತ್ತಿದ್ದ—"ನೀನು ಈ ಜಾಗನನ್ನು ಬಿಟ್ಟರೆ ಒಳ್ಳೆಯದು."

"ಆದರೆ ಇಲ್ಲಿಯ ಕಾರ್ಮಿಕರು ಮತ್ತು ಕುಶಲಕರ್ಮಿಗಳು ನನಗೆ ಇಷ್ಟವಾಗು ತ್ತಾರೆ."

"ಯಾವ ಅರ್ಥದಲ್ಲಿ ?"

"ಅವರು ಆಸಕ್ತಿಯುಳ್ಳವರಾಗಿರುತ್ತಾರೆ."

ಒಂದೆರಡು ದಿನ ಅವನು ಕೆಲಸಕ್ಕೆ ಬರಲಿಲ್ಲ. ಒಂದು ದಿನ ನನಗೆ ಸಂದೇಶ ಸಿಕ್ಕಿತು. ತಂದೆ ಆಸ್ಪತ್ರೆಯಲ್ಲಿದ್ದ. ನಾನು ತಲುಪಿದಾಗ ಬಹಳ ಒದ್ದಾಡಿ ಸತ್ತು ಹೋದ.

ಪ್ರತಿನಿತ್ಯ ಬೆಳಿಗ್ಗೆ ಆರು ಘಂಟೆಗೆ ನಾನು ಜಾತ್ರೆಯ ಮೈದಾನಕ್ಕೆ ಹೋಗು ತ್ತಿದ್ದೆ. ಚೂರಿಯಂತೆ ಹರಿತವಾದ ನಾಲಿಗೆಯುಳ್ಳ ಓಸಿಪ್, ಶಿಶಿಲನ್‌ನಂತಹ ಆಸಕ್ತಿ ಯನ್ನುಂಟುಮಾಡುವ ಕೆಲವರು ಅಲ್ಲಿದ್ದರು. ನನ್ನ ಯಜಮಾನನು ಅವರಿಗೆ, ಅವರು ನನ್ನ ಯಜಮಾನನಿಗೆ ಮೋಸಮಾಡಲು ಸಿಹಿ-ಕಹಿ ಮಾತುಗಳನ್ನಾಡು ತ್ತಿದ್ದರು. ಅವರು ನನಗಿಂತಲೂ ದೊಡ್ಡವರೆಂತಲೂ, ಜ್ಞಾನಿಗಳೆಂತಲೂ ನಾನು ತಿಳಿದಿದ್ದೆ. ನನಗೆ ಆ ಜ್ಞಾನ ದುರ್ಲಭವಾಗಿತ್ತು. ಆದರೂ ಸಹ ಅವರು ಕಳ್ಳರೋ ಎಂಬಂತೆ ಅವರನ್ನು ನಾನು ಕಾಯಬೇಕಾಗುತ್ತಿತ್ತು.

ಶಿಶಿಲನ್ ಪತ್ನಿ ಹಳ್ಳಿಯಲ್ಲಿರುತ್ತಿದ್ದಳು. ಬಡತನದಲ್ಲಿ ಸಿಕ್ಕ ಆ ಸಮಾಜದ ಸ್ತ್ರೀಯರು ತಮ್ಮ ಗಳಿಕೆಗಾಗಿ ಆಟದ ಬೊಂಬೆಗಳಾಗಲೂ ಸಿದ್ಧರಿರುತ್ತಿದ್ದರು. ಆದರೆ ಅವನು ಸುಮ್ಮನೆ ಹೊರಟುಹೋಗುತ್ತಿದ್ದ. ಕೇಳಿದರೆ ಈ ರೀತಿ ಹೇಳುತ್ತಿದ್ದ "ಗಂಡ ಕೆಟ್ಟ ದಾರಿಗೆ ಹೋದರೆ, ಹೆಂಡತಿ ಯಾವಾಗಲೂ ಕಂಡುಹಿಡಿಯುತ್ತಾಳೆ."

ನನ್ನ ಯಜಮಾನ ಊಟಕ್ಕಾಗಿ ನನಗೆ ಐದು ಕೋಪೇಕ್‌ಗಳನ್ನು ಕೊಡುತ್ತಿದ್ದ. ಇಷ್ಟರಿಂದ ನನ್ನ ಹಸಿವು ನಿವಾರಣೆಯಾಗುತ್ತಿರಲಿಲ್ಲ. ಓಸಿಪ್ ನನಗೆ ಈ ರೀತಿ ಹೇಳು ತ್ತಿದ್ದ "ಕೆಲವರು ರೊಟ್ಟಿಯನ್ನು ತಿಂದರೆ ನೀನು ಪುಸ್ತಕಗಳನ್ನು ತಿನ್ನುತ್ತೀಯೆ."

ಶಿಶಿಲನ್‌ಗೆ ಕುಡಿಯುವ ಅಭ್ಯಾಸವಿರಲಿಲ್ಲ. ಸ್ವಲ್ಪ ಕುಡಿದರೆ ಈ ರೀತಿ ಹೇಳು ತ್ತಿದ್ದ "ಸಹೋದರರೆ, ನಾವು ನಮ್ಮಿಂದಾಗುವಷ್ಟು ಕೆಲಸಮಾಡುತ್ತೇವೆ. ಆದರೆ ನಮಗೆ ಸಿಗುವ ಆಹಾರ ನಮ್ಮನ್ನು ಹಸಿವಿನಿಂದ ಉಳಿಸುವುದಿಲ್ಲ."

ನಾನು ಅವರುಗಳಿಗೆ ಹೇಳಿದೆ "ನನ್ನಲ್ಲಿ ಬಡಗಿಯ ಕೆಲಸಕ್ಕೆ ಸಂಬಂಧಿಸಿದ

ಒಂದು ಪುಸ್ತಕವಿದೆ. ಪುಸ್ತಕದ ಹೆಸರನ್ನು ಕೇಳಿ ಪೈಂಟರ್ ಹೇಳಿದ "ಈ ಲೇಖಕರಿಗೆ ಕೆಲಸವಂತೂ ಇಲ್ಲ. ಆದ್ದರಿಂದ ಇನ್ನೊಬ್ಬರ ತಪ್ಪುಗಳನ್ನು ಹುಡುಕುತ್ತಿರುತ್ತಾರೆ."

ಓಸಿಪ್ ನಲವತ್ತು ವರ್ಷಗಳವರೆಗೆ ಜಮೀನ್‌ದಾರರ ಜೀತದಾಳಾಗಿದ್ದ. ಅವನು ಹೇಳಿದ. "ಬೆತ್ತದ ಏಟು ಅವನ ಬೆನ್ನಿನ ಮೇಲೆ ಬರೆದಿರುವ ಬರಹ ಯಾವ ಪುಸ್ತಕಕ್ಕಿಂತ ಕಡಿಮೆಯಾಗಿದೆ ?" ಪುನಃ ಅವನು ಹೇಳಿದ "ಜಮೀನ್‌ದಾರ ಮತ್ತು ಬಡವನ ಮಧ್ಯೆ ಅಂತರ ಇರುವುದಿಲ್ಲ. ನಾವಿಬ್ಬರೂ ಒಂದೇ. ಒಂದೇ ಅಂತರವೆಂದರೆ ಅವರು ಎತ್ತರದಲ್ಲಿದ್ದಾರೆ. ಮತ್ತು ತಮ್ಮ ಪುಸ್ತಕಗಳಿಂದ ಕಲಿಯುತ್ತಾರೆ ಆದರೆ ನಾನು ನನ್ನ ಶರೀರದ ಮೇಲೆ ಬಿದ್ದಿರುವ ಗುರ್ತುಗಳಿಂದ ಕಲಿಯುತ್ತೇನೆ."

# ಅಹಮದ್ ಶಾಮುಲೂ ಮತ್ತು ನಾಸಿರಾ ಶರ್ಮ ಅವರ ಮಾತುಕತೆ

ಅನು : ಡಾ. ಸುಮತೀಂದ್ರನಾಡಿಗ

ಪ್ರಶ್ನೆ : ನೀಮಾ ಯೋಶೀಜರ ಆಧುನಿಕ ಕಾವ್ಯದ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉತ್ತರ : ನೀಮಾ ಅವರ ಆಧುನಿಕ ಕಾವ್ಯದೊಂದಿಗೆ ಪಾರ್ಸಿಭಾಷೆಯ ಆಧುನಿಕ ಕಾವ್ಯ ಆರಂಭವಾಯಿತೆಂದು ಪರಿಗಣಿಸಲಾಗುತ್ತದೆ. ಎಂಟನೇ ಶತಮಾನದ ವರೆಗೆ, ಹಾಪಿಜ್ಸ್ ಕವಿಯ ಆಗಮನವಾಗುವವರೆಗೆ ಪಾರ್ಸಿ ಕವಿತೆ ಸಂಪೂರ್ಣ ವಾಗಿ ಪರಂಪರೆಯಲ್ಲಿ ಛಂದಸ್ಸು ಮತ್ತು ಅಲಂಕಾರದಲ್ಲಿ ಸಿಕ್ಕಿ ಹಾಕಿಕೊಂಡು ಬದುಕು, ಚೈತನ್ಯ ಮತ್ತು ಗತಿಶೀಲತೆಯಿಂದ ಬಹಳ ದೂರದಲ್ಲಿತ್ತು. ಹೊರಗಿನ ಪ್ರಭಾವಗಳಿಗೆ ಸಿಕ್ಕಿಹಾಕಿಕೊಂಡಿತ್ತು. ಅದರ ಸಾಧನೆಗಳು ಭೂಗೋಲ, ಇತಿಹಾಸ ಮತ್ತು ನೆನಪುಗಳಿಗೆ ಮಾತು ಸೀಮಿತವಾಗಿತ್ತು... ನೇಜಾಮಿ ಮೊದಲಾದ ಕವಿಗಳು ಇದಕ್ಕೆ ಉದಾಹರಣೆಯಾಗಿದ್ದಾರೆ.

ಪ್ರಶ್ನೆ : ನಾನು ನೇಜಾಮಿಯನ್ನು ಓದಿರುವ ಮಟ್ಟಿಗೆ ಹೇಳುವುದಾದರೆ, ಅವನಲ್ಲಿ ನಾನು ಕಂಡುಕೊಂಡದ್ದು ಇಷ್ಟು. ಅವನ ಕಾವ್ಯದಲ್ಲಿ ಸಾಮಾಜಿಕ ಚೇತನ ಎನ್ನುವ 'ಕೀಟಾಣುಗಳು' ಜಾಸ್ತಿಯಾಗಿದ್ದವು.
ಅವನ ಖಂಡಕಾವ್ಯವಾದ 'ಶೀರೀನ'ದಲ್ಲಿ ಪ್ರೇಮದ ವರ್ಣನೆಯನ್ನು ಮಾಡು ತ್ತಿದ್ದಾಗಲೂ ಆತ ವರ್ಗಗಳ ಅಸಮಾನತೆಯ ಬಗ್ಗೆ ಕೂಡ ಚರ್ಚಿಸುತ್ತಾನೆ. ಆರನೆಯ ಶತಮಾನದ ಕವಿಯಲ್ಲಿ ಇದೊಂದು ಮಹತ್ವವಾದ ವಿಷಯ ವಲ್ಲವೆ ?

ಉತ್ತರ : ಮಹತ್ವದ ವಿಷಯ ಅಲ್ಲವೆಂದು ನಾನು ಹೇಳುತ್ತಿಲ್ಲ. ಆದರೆ 'ಶೇರ್'ನ ಕಾವ್ಯರೂಪ ಮತ್ತು ಆಕೃತಿಯನ್ನು ಗಮನಿಸಿದಾಗ ಅದನ್ನು ಒಂದು ಕಾದಂಬರಿಯೆಂದು ಕರೆಯುತ್ತೇನೆ. ಆದರೆ ಫಿರ್‌ದೌಸಿ ಇದ್ದಾನಲ್ಲ, ಅವನು 'ಶಾಹನಾಮಾ' ಮಹಾಕಾವ್ಯವನ್ನು ರಚಿಸಿ ಇರಾನಿನ ಇತಿಹಾಸವನ್ನು ಕಾವ್ಯ

ವನ್ನಾಗಿ ಮಾಡಿದ್ದಾನೆ. ಅವನಲ್ಲಿ ಧ್ವನಿಪೂರ್ಣ ಪ್ರತಿಮೆಗಳ ಸುಂದರ ಪ್ರಯೋಗಗಳಿವೆ. ಬಾಣವನ್ನು ಬಿಡುವ ಸಂದರ್ಭದಲ್ಲಿ ಬಿಲ್ಲಿನ ಹುರಿಯನ್ನು ಮಿಡಿದಾಗ ಅದರಿಂದ ಹುಟ್ಟುವ ಚಿಟ್‌ಚಿಟ ಶಬ್ದಕ್ಕೆ ಮಾತಿನ ಜೀವಂತ ವಸ್ತ್ರ ವನ್ನು ತೊಡಿಸುತ್ತಾನೆ. ದೇವರು ಅಥವಾ ರಾಜ ಅಥವಾ ನ್ಯಾಯದ ಮಾತು ಬಂದಾಗ ಫಿರದೌಸಿಯು ನೂನ್ ಮತ್ತು ಮೀರ್ವ ಅಕ್ಷರಗಳನ್ನು ಬಳಸುತ್ತಾನೆ. ಉಚ್ಚಾರಣೆಯ ಸಮಯದಲ್ಲಿ ಅವನ ಕಾವ್ಯದ ಧ್ವನಿ ತಾಲುವಿನಲ್ಲಿ ಅನುರಣಿಸು ತ್ತದೆ ಮತ್ತು ಮನಸ್ಸಿನಲ್ಲಿ ಆರಾಧನೆಯ ಪ್ರಭಾವವನ್ನು ಮೂಡಿಸುತ್ತದೆ. ಈ ಎಲ್ಲ ವಿಶಿಷ್ಟತೆಗಳನ್ನೂ ಫಿರ್‌ಡಾಸಿ ಆಳವಾಗಿ ತಿಳಿದಿದ್ದ, ಆದರೆ ಶೇರ್‌ಗೆ ಅದರದೇ ಆದ ತರ್ಕವಿರುತ್ತದೆ; ಸಾಮಾನ್ಯವಾದ ನಿಯಮಬದ್ಧತೆ ಅಲ್ಲ. ಕೆಲವೊಮ್ಮೆ ಯಾವನೋ ಸಂಗೀತಗಾರ ನಿಯಮಗಳ ಅನುಸಾರವಾದ ತಾಳ ಹಾಕಿ, ಕೇವಲ ತಂತಿಗಳಿಂದಲೇ ಧ್ವನಿಯನ್ನು ಹೊರಡಿಸಬಹುದು, ಆದರೆ ಬಿಥೋವನ್ನನಂತಹ ಮೇಧಾವಿಯ ಕಲೆಯಲ್ಲಿ ಬುದ್ಧಿಶಕ್ತಿ, ವಿವೇಕವೂ ಇದ್ದು ಅವನ ಸಂಗೀತದಲ್ಲಿ ಹುದುಗಿರುವ ಅರ್ಥವನ್ನೂ ತಿಳಿಯುವಂತೆ ಮಾಡುತ್ತವೆ. ಮಾನವೀಯ ಭಾವನೆಯ ಬಗ್ಗೆ ಆಳವಾದ ತಿಳುವಳಿಕೆಯನ್ನು ಒಂದು ಸ್ವರದಲ್ಲಿ ಹೊರಮೂಡಿಸಿದಾಗ ಅದು ಅರ್ಥಪೂರ್ಣವೂ ಮಹತ್ವಪೂರ್ಣವೂ ಆಗುತ್ತದೆ. ಹೃದಯದ ಆಳವನ್ನೂ ಮುಟ್ಟುತ್ತದೆ. ವಾಸ್ತವದಲ್ಲಿ ಸಂಗೀತದ ಪ್ರಭಾವ ಬೇರೆಯೇ ಆಗಿರುತ್ತದೆ.

ಇದು ಎಂಟನೇ ಶತಮಾನದವರೆಗಿನ ಮಾತು. ಅದಾದ ನಂತರ ನಮಗೆ ಹಾಫಿಜ್‌ನಂತಹ ಮಹಾಕವಿ ಸಿಗುತ್ತಾನೆ. ಅವನ ಬಗ್ಗೆ ಎಲ್ಲವನ್ನೂ ಹೇಳಿದ ಮೇಲೆ ಹೇಳಬೇಕಾದ ಒಂದು ಮಾತೆಂದರೆ, ಅವನು ಬೇರೆಯವರಿಗಾಗಿ ಏನನ್ನೂ ಉಳಿಸಲಿಲ್ಲ. ಹಾಫಿಜ್ನಿನ ನಂತರ 6 ಶತಮಾನಗಳವರೆಗೆ ಪಾರ್ಸಿ ಕಾವ್ಯ ಬರಡಾಗಿತ್ತು : ಕವಿಗಳು ಬಂದರು, ಶೇರ್‌ಗಳನ್ನು ರಚಿಸಿದರು, ಹೊರಟು ಹೋದರು. ಮಹತ್ವಪೂರ್ಣವಾದದ್ದು ಏನೂ ಕೊಡಲಿಲ್ಲ, ಇದಾದ ನಂತರ ನೀಮಾ ಯೋಶೀಜನ ಆಗಮನವಾಯಿತು. ಬರುತ್ತಿದ್ದ ಹಾಗೇ ಯೋಶೀಜನು ಪಾರ್ಸಿ ಕಾವ್ಯದ ರದೀಫ್‌ಕಾಫಿಯೋಗಳ ಉದ್ದ ಉದ್ದ ಸಾಲು ಗಳನ್ನು ಮುರಿದ. ಅವನು ಅವುಗಳಿಗೆ ದೈವಿಕತೆಯ ರೂಪವನ್ನು ಕೊಟ್ಟ. ಈ ಪ್ರಕಾರದಲ್ಲಿ ಅವನು ಬಹುಕಾಲ ಶೇರ್ ರಚನೆ ಮಾಡಿದ್ದು ಇಂದಿಗೂ ಸರ್ವಮಾನ್ಯವಾಗಿದೆ. ಅವನ ಕಾವ್ಯದ ಎರಡು ಸಾಧನೆಗಳು ಒಬ್ಬ ಕವಿಯಲ್ಲಿ ಕಾಣಸಿಗುವುದು ಅಸಾಧ್ಯ, ಏಕೆಂದರೆ ಯಾರಾದರೂ ಒಂದು ರೀತಿಯ ಸಾಧನೆ ಯನ್ನು ಮಾಡಿದರೆ ಅದನ್ನು ಇನ್ನೊಬ್ಬ ಪೂರ್ಣತೆಯವರೆಗೆ ಕೊಂಡೊಯ್ಯು ತ್ತಾನೆ. ಆದರೆ ಈ ವಿಷಯದಲ್ಲಿ ಮಾತ್ರ, ನೀಮಾ ಪಾರ್ಸಿ ಆಧುನಿಕ ಕವಿತೆ

ಯನ್ನು ರೂಪಿಸಿದ್ದಷ್ಟೇ ಅಲ್ಲ, ಅದನ್ನು ಪರಾಕಾಷ್ಠೆಯವರೆಗೆ ಮುಟ್ಟಿಸಿದ. ನೀಮಾ ಸತ್ತು 20–25 ವರ್ಷಗಳಾಗುತ್ತ ಬಂದರೂ, ನೀಮಾ ಹಾಕಿದ ಮೇಲ್ಪಂಕ್ತಿಯಲ್ಲೇ ಪಾರ್ಸಿ ಕವಿಗಳು ಇನ್ನೂ ಕಾವ್ಯವನ್ನು ರಚಿಸುತ್ತಿದ್ದಾರೆ.

ಪ್ರಶ್ನೆ : ಪ್ರತಿಯೊಂದು ಕೃತಿಯೂ ಆ ಕಾಲದ ಒತ್ತಾಯ ಮತ್ತು ಬೇಡಿಕೆಗಳ ಪ್ರಕಾರ ಅಭಿವ್ಯಕ್ತಿಗೊಂಡು ರೂಪವನ್ನು ಪಡೆಯುತ್ತದೆ. ನೀಮಾ ಕಾವ್ಯ ರಚನೆಗೆ ಪ್ರಾರಂಭಿಸಿದ ದಿನಗಳಲ್ಲಿ ಪ್ರಚಾರದಲ್ಲಿದ್ದ 'ಕ್ಲಾಸಿಕ್' ಕಾವ್ಯದ ಬಗ್ಗೆ ಏನು ಹೇಳುತ್ತೀರಿ ?

ಉತ್ತರ : ನೀಮಾನ ಕ್ಲಾಸಿಕ್ ಶೇರ್‌ರಳನ್ನು ನಾನು ಇಷ್ಟಪಡುವುದಿಲ್ಲ. ಬಹುಶಃ ಆ ರೀತಿಯಲ್ಲಿ ಅವನು ಯಶಸ್ಸನ್ನು ಪಡೆಯದೇ ಇದ್ದದ್ದಕ್ಕೆ, ಅವನು ಹೊಸ ರೀತಿಯನ್ನು ಹುಡುಕುತ್ತಿದ್ದದ್ದೆ ಕಾರಣವಾಗಿರಬೇಕು. ಅದ್ದರಿಂದಲೇ ಅವನ ಕ್ಲಾಸಿಕಲ್ ಮಾರ್ಗದ ಕಾವ್ಯ ದುರ್ಬಲವಾಗಿರಬೇಕು. ಆ ಮಾರ್ಗದ ಒಂದೇ ಒಂದು ಒಳ್ಳೆಯ ಕವಿತೆಯ ಹೆಸರು ಹೇಳಬೇಕಾದರೆ 'ಅಫಸಾನಾ' ಎಂದು ಹೇಳಬಹುದು. ಆದರೆ 'ಅಫಸಾನಾ' ಅದನ್ನು ಅನುಸರಿಸುವಷ್ಟು ಉತ್ತಮವಾಗಿರಲಿಲ್ಲ.

ಪ್ರಶ್ನೆ : ತನ್ನ ಜೀವನದ ಕಡೆಯ ಹತ್ತು ವರ್ಷಗಳಲ್ಲಿ ನೀಮಾ ಬರೆದದ್ದು ಆಧುನಿಕ ಪಾರ್ಸಿ ಕಾವ್ಯದಲ್ಲಿ ಅತ್ಯುತ್ತಮವಾದದ್ದು ಎಂದು ನಿಮಗೆ ಅನಿಸುವುದಿಲ್ಲವೆ ?

ಉತ್ತರ : ಅದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಕೊನೆಯ ಹತ್ತು ವರ್ಷ ಎಂದು ಹೇಳದೆ ಅವನ ಜೀವನದಲ್ಲಿ "ಯಾವ್ನೋಖಲಾ" ಎನ್ನುವ ಕೃತಿ ಪ್ರಕಟವಾದಾಗಿನಿಂದ ಎಂದು ಹೇಳುವುದು ಉತ್ತಮ.

ಪ್ರಶ್ನೆ : ನೀಮಾ ಪಾರ್ಸಿ ಕಾವ್ಯಕ್ಕೆ ಕ್ರಾಂತಿಯನ್ನು, ಹೊಸ ರೂಪವನ್ನು ಮತ್ತು ಹೊಸ ಜೀವವನ್ನು ಕೊಟ್ಟ. ಹೊಸ ರೀತಿಯ ಶಬ್ದ – ಜೋಡಣೆಯನ್ನು ಸಫಲವಾಗಿ ಪ್ರಯೋಗಿಸಿದ. ಆದರೆ ಸ್ವತಃ ನೀಮಾನ ಜೀವನದಲ್ಲಿ ಮತ್ತು ಅವನ ಸಾಮಾಜಿಕ ದೃಷ್ಟಿಕೋಣದಲ್ಲಿ ಯಾವ ಕ್ರಾಂತಿಕಾರತನ ಇತ್ತು ?

ಉತ್ತರ : ನೋಡಿ ಮೇಡಂ, ನಾನು ಈ ಎರಡು ವಿಷಯಗಳನ್ನೂ ಬೇರೆಯಾಗಿಯೇ ನೋಡುತ್ತೇನೆ, ಏಕೆಂದರೆ ಒಂದಕ್ಕೂ ಇನ್ನೊಂದಕ್ಕೂ ಯಾವ ಸಂಬಂಧವೂ ಇಲ್ಲ. ಯಾರೇ ಇರಲಿ ಅವನು ಕವಿಯಾಗುವುದು ಎಷ್ಟು ಮುಖ್ಯವೋ, ಕ್ರಾಂತಿಕಾರನಾಗುವುದು ಅಷ್ಟು ಮುಖ್ಯವಲ್ಲ. ಅವನು ಎಷ್ಟರಮಟ್ಟಿಗೆ ಕವಿ, ಎಷ್ಟರಮಟ್ಟಿಗೆ ಚಿತ್ರಗಾರ ಅಥವಾ ಇನ್ನಾವ ವಿಶಿಷ್ಟತೆಯನ್ನು ಹೊಂದಿದ್ದಾನೆ ಎನ್ನುವುದು ಮುಖ್ಯ. ಅವನು ಕ್ರಾಂತಿಕಾರಿಯೋ ಅಲ್ಲವೋ ಅದು ಬೇರೆ

ಮಾತು. ಅದು ಕಲೆಗೆ ಸಂಬಂಧಿಸಿದ್ದಲ್ಲ. ಅದು ಆ ವ್ಯಕ್ತಿಗೆ ಸಂಬಂಧಿಸಿದ್ದು. ಒಬ್ಬ ದೊಡ್ಡ ಕವಿ ಅಥವಾ ಸಂಗೀತಗಾರ ಸಾಮಾಜಿಕ ಅಥವಾ ವೈಚಾರಿಕ ಕ್ಷೇತ್ರದಲ್ಲಿ ಲೆಕ್ಕಕ್ಕೂ ಬರದೆ ಇರಬಹುದು.

ಪ್ರಶ್ನೆ : ಅಂದರೆ ನೀಮಾನಿಗೆ ರಾಜಕೀಯದ ತಿಳುವಳಿಕೆ ಕಡಿಮೆಯಾಗಿತ್ತು. ಮತ್ತು ಇರಾನಿನ ಉಸಿರುಕಟ್ಟಿಸುವ ವಾತಾವರಣ ಮತ್ತು ಅದರ ಬಗ್ಗೆ ಆಲೋಚನೆ ಅವನಿಗೆ ಬೇಕಿರಲಿಲ್ಲ. ಅವನಿಗೆ ಅಕ್ಕಪಕ್ಕದಲ್ಲಾಗುತ್ತಿದ್ದ ಘಟನೆಗಳ ಅರಿವಿರಲಿಲ್ಲ ಎನ್ನಬಹುದೆ ?

ಉತ್ತರ : ನೀಮಾನಲ್ಲಿ ಆ ಕಾಲದ ಅನುಭವವಿತ್ತು. ಆ ನೋವಿನ ನೆರಳು ಅವನ ಕಾವ್ಯದ ಪ್ರತಿಯೊಂದು ಹೆಜ್ಜೆಯಲ್ಲೂ ಕಾಣಿಸುತ್ತದೆ. ಅವನ ಕಾವ್ಯವಾದ 'ಕಾರೇಶ್ವೇ ಪಾ'ದಲ್ಲಿ ಕಾಣಿಸುವಂತಹ ಸಾಮಾಜಿಕ ಜ್ಞಾನ ಮತ್ತು ನಿಗೂಢತೆಯ ಸ್ಪರ್ಶ ನನಗೆ ಇನ್ನೆಲ್ಲೂ ಕಾಣಿಸುವುದಿಲ್ಲ. ಇದಾದಮೇಲೆ ಅವನ 'ಮುರ್ಗಾನ್' ಮೊದಲಾದ ಬೇರೆ ಕವಿತೆಗಳಲ್ಲಿ ಕಾಣುವ ಆ ಉಸಿರುಕಟ್ಟಿಸುವ ಅನುಭವ. ಮುಹಮ್ಮದ್ ರಜಾ ಶಾಹೆ ಕಬೀರನ (ಶಾಹನ ತಂದೆ) ಕಾಲದ ಇರಾನಿನಲ್ಲಿ ವ್ಯಾಪಕವಾಗಿತ್ತು. 1953ರಲ್ಲಾದ ಪ್ರತಿಕ್ರಾಂತಿಯ ನಂತರ ನೀಮಾ ಎರಡು ಮೂರು ವರ್ಷ ಮಾತ್ರ ಬದುಕಿದ್ದ.

ಪ್ರಶ್ನೆ : 'ಬಿಲಿಸ್ಟ'ದಲ್ಲಿ ಸ್ತ್ರೀಯರ ಮನೋಭಾವ ಅತ್ಯುತ್ತಮವಾಗಿ ಮೂಡಿಬಂದಿದೆ, ಅದರಲ್ಲೂ ಅವರ ಬಾಲ್ಯಕಾಲದ ಭಾವನೆಗಳು. ನಿಮಗೆ ಫರೋಗನ ಕಾವ್ಯ ಬಿಲಿಸ್ಟಕ್ಕೆ ಹತ್ತಿರವಾಗಿ ಕಾಣಿಸುವುದಿಲ್ಲವೆ ?

ಉತ್ತರ : ಪ್ರತಿಯೊಬ್ಬ ಕೃತಿಕಾರನಲ್ಲೂ ಒಬ್ಬ ಎಳೆಯ ಇರುತ್ತಾನೆ. ಆ ಹುಡುಗ ಏಳೆಂಟು ವರ್ಷದ ಮುಗ್ಧ ಬಾಲಕನಾಗಿರಬೇಕೆನ್ನುವುದೇ ಕಾವ್ಯ ಕವಿಗೆ ಹಾಕುವ ಶರತ್ತು. ಭಾವನೆಗಳ ಬೋನಿನಲ್ಲಿ ಆ ಹುಡುಗ ಸಿಕ್ಕುಹಾಕಿಕೊಳ್ಳಬಾರದು. ಅದರ ಪ್ರಾಮಾಣಿಕತೆಯೇ ಕಲಾತ್ಮಕತೆಯ ಸೌಂದರ್ಯವೆನ್ನಬಹುದು. ಒಮ್ಮೆ ನಾನೊಬ್ಬ ಮಹಿಳೆಯೊಂದಿಗೆ ಮಾತನಾಡಿದ್ದೆ, ಅದು 'ವಾಮದಾದ' ಸಮಾಚಾರ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಬಟ್ಟೆ ಒಣಹಾಕುವ ಹಗ್ಗದ ಮೇಲೆ ಒಂದು ಹದ್ದು ಬಂದು ಕೂತರೆ, ಆ ಹಗ್ಗದಿಂದ ಯಾವ ಸ್ವರವೂ ಹೊರಡುವುದಿಲ್ಲ. ಆದರೆ ಒಂದು ವಾದ್ಯಯಂತ್ರ ಗೋಡೆಗೆ ತಗುಲಿಸಿ ಇಟ್ಟ ಒಂದು ತಂತೀವಾದ್ಯದ ಮೇಲೆ ಒಂದು ನೊಣ ಕೂತರೂ ಸ್ವರ ಹೊರಡುತ್ತದೆ. ಒಂದು ಎತ್ತರವಾದ ಧ್ವನಿ ಹೊರಡುತ್ತದೆ. ಹೊರಗಿನ ಪ್ರತಿಯೊಂದು ಹೊಡತಕ್ಕೂ, ಅದು ಎಷ್ಟೇ ಮೆತ್ತಗಿದ್ದರೂ ತಂತೀವಾದ್ಯದ ಪ್ರತಿಕ್ರಿಯೆ ಆಗಿಯೇ ಆಗುತ್ತದೆ. ಹಗ್ಗದಲ್ಲಿ ಈ ಅನುಭವವನ್ನು ಹುಟ್ಟಿಸುವುದಕ್ಕಾಗುವುದಿಲ್ಲ. ನನ್ನ ಪ್ರಕಾರ

ಈ ಹೊತ್ತಿನ ಸಾಹಿತ್ಯ ಸಮಾಜದಲ್ಲಿ ತನ್ನ ಮಹತ್ವಪೂರ್ಣ ಪ್ರಭಾವವನ್ನು ಮತ್ತು ಸ್ಥಾನವನ್ನು ಉಳಿಸಿಕೊಂಡಿದೆ. ಅದಕ್ಕೆ ಮಹತ್ವಪೂರ್ಣವಾದ ಪಾತ್ರ ವಿದೆ. ಹೆಗೆಲ್ಲನ ಪ್ರಕಾರ ಸುಂದರವಾದ ವಸ್ತುಗಳಿಂದ ಉಪಯೋಗವಿದೆ, ಆದರೆ ನನ್ನ ಪ್ರಕಾರ ಸುಂದರವಾದ ವಸ್ತುಗಳು ಹೆಚ್ಚು ಸೌಂದರ್ಯವನ್ನು ತಮ್ಮಲ್ಲೇ ಇಟ್ಟುಕೊಳ್ಳುತ್ತವೆ.

ಪ್ರಶ್ನೆ : ಈ ದೃಷ್ಟಿಕೋನ ಸೌಂದರ್ಯಾತ್ಮಕವಾಗಿರುತ್ತದೋ ಇಲ್ಲವೋ, ಆದರೆ ವ್ಯಾವಹಾರಿಕವಾಗಿದೆ. ಈಗೊಂದು ಪ್ರಶ್ನೆಯನ್ನು ಕೇಳುತ್ತೇನೆ. ಇರಾನಿನಲ್ಲಿ ಒಂದು ವ್ಯವಸ್ಥೆಯಾಗುವವರೆಗೆ ಪ್ರಾರಂಭದ ಪಾರ್ಸಿ ಕಾವ್ಯ ಹೇಗಿತ್ತು ? ಅದರ ಮೇಲೆ ವಿದೇಶಿ ಸಾಹಿತ್ಯದ ಪ್ರಭಾವವಿತ್ತೆ ?

ಉತ್ತರ : ನಾನು ಮುಂಚೆಯೇ ಹೇಳಿದ ಹಾಗೆ ಹಾಫೀಜ್ನನ ನಂತರ ಬಹಳ ಕಾಲದ ವರೆಗೆ ಯಾರೂ ಇದ್ದಂತೆನಿಸುವುದಿಲ್ಲ. ಮಿಸಾಲನ ರೀತಿಯಲ್ಲಿ, ಸುವ್ಯವಸ್ಥೆಯ 20 ವರ್ಷಕ್ಕೂ ಮುಂಚೆ ಪದ್ಯವೇ ಇರಲಿಲ್ಲ, ಗದ್ಯದ ಪರಿಸ್ಥಿತಿಯೂ ಕೆಟ್ಟಿತ್ತು. ಸಾಮಾಜಿಕ ಸಮಸ್ಯೆ ಕಾವ್ಯವನ್ನು ಎಷ್ಟರಮಟ್ಟಿಗೆ ಸುತ್ತಿಕೊಂಡಿತ್ತೆಂದರೆ ಕಾವ್ಯ ತನ್ನ ನಿಯಮ, ರೂಪ, ಉದ್ದೇಶ, ಚೈತನ್ಯ, ಸಾಂಸ್ಕೃತಿಕ ವಾತಾವರಣ, ಎಲ್ಲವನ್ನೂ ಕಳೆದುಕೊಂಡಿತ್ತು. ಅಶ್ರಫಉದ್ದೀನ್ ಹುಸೈನಿಯ ಪತ್ರಿಕೆಯಾದ 'ನಸೀಮೆ ಶುಮಾಲ್' ಕಳ್ಳೇಪುರಿಯ ಹಾಗೆ ಮಾರಾಟವಾಗುತ್ತಿತ್ತು. ಅದರಲ್ಲಿ ಎರಡುಸಾಲಿನ ಪದ್ಯಗಳನ್ನು ಅಚ್ಚುಮಾಡುತ್ತಿದ್ದರು. ಒಳ್ಳೆಯ ಪ್ರೆಸ್ ಇರ ಲಿಲ್ಲ. ರಾತ್ರಿಯಿಡೀ 1000 ಪ್ರತಿಗಳನ್ನು ಕೆಟ್ಟದಾಗಿ ಅಚ್ಚುಹಾಕಿ, ಜನರಿಗೆ ಮುಟ್ಟಿಸುತ್ತಿದ್ದರು. ಆದರೆ ಅದರಲ್ಲಿ ಅಚ್ಚಾದ ಶೇರ್‌ಗಳು ಅದರಜೊತೆಗೆ ಮರೆತುಹೋದವು.

ಪ್ರಶ್ನೆ : ಸಂವಿಧಾನಪದ್ಧತಿ ಬಂದಮೇಲೆ ಯಾವ ಬದಲಾವಣೆಯಾಯಿತು ?

ಉತ್ತರ : ಅದಾದ ಕೂಡಲೆ ನೀಮಾ ಕಾಣಿಸಿಕೊಳ್ಳುತ್ತಾನೆ. ನೀಮಾ ಜೊತೆಯಲ್ಲಿ ಇನ್ನೊಂದು ಗುಂಪು ಕಾಣಿಸಿಕೊಳ್ಳುತ್ತದೆ. ಗುಂಪಿನವರು ನೀಮಾನ ಪ್ರಯೋಗ ಗಳನ್ನು ತಮ್ಮದಾಗಿ ಮಾಡಿಕೊಂಡು, ಅದನ್ನು ಮುಂದುವರೆಸಿಕೊಂಡು ಹೋದರು.

ಪ್ರಶ್ನೆ : ಈ ಕ್ರಾಂತಿಯ ನಂತರ ಆಧುನಿಕ ಪಾರ್ಸಿ ಕಾವ್ಯದಲ್ಲಿ ಯಾವ ಬದಲಾವಣೆ ಗಳಾದವು ?

ಉತ್ತರ : ಬದಲಾವಣೆ ಏನು ಬಂತು ? ಆಮೇಲೆ ಬರೆದದ್ದೆಲ್ಲ ಬೊಕಳೆ.

ಪ್ರಶ್ನೆ : ಕಳೆದ ಎರಡುವರ್ಷಗಳಲ್ಲಿ ಬಂದಿರುವ ಎಲ್ಲ 'ಶೇರ್'ಗಳನ್ನು ನೋಡಿದರೆ ಕವಿತ್ವ ಕಡಿಮೆಯಾಗಿದೆ, ಸ್ಲೋಗನ್ಸ್ ಜಾಸ್ತಿಯಾಗಿದೆ ಅನ್ನಿಸುವುದಿಲ್ಲವೆ ?

ಉತ್ತರ : ಸ್ಲೋಗನ್‌ಗಿಂತಲೂ ಕೆಳಮಟ್ಟದವು. ಅದು ಸ್ಲೋಗನ್ನಿನ ಮಹತ್ವವನ್ನೂ ಇಟ್ಟುಕೊಂಡಿಲ್ಲ. ಕ್ರಾಂತಿಯನಂತರ ಸಾಹಿತ್ಯ ಕಸದ ರಾಶಿಯಾಗಿದೆ. ಇದಕ್ಕೆ ಕಾರಣ, ಅವರು ಬರೆಯುವಾಗ ಅರ್ಥ ತಮ್ಮದಾಗಿತ್ತು. ಇನ್ನರ್ಥ ಸೆನ್ಸಾರ್‌ಬೋರ್ಡನ್ನು ಲಕ್ಷ್ಯದಲ್ಲಿಟ್ಟುಕೊಂಡು ಭಾವನೆಯನ್ನು ಮುಚ್ಚಿಮುಚ್ಚಿ ಹೇಳುತ್ತಿದ್ದರು. ಸಿಕ್ಕಿಹಾಕಿಕೊಳ್ಳಬಾರದೆಂದು ಹೀಗೆ ಮಾಡುತ್ತಿದ್ದರು. ಈ ರೀತಿಯಲ್ಲಿ 'ಸೆನ್ಸಾರ್' ನಮಗೆ ಉಪಕಾರವನ್ನೇ ಮಾಡಿತು.

ಪ್ರಶ್ನೆ : ಹಾಗಾದರೆ ನಿಮ್ಮ ಅಭಿಪ್ರಾಯದಲ್ಲಿ, ಆ ಕಾಲದ ಸಾಹಿತ್ಯ ಹೆಚ್ಚು ಅರ್ಥಪೂರ್ಣವಾಗಿರುವ, ಹೆಚ್ಚು ಕಲಾತ್ಮಕತೆಯಿಂದ ಪರಿಪೂರ್ಣವಾಗಿತ್ತು ಎಂದಾಯಿತಲ್ಲವೆ ?

ಉತ್ತರ : ನೀವು ಅಂದುಕೊಂಡದ್ದು ಸರಿ. ನಾನು ಶಾಸನ್ನು ಬಹಳಷ್ಟು ಛೇಡಿಸಿದ್ದೇನೆ. ಸೆನ್ಸಾರ್‌ನವರೇನೊ ಅರ್ಥಮಾಡಿಕೊಳ್ಳದೆ ಅಚ್ಚುಮಾಡಲಿಕ್ಕೆ ಅವಕಾಶ ಕೊಟ್ಟಿದ್ದರು. ಇವೇ ಪುಸ್ತಕಗಳು ಎಂಟುಹತ್ತು ಸಾರಿ ಅಚ್ಚಾಗಿದ್ದವು. ಉದಾಹರಣೆಗೆ ನಾನು ಶಾನ 'ಇಂಕಿಲಾಬ್ ಸಫೀದ'ನ್ನು ತಮಾಷೆ ಮಾಡಿದ್ದೆ, ಏಕೆಂದರೆ "ಅರ್ಥರಾತ್ರಿಯಲ್ಲಿ ಸೂರ್ಯನು ಹುಟ್ಟಿದ। ಜನರಿಗೆ ನಂಬಿಕೆ ಹುಟ್ಟಿಸಿದ। ಅವನಿಗೆ ಯಾರೋ ಹೇಳಿದ, ಅರೆ ಮೂರ್ಖ। ಇವನೆಂತಹ ಸೂರ್ಯ। ಗಡಿಯಾರ ನೋಡು। ನಮಾಜಿನ ಧ್ವನಿಯನ್ನು ಕೇಳು। ಇಬ್ಬರೂ ಸೂರ್ಯನಿರುವುದೇ ಸುಳ್ಳು ಅನ್ನುತ್ತಿದ್ದಾರೆ. ನಮ್ಮ ಓದುಗರಿಗೆ ಇದು ಅರ್ಥವಾಗುತ್ತಿತ್ತು ; (ಒಂದು ಆಳವಾದ ಗಂಭೀರವಾದ ಆನಂದದಿಂದ ತುಂಬಿದ ನಗು) ಆದರೆ ಸೆನ್ಸಾರ್‌ನವರಿಗೆ ನನ್ನ ಈ ಶೈಲಿ ಅರ್ಥವಾಗಲಿಲ್ಲ.

ಪ್ರಶ್ನೆ : ಸೆನ್ಸಾರ್‌ಬೋರ್ಡ್‌ನ ಸದಸ್ಯರು ಹೆಚ್ಚು ಓದಿದವರಲ್ಲದೆಯೂ ಹೀಗಾಗಿರಬಹುದಲ್ಲವೆ ?

ಉತ್ತರ : ಅದು ನಿಜವೂ ಹೌದು. ಏಕೆಂದರೆ ಯಾವುದು ಪ್ರಪಂಚಕ್ಕೆ ಅರ್ಥವಾಗುತ್ತಿತ್ತೊ ಅದನ್ನೂ ಅರ್ಥಮಾಡಿಸಬೇಕಾಗಿತ್ತು. ಸೆನ್ಸಾರ್‌ಬೋರ್ಡ್‌ನವರು

ಏನು ಹೇಳುತ್ತಿದ್ದರೆಂದರೆ ಶಬ್ದಭಂಡಾರ ನಮ್ಮ ಉಪಯೋಗಕ್ಕಾಗಿಯೇ ಇದೆ, ಆದರೆ ಒಂದು ಶಬ್ದ ಮಾತ್ರ ಉಪಯೋಗಿಸಬಾರದು, ಅದು ಯಾವುದೆಂದರೆ "ಸ್ವಾತಂತ್ರ್ಯ".

ಪ್ರಶ್ನೆ : ಕ್ರಾಂತಿಯನಂತರದ ಕಾವ್ಯದ ಸ್ಥಿತಿ...?

ಉತ್ತರ : ಬಲವನ್ನು ಉಪಯೋಗಿಸಿ ಜನ ಸ್ವಾತಂತ್ರ್ಯವನ್ನು ಪಡೆದುಕೊಂಡರು, ಮತ್ತು ಶಾಹನನ್ನು ಹೊರಗೆ ಹಾಕಿದರು. ಇದ್ದಕ್ಕಿದ್ದ ಹಾಗೆ, ಹಿಂದೆ ಉಪಯೋಗಿಸಿದ್ದ ಭಾಷಾಶೈಲಿ ಅರ್ಥಹೀನವಾಗಿ ಕಂಡಿತು. ಆ ಸಮಯದಲ್ಲಿ ಕವನಸಂಗ್ರಹಗಳನ್ನು ಸಾಮಾನ್ಯ ಜನರು ಹುಡುಕಿಕೊಂಡುಹೋಗಿ ಕೊಂಡುಕೊಳ್ಳುತ್ತಿರಲಿಲ್ಲ. ಆದರೆ ಬುದ್ಧಿಜೀವಿಗಳು, ವಿದ್ಯಾರ್ಥಿಗಳು ಮತ್ತು ವಿದ್ಯಾವಂತ ಜನರೇನೋ ಇದ್ದರು. ಈ ಸಮಯದಲ್ಲಿ ಕವಿಯಾದವನು ಸಮಗ್ರ ಜನತೆಯ ನಾಲಗೆಯಾಗಿ ಮಾತಾಡುವುದು ಅವಶ್ಯವಾಗಿತ್ತು. ಆದ್ದರಿಂದ ಓದುವ ಜನರೂ ಬದಲಾದರು. ಈ ಹೊಸ ಓದುಗರು ಮೊದಲಿದ್ದ ಓದುಗರಾಗಿರಲಿಲ್ಲ. ಅವರು ಕಠಿಣ ಪರಿಸ್ಥಿತಿಯನ್ನೂ ಮತ್ತು ಎಲ್ಲಿ ಯಾರು ಹುತಾತ್ಮರಾದರು ಎನ್ನುವುದನ್ನೂ ಕಾವ್ಯದ ಮೂಲಕ ಓದಿ ತಿಳಿದುಕೊಳ್ಳುವ ನಗರದ ಜನರಾಗಿದ್ದರು. ಶಾಹ ಏನೇನು ಮಾಡಿದ ಎನ್ನುವುದನ್ನು ತಿಳಿದುಕೊಳ್ಳುವುದೂ ಅವರಿಗೆ ಬೇಕಾಗಿತ್ತು. ನಮಗೆ ಇದೆಲ್ಲವನ್ನೂ ಬರೆಯುವುದು ಅಸಾಧ್ಯವಾಗಿತ್ತು. ನನಗೀಗ 55 ವರ್ಷ. ನಾನು 17ನೆ ವರ್ಷದಿಂದ ಕಾವ್ಯ ರಚನೆ ಮಾಡುತ್ತ ಬಂದಿದ್ದೇನೆ. ಇದ್ದಕ್ಕಿದ್ದ ಹಾಗೆ ನಾನು ನನ್ನ ಭಾಷೆಯನ್ನು ಬದಲಾಯಿಸಿಕೊಳ್ಳುವುದು ಅಥವಾ ಹೊಸಭಾಷೆಯನ್ನು ಮಾರುಕಟ್ಟೆಯಿಂದ ಕೊಂಡುಕೊಳ್ಳುವುದು ಅಥವಾ ಯಾರಿಂದಲಾದರೂ ಕಡ ಪಡೆಯುವುದು ಹೇಗೆ ಸಾಧ್ಯ ?

ಪ್ರಶ್ನೆ : ಕ್ರಾಂತಿಯ ನಂತರ ಬರೆಯಲಿಕ್ಕೆ ಆರಂಭಿಸಿದ ಇಂತಹ ಕವಿಗಳು ವೃತ್ತಪತ್ರದ ಭಾಷೆಯನ್ನು ಉಪಯೋಗಿಸುತ್ತಿದ್ದಾರೆ ಎನ್ನುವ ಮಾತು ಕೇಳಿಬರುತ್ತಿದೆ.

ಉತ್ತರ : ಒಂದು ವರ್ಷದಲ್ಲಿ ಬರವಣಿಗೆ...ಏನೊ ನನಗೆ ಅರ್ಥವಾಗುತ್ತಿಲ್ಲ... ಯಾರು ಎಷ್ಟು ಯಶಸ್ವಿಯಾಗುತ್ತಾರೆ ? ಅನೇಕ ವರ್ಷಗಳು ಒಂದೇ ವಿಷಯವನ್ನು ಹಿಡಿದು ಕೆಲಸಮಾಡಿದವರು ಯಶಸ್ವಿಯಾಗಬಹುದು ಮತ್ತು ಕೆಲಸವನ್ನು ಮೊದಲಿನಿಂದಲೂ ಮಾಡುತ್ತ ಬಂದವರು ಯಶಸ್ವಿಯಾಗಬಹುದು. ನೀವು ನನ್ನ ಭಾಷೆಯನ್ನು ಸಾಲವಾಗಿ ಪಡೆಯಲಿಕ್ಕಾಗುವುದಿಲ್ಲ; ನೀವು ಭಾಷೆಯನ್ನು ಸಂಸ್ಕರಿಸಿ ಶುದ್ಧಿಮಾಡಿಕೊಂಡು ಬಳಸಲಿಕ್ಕೆ ನಲವತ್ತು ಐವತ್ತು ವರ್ಷ

ಕಷ್ಟಪಡಬೇಕಾಗುತ್ತದೆ. ಆಗ ಭಾಷೆ ನಿಮ್ಮ ಹಿಡಿತಕ್ಕೆ ಸಿಗಬಹುದು. ನನಗೆ ಇನ್ನೊಂದು ಮಾತು ಅರ್ಥವಾಗುವುದಿಲ್ಲ. ಎಲ್ಲರಿಗೂ ಬೇಕಾಗುವ ಹಾಗೆ ಬರೆಯುವುದು ಅಂದರೇನು ? ಎಲ್ಲ ಜನಗಳ ಸಾಂಸ್ಕೃತಿಕ ಅಭಿರುಚಿಯನ್ನು ಗಮನದಲ್ಲಿಟ್ಟುಕೊಂಡು ಜನರ ವರ್ಗೀಕರಣ ಮಾಡಬೇಕಾಗುತ್ತದೆ.

ಪ್ರಶ್ನೆ : ಇವತ್ತಿನಿಂದ ಇನ್ನೆರಡು ವರ್ಷದಲ್ಲಿ ನಮಗೆ ಪಾರ್ಸಿಯಲ್ಲಿ ದೊಡ್ಡ ಕಾವ್ಯ ಸಾಮಗ್ರಿ ಓದಲು ಸಿಗುತ್ತದೆ, ಅದನ್ನು ಈಗ ಸದ್ಯಕ್ಕೆ ಅಚ್ಚುಮಾಡಲಾಗುತ್ತಿಲ್ಲ ಅನಿಸುತ್ತದೆ.

ಉತ್ತರ : ಯಾಕಾಗಬಾರದು ? ಪ್ರಪಂಚ ಇವತ್ತೇ ಮುಳುಗಿಹೋಗುವುದಿಲ್ಲ, ಆದ್ದರಿಂದ ಯಾರು ಏನಾಗುತ್ತಾರೆ ಅಂತ ಈಗಲೇ ತೀರ್ಮಾನಿಸಬೇಕಾಗಿಲ್ಲ. ಇರಲಿ, ಈಗಲೂ ಒಳ್ಳೆಯ ಕವಿಗಳು ಬರುತ್ತಾರೆ. ಬಹಳಷ್ಟು ಸಾಹಿತ್ಯ ಅಸ್ತಿತ್ವಕ್ಕೆ ಬರುತ್ತದೆ. ಈಗ ಕೆಲವು ದಿನಗಳ ಹಿಂದೆ ಒಬ್ಬ ತರುಣ ಕವಿ ತನ್ನ ಶೇರ್‌ಗಳನ್ನು ತೋರಿಸಲಿಕ್ಕೆ ನನ್ನ ಹತ್ತಿರ ಬಂದಿದ್ದ. ನಾನು ಅವನಿಗೆ "ಒಳ್ಳೆಯ ಕಾವ್ಯದ ಮಾತು ಬಂದಾಗ ನಾವು ಹಾಫೀಜ್ನನ ಹೆಸರನ್ನು ಹೇಳುತ್ತೇವೆ. ಆರ್ನೂರು ವರ್ಷದ ಹಿಂದೆಯೇ ಪಾರ್ಸಿಭಾಷೆ ಸತ್ತುಹೋಯಿತೆ ?" ಎಂದು ಹೇಳಿದೆ. ಆದರೆ ಭವಿಷ್ಯದ ಬಗ್ಗೆ ಏನನ್ನು ಹೇಳುವುದೂ ಕಷ್ಟ.

ಪ್ರಶ್ನೆ : ಇಸ್ಮಾಯಿಲ್ ಖುಯೀ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಅವರು ವಿಶೇಷ ಸಾಹಿತ್ಯಕ್ಕೆ ಪ್ರಸಿದ್ಧರಾಗಿದ್ದಾರೆ.

ಉತ್ತರ : ಅವರಲ್ಲಿ ಎರಡು ಕೆಟ್ಟಗುಣಗಳಿವೆ. ಒಂದು, ಅವರು ತತ್ವಶಾಸ್ತ್ರದ ಪ್ರೊಫೆಸರ್. ಆದ್ದರಿಂದ ತತ್ವಗಳ ಕಸವನ್ನು ರಾಶಿಹಾಕುತ್ತಾರೆ. ಇನ್ನೊಂದು, ಆತ ಬಹಳ ವಾಚಾಳಿ. ನೀವೇ ಯೋಚಿಸಿ, 19 ಪುಟಗಳ ಕವಿತೆಯಿಂದ ಏನು ಉಪಯೋಗ ?

ಪ್ರಶ್ನೆ : ಇದನ್ನು ನಾನು ಅನೇಕ ಕವಿಗಳಲ್ಲಿ ಕಂಡಿದ್ದೇನೆ. ಬಹುಶಃ ಅವರಿಗೆ ಹೇಳಲಿಕ್ಕೆ ನೋವು, ಸಂಕಟ. ಕಳೆದ ಐವತ್ತು ವರ್ಷಗಳ ಮೌಲ್ಯಮಾಪನ ಹೀಗೆ ಬಹಳಷ್ಟಿರಬಹುದು, ಆದರೆ ಓದುಗ ಸುಸ್ತಾಗುತ್ತಾನೆ. ಅವನಿಗೆ ಕಾವ್ಯಕ್ಕಿಂತ ಕತೆಗಳನ್ನು ಓದುವುದು ಒಳ್ಳೆಯದು ಅನ್ನಿಸುತ್ತೆ.

ಉತ್ತರ : ಈ ದೃಷ್ಟಿಯಿಂದ ನಾನು ಬೇರೆಯ ಕವಿಗಳನ್ನು ಅಷ್ಟಾಗಿ ಗಮನಿಸಿಲ್ಲ. ಅದ್ದರಿಂದ ಈ ವಿಷಯವನ್ನು ಈವರೆಗೆ ಯೋಚಿಸಿರಲಿಲ್ಲ. ಅಲ್ಲದೆ ನಾವು ಓದುಗರ ಜೊತೆಗೆ ನೇರ ಸಂಬಂಧವನ್ನೂ ಇಟ್ಟುಕೊಳ್ಳುವುದಿಲ್ಲ. ಇದ್ದಬದ್ದ ಸಂಬಂಧವೂ ಮುರಿದುಹೋಗಿದೆ. ನಾನು 'ಕಿತಾಬೇ ಜುಮರ್ಗ್' ಅಂತ ಒಂದು

ಪತ್ರಿಕೆಯನ್ನು ಹೊರಡಿಸುತ್ತಿದ್ದೆ. ಅದು 36 ಸಂಚಿಕೆಗಳಾದ ಮೇಲೆ ನಿಂತು ಹೋಯಿತು. ನಿಜವಾಗಿ ನಮ್ಮ ಓದುಗರ ಜೊತೆಗೆ ನಮಗೆ ಯಾವ ಸಂಬಂಧವೂ ಇಲ್ಲ. ಯಾವಾಗ ಸಂಬಂಧವಿತ್ತೋ ಆಗಲೂ ನಾನು ಉದ್ದುದ್ದ ಕವಿತೆಗಳನ್ನು ನೋಡಿರಲಿಲ್ಲ. ಆದರೆ ಶಾಹನ ಕಾಲದಲ್ಲಿ ಏನು ರಚನೆಯಾಗುತ್ತಿತ್ತೊ, ಅದರಲ್ಲಿ ಕೆಲವು ವಿಶೇಷ ಘಟನೆಗಳ ಬಗ್ಗೆ ಸೂಚನೆ ಇರುತ್ತಿತ್ತು, ಏಕೆಂದರೆ ನಾವು ಇತಿಹಾಸವನ್ನು ಬರೆಯುತ್ತಿದ್ದೆವು. ನಮ್ಮ ಕಾವ್ಯ ಅದಕ್ಕೆ ಸಾಕ್ಷಿಯಾಗಿರುತ್ತಿತ್ತು. ನಮ್ಮ ರಾಷ್ಟ್ರವೇ ಸಹನಶೀಲವಾಗಿದೆ.

ಆದ್ದರಿಂದ ತಾರೀಖೇ ನಮ್ಮ ಪ್ರಮಾಣಪತ್ರವಾಗಿತ್ತು ! ನಿಜವಾಗಿ ನಮ್ಮ ತಲೆಯಮೇಲೆ ಆಪತ್ತು ಕಾದಿತ್ತು.

ಐಸ್‌ಲ್ಯಾಂಡಿಕ್  ಸ್ವೀಡಿಷ್  ನಾರ್ವೇಜಿಯನ್

# ಸ್ಕಾಂಡಿನೇವಿಯಾ ಕವಿತೆಗಳು

## 1. ಬೆಳಗಿನ ಹಾಡು

ಮೂಲ : ಅಡಾಲ್‌ಸ್ಟೀನ್ ಕ್ರಿಸ್ಟ್‌ಮುಂಡ್‌ಸನ್
ಅನು : ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ

ಕಣ್ಣಿನ ಬೆಳಕನ್ನು ಮುಳುಗಿಸಿಬಿಡುವ
ಚೆಂದುಟಿ ನಗುವನ್ನೂ ಅಳಿಸಿಬಿಡುವ
ಆಳ ಕರಾಳ ರಾತ್ರಿಗೆ
ತನ್ನದೇ ಬೆಳಕಿದೆ
ತನ್ನದೇ ಉಲ್ಲಾಸವಿದೆ
ಎಂದೂ ಹತ್ತದ ಬೆಳಕಿನ ಹೊಳಪು ಅದು
ಎಲ್ಲೂ ಇಲ್ಲದ ಉಲ್ಲಾಸದ ನಗೆ ಅದು.

## 2. ಅಮೃತಶಿಲೆ

ಈ ಹೆಲೆನಿಕ್ ವೈಭವ
ಈ ರೋಮನ್ ಭವ್ಯತೆ
ನನ್ನ ಮೈಮೇಲಿನ ಕೇವಲ ಒಣಹುಡಿ.

ಒಂದು ದಿನ ಗಾಳಿ
ಅದನ್ನು ಹಾರಿಸಿ ಬಿಡುತ್ತದೆ.

ಇಗೋ ನೋಡು
ಯಾವ ಮರ್ತ್ಯಹಸ್ತವೂ ಸೋಂಕದ ನಾನು

ಇಲ್ಲಿ ಮಲಗಿರುವೆ
ನನ್ನನ್ನರಳಿಸುವ ಪ್ರಭುಸ್ಪರ್ಶಕ್ಕಾಗಿ
ಕಾದಿರುವೆ.

## 3. ವಸಂತಗೀತೆ

ನೇರಳೆ ಹೊಳಪಿನ ಸಂಜೆಯು
ನೀರವ ತಂಗಾಳಿ
ಮುದ್ದಿಸುತ್ತದೆ ನನ್ನ ಚಿತ್ತವನ್ನು.

ಯಾರೂ ತಿಳಿಯರು ನನ್ನ
ಸಂಭ್ರಮ ಪ್ರೀತಿಗಳನ್ನ.

ಪಡೆಯುತ್ತಿದೆ ನನ್ನ ಕವಿತೆ
ಈವರೆಗೂ ದನಿಗೊಳ್ಳದ
ಬಗೆ ಬಗೆ ಸೂಕ್ಷ್ಮಗಳನ್ನ.

## 4. ಮಹಾಯಾತ್ರೆ

ಮೂಲ : ಟಾಮಸ್ ಗುಡ್‌ವಿನ್ ಡ್ರೆಸನ್

ಎಲ್ಲಿ ಶುರುವಾಯಿತೋ ಈ ಯಾತ್ರೆ ಯಾರೂ ತಿಳಿದಂತಿಲ್ಲ ;
ಯಾರ ನಿರ್ದೇಶನ ಇದಕ್ಕೆ ಎನ್ನುವುದೂ ಗೊತ್ತಿಲ್ಲ.
ಹಾಗಿದ್ದೂ ಮೆರವಣಿಗೆಗೆ ಎಲ್ಲಾ ಸೇರಿದ್ದೇವೆ,
ಕೆಲವರು ಅನಾಸಕ್ತರು, ಹಾಗೇ ಉತ್ಸಾಹಿಗಳೂ ಇದ್ದೇವೆ.
ಬಗೆ ಬಗೆ ಗಂಟು ಮೂಟೆ ಸರಕು, ಮರುಧರೆಯ ಭಯಾನಕ ಪಯಣ
ಹೆಜ್ಜೆ ಮೇಲೆ ಹೆಜ್ಜೆ ಇಟ್ಟು ಇಷ್ಟಿಷ್ಟೇ ಸಾಗುತ್ತದೆ,
ಹೆಳವನ ನಿಧಾನಗತಿಯಲ್ಲಿ ಯುಗ ಯುಗ ಸವೆಸುತ್ತ.
ಈ ಮಹಾಯಾತ್ರೆಯ ಗುರಿ ಸಾವಿನ ಬಸಿರಾಗಿದೆ.

## 1. ಸಂಗ್ ಸಂತತಿ

ಮೂಲ : ಗುನ್ನಾರ್ ಏಕ್‌ಲೋಫ್
ಅನು : ದೇಶ ಕುಲಕರ್ಣಿ

ನಕ್ಷತ್ರುದ್ದೆ ಬೆಳಕು ಈ ಸಂಜೆ ತುಂಬ
ಗಾಳಿ ತಿಳಿ ತಂಪು,
ಕೋರೈಸುವುದು ಕೆಳಗಿಳಿದು
ಎಲ್ಲೆಲ್ಲು ಹರಿದ ಚಂದ್ರಕಿರಣ

ಕಿಟಕಿ, ಹೂ ಬಿಟ್ಟ ಕೊಂಬೆ
ಅಷ್ಟು ಸಾಕು.
ನೆಲವಿರದೆ ಹೂವಿಲ್ಲ
ನಭವಿರದೆ ನೆಲವಿಲ್ಲ
ಹೂವಿರದೆ ನಭವಿಲ್ಲ

## 2. ಹುಲ್ಲು

ಮೂಲ : ಗೋಸ್ಟ ಫ್ರೈಬರ್ಗ್

ಕಪ್ಪು ನೆಲದಲ್ಲಿ ಬೆಳಕಿನ ಕಿರಣ
ಆಳಕ್ಕೆ, ಇನ್ನೂ ಆಳಕ್ಕೆ ಇಳಿಯುತ್ತ
ಮೇಲು ಮೇಲಕ್ಕೆ ಮಿಂಚುವ ತನಕ.

ಹಸುರು ಮಾಸಿದ
ಬೆಳಕಿನುರಿ
ಮೇಲೇರಿ ಉರಿವ ಕತ್ತಲುರಿಯಲ್ಲಿ
ಲೀನ.

ಒಳಗೆಲ್ಲೋ ಆಟದಲ್ಲಿ
ಕುಲುಕುವುದು–ನೀರು
ಬಂಡೆಯೊಳಗೆ

ದೂರದಲ್ಲಿ
ನೀನು
ತಟ್ಟನೆ ನನ್ನೊಳಗಿಂದ
ಮಾತಾಡಿದಂತೆ

## 3. ಮರ

ಮೂಲ : ಪೀಟರ್ ಕರ್ಮನ್
ಅನು : ಬಿ. ಆರ್. ಲಕ್ಷ್ಮಣರಾವ್

ಬಾಳಲು ಕಲಿಯಬೇಕು
ಮರದಂತೆ
ನಿಂತು
ತೋಳುಗಳನ್ನು ಮೇಲೆತ್ತಿ ಚಾಚಿ
ಪಾದಗಳನ್ನು ನೆಲದಾಳಕ್ಕೆ ಊರಿ
ಅರಿತು
ಎಂಥ ಬಿರುಗಾಳಿಯೂ
ಹರಿದೊಗೆಯಬಹುದಾದ್ದು
ಕೇವಲ
ಕೆಲವು ಎಲೆಗಳನ್ನಷ್ಟೇ
ಬಾಳಿನ ಉಜ್ವಲ
ಮಕುಟದಿಂದ.

## 4. ಕಾಯಿಗಳ ತರ್ಕ

ಮೂಲ : ರೈಡಾರ್ ಎಕ್‌ನರ್

ಸೆಕೊಯಿಯ ಮರ ದೊಡ್ಡದು;
ಆದರ ಕಾಯಿ
ಆ ಮರಕ್ಕೆ ತಕ್ಕದಲ್ಲ ಎನಿಸುವಷ್ಟು,
ಕೂಡಲೇ ಕಣ್ಣಿಗೆ ಸಿಕ್ಕದಷ್ಟು
ಚಿಕ್ಕದು.

ಕ್ಯಾಲಿಫೋರ್ನಿಯ ಪೈನ್ ಚಿಕ್ಕದು ;
ಆದರ ಕಾಯಿ
ಮನುಷ್ಯನ ತಲೆಬುರುಡೆಯಷ್ಟು ದೊಡ್ಡದು ;
ಸೀಸದಂತೆ ಭಾರ
ಹಾಗೂ ಚೂಪಾದ ಬಿರುಸು ಹುರುಪೆಗಳು.
ಅದೂ ಸಹ ತಕ್ಕದಾಗಿ ತೋರುವುದಿಲ್ಲ
ಆ ಚಿಕ್ಕ ಮರಕ್ಕೆ.

ಜೊತೆಗೆ,
ಆ ಕೆಮ್ಮರದ ತುದಿಯಿಂದ
ಅದು ಕಳಚಿ ಬಿದ್ದಾಗ
ಕೆಳಗೆ ಯಾವುದೇ ನತದೃಷ್ಟ ಜೀವಿ
ಸುಳಿದಾಡುತ್ತಿದ್ದರೂ
ಅದರ ಕಥೆ, ಅಷ್ಟೇ.

ಇನ್ನು,
ಮನುಷ್ಯನ ತಲೆಮೇಲೆ ಬಿದ್ದರಂತೂ
ರುಬ್ಬುಗುಂಡಿನಿಂದ
ಮೊಟ್ಟೆ ಜಜ್ಜಿದಂತೆ.

# 1. ಬೆಳಕು ಕತ್ತಲ ನಡುವೆ

ಮೂಲ : ಗನ್ವರ್
ಅನು : ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

ಬೆಳಕು ನುಗ್ಗುತ್ತದೆ
ತೆರೆದ ರೂಮಿನೊಳಕ್ಕೆ
ಮೌನದ ಅಲೆಗಳಂತೆ
ಕೆಂಪು ಕ್ಯಾಕ್ಟಸ್ ಹೂವು ಎಲ್ಲ ಕಡೆ ಚೆಲ್ಲಿವೆ
ನಾಚುತ್ತ ನೋಡಿವೆ ಒಳ ಹರಿವ ಬೆಳಕಿನತ್ತ
ಏನೋ ನಿರೀಕ್ಷಿಸುತ್ತ.

ಹಸಿರು ಎಲೆಗಳ ನಡುವೆ
ಹೆಪ್ಪುಗಟ್ಟಿವೆ ಈಗ
ಆನಂದ ಪಾವಿತ್ರ್ಯ

ಮುಂದೆ ಬರುತ್ತದೆ ರಾತ್ರಿ
ಮೆಲ್ಲಗೆ ಹಾಡಿಕೊಳ್ಳುತ್ತ
ಏನೋ ಪ್ರತೀಕ್ಷೆಯಲ್ಲಿ ಕಾದಿರುವ ಹೂವುಗಳ
ಕಣ್ಣಿಗೆ ಮುತ್ತಿಡುತ್ತ
ಕಂಪಿಸುತ್ತವೆ ಹೂವು ಕಣ್ಣುಮುಚ್ಚುತ್ತ

ಕಿಟಕಿಯಾಚೆಗೆ ಮೇಲೆ
ನೀಲಿಯಾಳಗಳಲ್ಲಿ ಶಾಂತವಾಗಿ
ಜಾರಿ ಸಾಗುತ್ತಿವೆ ಕಪ್ಪು ಮುಗಿಲು,
ಉದ್ದ ಮೆರವಣಿಗೆಯಲ್ಲಿ ಶವದ ಪೆಟ್ಟಿಗೆ ಹಿಂದೆ

ನಡೆವ ವೃದ್ಧರ ಹಾಗೆ
ಭಯವಿರದೆ, ವ್ಯಥೆಯಿರದೆ
ಸಂಧ್ಯಾಶಾಂತಿಯು ತುಂಬಿಕೊಂಡು ಒಳಗೆ

## 2. ಸೈನಿಕ ಆಸ್ಪತ್ರೆಯಲ್ಲಿ ಸಾವು

ಮೂಲ : ಏವಿಂರ್ ಬಾಯ್ಸನ್

ಬೆದರಿ ಕಂಗಾಲಾಗಿ ಮೋಡಗಳ ನಡುವೆ ಓಡುತ್ತಿರುವ ಚಂದ್ರ
ಅವನ ಮೈಮೇಲೆ ಬಾಗಿದ್ದಾಳೆ ರಾತ್ರಿಯ ನರ್ಸು ಆತಂಕದಿಂದ
ಮೈ ತಣ್ಣಗಾಗಿದ್ದ ಗಮನಿಸಿದ್ದಾಳೆ.
ತಳ್ಳು ಮಂಚದ ಚಕ್ರ ಉರುಳುತ್ತಿರುವ ಸದ್ದು ಮಂಕು ಮಿದುಳೊಳಗೆ
ಕೆಲಗಳಿಗೆ ಸ್ತಬ್ಧ. ಬೆಳಿಗ್ಗೆ ನೋಡಿದರೆ
ಹಾಸಿಗೆಯ ತೆಗೆದಿರುವ ಖಾಲಿ ಮಂಚದ ಮೇಲೆ ಸೂರ್ಯ.

ಮುರಿದ ವಾಚಿನ ಗಾಜು ಚೂರು ಸಿಡಿದಿವೆ ಕೆಳಗೆ ನೆಲದ ಮೇಲೆ
ಅನಾಥವಾಗಿದೆ ಯಾರೋ ಬಿಟ್ಟು ಹೋಗಿರುವ 'ಚಿತ್ರವಾರ್ತಾ'
ನಿದ್ದೆ ಮಂಪರಿನಲ್ಲಿ ಕೇಳುತಿದೆ ಯಾರದೋ ಕ್ಷೀಣದನಿ,
"ಯಾರು ಹೋದವರು ?"
ಎಲ್ಲರೂ ನಿದ್ದೆಯಲ್ಲಿದ್ದಾಗ ನಡೆದ ಅವನೊಬ್ಬ ಯೋಧ.

## 3. ಬಿರಿದ ಪರ್ವತ

ಮೂಲ : ಹೆರಾಲ್ಡ್ ವಿ. ಸ್ವೆರ್‌ಡ್ರುಪ್
ಅನು : ಬಿ. ಆರ್. ಲಕ್ಷ್ಮಣರಾವ್

'ಹಾಳಾಗ, ಎಂಥ ರಣ ಬಿಸಿಲು !'
ಬಿರಿಯಿತು ಪರ್ವತ ಚೀರಿ ;
'ಅಲ್ಲ, ತಡಿ' ಎಂದವು ಹೂಹೊದರು
ಬಿರುಕಿಂದ ಆಚೆ ತಲೆ ತೂರಿ.

‘ಹಾಳಾಗ, ಎಂಥ ಬರ ಬಂತು !’
ಸೀಳಿತು ಪರ್ವತ ಬಳಲಿ ;
‘ಅಲ್ಲ, ತಡಿ’ ಎಂದಿತು ಮರಿಹೊನಲು
ಸೀಳಿಂದ ಆಚೆಗೆ ನುಸುಳಿ.

‘ಹಾಳಾಗ, ನರೆ ಬಂತೆ ನನಗೆ ?’
ಮುದುರಿತು ಪರ್ವತ ಹೆದರಿ ;
‘ಅಲ್ಲ, ತಡಿ’ ಎಂದಿತು ಗಾಳಿ
ಚಿಗುರು ಗರಿಕೆ ಮೈ ಸವರಿ.

‘ಎಂಥ ಭಯಾನಕ ನಿಶ್ಶಬ್ದ !’
ಎಂದಿತು ಪರ್ವತ ಅಳುಕುತ್ತ ;
‘ಅಲ್ಲ, ತಡಿ’ ಹಾಡಿತು ಮರಿ ಹೊನಲು
ಕಮರಿಗೆ ಧುಮುಕುತ್ತ.

‘ಸರಿ, ಸರಿ’ ಗೊಣಗಿತು ಶಿಖರ
ಬಾನಿಗೆ ಮೂಗನ್ನು ನೆಟ್ಟು ;
ಚುರು ಚುರುಗುಟ್ಟಿತು ಮೂಗು
ಬಿಸಿಲಿಗೆ ಪೂರ್ತಿಯೇ ಸುಟ್ಟು.

## 4. ನಾ ಸಾಯಬೇಕೆಂದಿದ್ದೆ ನಿನ್ನೆ ರಾತ್ರಿ

ಮೂಲ : ಇಂಗರ್ ಹಾ ಜೆರುಪ್

ನಾ ಸಾಯಬೇಕೆಂದಿದ್ದೆ ನಿನ್ನೆ ರಾತ್ರಿ
ಸಾಯಬೇಕೆಂದಿದ್ದೆ ನಾನು.
ಆದರೆ ಹೆದರಿದೆ ನನ್ನ ಒಬ್ಬಂಟಿತನಕ್ಕೆ,
ಉಬ್ಬರಿಸುವ ಕಡಲಿನಂತೆ ತೋರಿತು
ಕಗ್ಗತ್ತಲು.

ಹಗಲು, ರಾತ್ರಿ, ಈ ನಿರಂತರ ಕಾಲ,
ಈ ನನ್ನ ದೇಹ
ಯಾವ ಪುರುಷಾರ್ಥಕ್ಕೆ
ನೀನಿಲ್ಲದಿರುವಾಗ ?

ನಾ ಸಾಯಬೇಕೆಂದಿದ್ದೆ, ಆದರೆ
ಸಾವು ತೀರಾ ಸನ್ನಿಹಿತವಾಗಿತ್ತು ;
ಅತಿ ದೊಡ್ಡ ಕಣ್ಣುಗಳಿಂದ ಅದು
ನನ್ನತ್ತ ನೋಡಿತು ;
ಅದು ತೊಟ್ಟಿತ್ತು ಕಡುಗಪ್ಪು
ಶೋಕವಸ್ತ್ರ.

## 5. ಇನ್ನೂ ಹುಟ್ಟದ ದೈವ

ಮೂಲ : ಟಾರ್ ಜಾನ್‌ಸನ್
ಅನು : ದೇಶ ಕುಲಕರ್ಣಿ

ಹೃದಯದೊಳಗೊಂದು ಬೀಜ
ಹೃದಯಕ್ಕೋ ಮಂಜಿನ ಕೊರೆತ
ಆ ಬೀಜ—
ನೀನು ಬೈತಿಟ್ಟಿರುವ ಸ್ವರ್ಗದ ಕನಸು

ಮಂಜು ಕರಗುವುದಷ್ಟೆ ಬೆಂಕಿಯಲ್ಲಿ ?
ಓ ಬೆಂಕಿ ! ಉರಿ, ಮತ್ತೆ
ಬದುಕು ಉಸಿರಾಡಿದರೆ
ಎಲ್ಲ ಹರ್ಷೋಲ್ಲಾಸ
ಸಾಚಾ ಜನರಲ್ಲಿ.

ಬಳಲಿ ಬಂದೆವು ನಾವು
ತೀರ್ಥ ಕ್ಷೇತ್ರಕ್ಕೆ
ಇಹದ ವೇಷ ಧರಿಸಿ
ಸದಾ ನೋನುವುದು ಜೀವ
ಇನ್ನೂ ಹುಟ್ಟದ ದೈವಕ್ಕೆ.

## ಏಷಿಯಾ ಖಂಡ

1. ರಷಿಯಾ
2. ಚೈನಾ
3. ಮಂಗೋಲಿಯಾ
4. ಕೊರಿಯಾ
5. ಜಪಾನ್
6. ಫಿಲಿಫೈನ್ಸ್
7. ಇಂಡೊನೇಷಿಯಾ
8. ಮಲೇಸಿಯಾ
9. ಸಿಂಗಪೂರ್
10. ಬರ್ಮಾ
11. ಥೈಲ್ಯಾಂಡ್
12. ವಿಯಟ್ನಾಮ್
13. ಲಾವೊಸ್
14. ಕಾಂಪೂಚಿಯಾ(ಕಾಂಬೋಡಿಯಾ)
15. ಇಂಡಿಯಾ
16. ಪಾಕಿಸ್ತಾನ
17. ಬಾಂಗ್ಲಾದೇಶ
18. ಶ್ರೀಲಂಕ
19. ಬೂತಾನ್
20. ನೇಪಾಲ್
21. ಟಿಬೆಟ್
22. ಆಫ್ಘಾನಿಸ್ತಾನ
23. ಮಾರಿಷಸ್
24. ವಿಯತ್ನಾಂ
25. ಇರಾನ್
26. ಇರಾಕ್
27. ಸೌದಿ ಅರೇಬಿಯಾ
28. ಟರ್ಕಿ
29. ಮಾಲ್ಡೀವ್ಸ್
30. ಇಸ್ರೇಲ್

# ಸಂಪಾದಕೀಯ

ಅನಿಕೇತನದ ಈ ಸಂಚಿಕೆಯಲ್ಲಿ ಏಷಿಯಾ ಸಾಹಿತ್ಯವನ್ನು ವಿಶೇಷವಾಗಿ ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಲಾಗಿದೆ. ಜೊತೆಗೆ ಸ್ಕಾಂಡಿನೇವಿಯಾ ಕವಿತೆಗಳೂ ಇವೆ. ಯುರೋಪಿಯನ್ ಸಾಹಿತ್ಯ ನಮಗೆ ಪರಿಚಯವಿರುವಷ್ಟು ಜಗತ್ತಿನ ಉಳಿದ ಭಾಗಗಳ ಸಾಹಿತ್ಯ ಪರಿಚಯವಿರದಿರುವ ಹಿನ್ನೆಲೆಯಲ್ಲಿ ಈ ಉಪಕ್ರಮ ಸ್ವಾಗತಾರ್ಹ ವೆಂದು ಭಾವಿಸುತ್ತೇವೆ. ಚೀನಾ, ಜಪಾನ್, ಲ್ಯಾಟಿನ್ ಅಮೆರಿಕಾ, ಇಸ್ರೇಲ್ ಸಾಹಿತ್ಯವನ್ನು ಈ ಹಿಂದಿನ ಸಂಚಿಕೆಗಳಲ್ಲಿ ಪರಿಚಯಿಸುವ ಪ್ರಯತ್ನ ಮಾಡಲಾಯಿ ತಷ್ಟೇ ? ಅದಕ್ಕೆ ಪ್ರಸ್ತುತ ಸಂಚಿಕೆ ಪೂರಕವೆಂದು ಭಾವಿಸುತ್ತೇವೆ.

ಈ ಸಂಚಿಕೆಯನ್ನು ಸಿದ್ಧಪಡಿಸುವಲ್ಲಿ ನಮ್ಮ ಲೇಖಕರು ನೀಡಿರುವ ಸಹಕಾರ ವನ್ನು ವಿಶೇಷವಾಗಿ ಇಲ್ಲಿ ನೆನೆಯಬೇಕಾಗಿದೆ. ಹಾಗೆಯೇ, ಅಕಾಡೆಮಿಯ ರಿಜಿಸ್ಟ್ರಾರ್ ಅವರ ಒತ್ತಾಸೆಯನ್ನು ನಾವಿಲ್ಲಿ ನೆನೆಯಬೇಕು. ರಶ್ಮಿ ಮುದ್ರಣದವರು ಅನಿಕೇತನದ ಸಂಚಿಕೆಗಳನ್ನು ಸುಂದರವಾಗಿ ತರುವಲ್ಲಿ ವಹಿಸುತ್ತಿರುವ ಆಸಕ್ತಿಯನ್ನೂ ಪ್ರೀತಿಯಿಂದ ಸ್ಮರಿಸಿ, ಸಂಪಾದಕ ಮಂಡಲಿ ನೇಪಥ್ಯಕ್ಕೆ ಸರಿಯಬಹುದು.

ಎಚ್. ಎಸ್. ವೆಂಕಟೇಶ ಮೂರ್ತಿ
(ಸಂಪಾದಕ ಮಂಡಲಿ ಪರವಾಗಿ)

ಸಂ. 4-1
ಏಪ್ರಿಲ್ 1991 – ಜೂನ್ 1991

# ಅನಿಕೇತನ

ಇದು ಕನ್ನಡೇತರ ಸಾಹಿತ್ಯ ಪರಿಚಯಕ್ಕೆ
ಮೀಸಲಾದ ತ್ರೈಮಾಸಿಕ

ಸಂಪಾದಕರು :

ಬಿ. ವೈ. ಲಲಿತಾಂಬ
ಡಾ. ಆರ್ವಿಯಸ್. ಸುಂದರಂ
ಡಾ. ಎಚ್. ಎಸ್. ವೆಂಕಟೇಶ ಮೂರ್ತಿ

ಚಂದಾ ಹಣವನ್ನು ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ನಂ. 14/3-ಅ, ನೃಪತುಂಗ ರಸ್ತೆ, ಬೆಂಗಳೂರು–560 002 ಇವರಿಗೆ ಕಳುಹಿಸಬೇಕು.